ಪ್ರತಿಭಾ ಗ್ರಂಥಮಾಲೆ, ವರುಷ ೧೬, ಕಿರಣ ೬

---

# ಶಾಂತಿಪಥ

(ಸ್ವತಂತ್ರ ಸಾಮಾಜಿಕ ಕಾದಂಬರಿ)

***

ದಿನೇಶ, ಕುಂದಾಪುರ

***

ಸಮಾಜ ಪುಸ್ತಕಾಲಯ, ಧಾರವಾಡ

ಪ್ರಥಮ ಮುದ್ರಣ
ಎಪ್ರಿಲ್ ೧೯೫೯

ಮುದ್ರಕರು-ಪ್ರಕಾಶಕರು
ಭಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ
ಧಾರವಾಡ.

★

ಬೆಲೆ : ರೂ. ೨·೦೦

## ಮಾಲೆಯ ಮಾತು

★

ಇದೀಗ '.ಮಾಲತೀ-ಮಾಧವ' ಮತ್ತು ಈ 'ಶಾಂತಿಪಥ' ಎರಡನ್ನೂ ಜೊತೆಯಾಗಿ ಕಳಿಸುತ್ತಿದ್ದೇವೆ. ಇವು ಪ್ರತಿಭಾಗ್ರಂಥಮಾಲೆಯ ಈ ವರ್ಷದ ೫-೬ ನೆಯ ಕಿರಣಗಳು. ಈ ವರುಷದಲ್ಲಿ ಇನ್ನೊಂದು ಪುಸ್ತಕವನ್ನು, ಎಂದರೆ ಪ್ರೊ. ಸರೋಜಿನಿ ಮಹಿಷಿ, ಎಂ.ಎ., ಎಲ್‌ಎಲ್.ಬಿ. ಅವರ ಕಥಾಸಂಕಲನವನ್ನು ಕೊಡಬೇಕೆಂದಿದ್ದೇವೆ. ತಮ್ಮ ತಮ್ಮ ಕೃತಿಗಳನ್ನು ನಮ್ಮ ಮಾಲೆಯಲ್ಲಿ ಪೋಣಿಸಲು ಕೊಟ್ಟುದಕ್ಕಾಗಿ ಲೇಖಕರಿಗೆ ಋಣಿಯಾಗಿದ್ದೇವೆ.

— **ಸಂಪಾದಕ**

## ಕಾದಂಬರಿಗೆ ಮೊದಲು

ಈ ಕಾದಂಬರಿಯ ಕಥೆಯನ್ನು ಒಂದು ವಾಸ್ತವಿಕ ಚಿತ್ರವೆನ್ನಬಹುದು. ಮನುಷ್ಯ ತನ್ನನ್ನು ಮರೆತು ಎಲ್ಲಿಯ ವರೆಗೆ ಸೇವಾದೀಕ್ಷೆಯನ್ನು ತಳೆಯ ಬಲ್ಲನೆಂಬುದಕ್ಕೆ ಇದು ಸಾಕ್ಷಿ.

"ಅರಳಿ ಬಾಡುವ ಹೂಗಳೆಷ್ಟೋ, ಆದರೆ ಜಗತ್ತಿನ ಕಣ್ಣಿಗೆ ಬೀಳು ವಂಥವುಗಳೆಷ್ಟು ?" ಎಂಬ ಮಾತನ್ನು ಇಲ್ಲಿ ಸ್ಮರಣೆಗೆ ತಂದುಕೊಳ್ಳಬೇಕು.

ಎಲ್ಲೆಡೆಯಲ್ಲಿಯೂ ಸ್ವಾರ್ಥವೇ ಕಂಡುಬರುತ್ತಿರುವ ಇಂದಿನ ಜಗತ್ತಿನಲ್ಲಿ ಇಷ್ಟೊಂದು ನಿಸ್ವಾರ್ಥ ಸೇವೆ ಸಾಧ್ಯವೇ ಎಂಬ ಸಂಶಯ ಮೂಡುತ್ತದೆ.

ಆಕಸ್ಮಿಕವಾಗಿ ಪಂಜಕ್ಕೆ ಹೋದಾಗ ಬಹು ಪರಿಣಾಮಕಾರಿಯಾಗಿ ನನ್ನ ಮೇಲೆ ಪ್ರಭಾವ ಬೀರಿದ ವ್ಯಕ್ತಿಯ ಜೀವನ ಚಿತ್ರವಿದು. ಈ ಹಿರಿಯ ಜೀವನ ಪರಿಚಯ ಜಗತ್ತಿಗಾಗದಿರಬಾರದು ಎಂದೇ ಅದನ್ನು ಕಾದಂಬರಿಯ ರೂಪದಲ್ಲಿ ಓದುಗರ ಮುಂದಿರಿಸಿದ್ದೇನೆ.

ಅತಿಯಾಸೆಯ ಇಂದಿನ ಪ್ರಪಂಚದಲ್ಲಿ, ಈ ಕಾದಂಬರಿಯಲ್ಲಿ ನಿರೂಪಿಸಿದ ಜೀವನದ ಕುರಿತು, ಇದನ್ನೋದಿದ ಒಬ್ಬನಾದರೂ, ಒಂದೇ ಒಂದು ಕ್ಷಣ ವಿಚಾರ ಮಾಡುವಂತಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಸ್ವಾರ್ಥ, ವೈಮನಸ್ಸು, ಮೋಸ ತುಂಬಿದ ಇಂದಿನ ಜಗತ್ತಿನಲ್ಲಿ ಇಂಥವ ರೊಬ್ಬೊಬ್ಬರಿರುವುದರಿಂದಲೇ, ತುಸುವಾದರೂ ನೆಮ್ಮದಿ ನೆಲಸಿರುತ್ತದೇನೋ !

ಈ ಕಾದಂಬರಿಯಲ್ಲಿನ, ಕಂಪೌಂಡರ್ ರಾಮರಾಯರು, ಗೋಪಾಲ, ಶಾಂತಾ, ರೋಹಿಣಿ, ಇವರೆಲ್ಲ ಪ್ರತಿಯೊಂದು ಊರಿನಲ್ಲಿಯೂ ನಮ್ಮ ಕಣ್ಣಿಗೆ ಕಾಣಸಿಗುವ ಪಾತ್ರಗಳೆಂಬುದರಲ್ಲಿ ಸಂಶಯವಿಲ್ಲ. ಒಂದಕ್ಕೊಂದು ವಿರುದ್ಧ ವಾಗಿ ವಿಚಾರ ಮಾಡುತ್ತಿದ್ದರೂ, ಅವರೆಲ್ಲರೂ ಜೊತೆಗೂಡಿ ಬಾಳಬೇಕಾಗಿ ಬಂದಾಗ, ಆ ಬದುಕಿನಲ್ಲಿ ಬಹು ಸ್ವಾರಸ್ಯವಿರುತ್ತದೆ.

ಅವರ ವಿಚಾರಸರಣಿ, ಬದುಕು, ನಮ್ಮ ಇಂದಿನ ಸಮಾಜ ಜೀವನದ ವಿಶ್ಲೇಷಣೆಯೆಂಬುದನ್ನು ಯಾರೂ ವಿಚಾರ ಮಾಡುವುದಿಲ್ಲ. ಮನುಷ್ಯನ ಸ್ವಾರ್ಥಪರಾಯಣತೆಗೆ ಇದೊಂದು ನಿದರ್ಶನ ಪ್ರತಿಯೊಬ್ಬನಿಗೂ ತನ್ನನ್ನುಳಿದು ಜಗತ್ತಿನ ಇತರ ವಸ್ತುಗಳೂ ವ್ಯಕ್ತಿಗಳೂ ಅಮುಖ್ಯ. ಹಾಗಿರುವುದರಿಂದಲೇ ಜೀವಮಾನಕಾಲದಲ್ಲಿ ನಾವು ತಿಳಿದುಕೊಳ್ಳುವ ವಿಚಾರ ಬಹು ಕಡಿಮೆ.

ಈ ನನ್ನ 'ಶಾಂತಿಪಥ' ಕಾದಂಬರಿಯಲ್ಲಿ ನಾನು ಹೊಸತೇನನ್ನೂ ಬೋಧಿಸಲು ಹೊರಟಿಲ್ಲ. ನಮ್ಮಲ್ಲಿಯೇ ಇದ್ದು, ಕಣ್ಣಿಗೆ ಕಾಣಿಸದಿರುವ ಹಲವು ವಿಚಾರಗಳ ಕಡೆ ಓದುಗರ ಗಮನ ಸೆಳೆಯುವ ಪ್ರಯತ್ನ ಮಾಡಿದ್ದೇನೆ. ಇದರಲ್ಲಿನ ಪಾತ್ರ ಸೃಷ್ಟಿಯಲ್ಲಿ ಬೇಕಷ್ಟು ಕೊರತೆಗಳಿರಬಹುದು. ಓದುಗರು ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದಲ್ಲಿ ನನ್ನ ಮುಂದಿನ ಕಾದಂಬರಿಗಳಲ್ಲಿ ಅವುಗಳ ಕುರಿತು ಎಚ್ಚರಿಗೆ ವಹಿಸುತ್ತೇನೆ.

ಇನ್ನು ಕೊನೆಯದಾಗಿ ನನ್ನ ಕಾದಂಬರಿ ಬೆಳಕಿಗೆ ಬರಲು ಸಹಕರಿಸಿದ ನನ್ನೆಲ್ಲಾ ಗೆಳೆಯ-ಗೆಳತಿಯರಿಗೂ ಕೃತಜ್ಞತೆಗಳನ್ನರ್ಪಿಸಿ ಇದನ್ನು ಪ್ರಕಟನೆಗೆ ತೆಗೆದುಕೊಂಡ ಪ್ರತಿಭಾ ಗ್ರಂಥಮಾಲೆಯ ಸಂಚಾಲಕರಿಗೂ ಆಭಾರ ಸೂಚಿಸಿ, ಈ ನನ್ನ ಚಿಕ್ಕ ಕಾದಂಬರಿಯನ್ನು ಓದುಗರ ಕೈಯಲ್ಲಿರಿಸುತ್ತೇನೆ.

ಗಣಪತಿ ದೇವಸ್ಥಾನ ರಸ್ತೆ,
ಮಂಗಳೂರು–೧

**ದಿನೇಶ್**

# ಶಾಂತಿಪಥ

## ೧

ರಾತ್ರೆಯಿಡೀ ನಿದ್ದೆಯಿಲ್ಲದೆ ಅಂದು ನಸುಕಿನಲ್ಲೇ ಎದ್ದು ಅವರು ಹೊರಗೆ ಬಂದಿದ್ದರು. ಮನೆಯ ಜಗಲಿಯ ಮೇಲೆ ನಿಂತು ಎದುರು ಮನೆಯ ಕಡೆಗೆ ಕಣ್ಣು ಹೊರಳಿಸಿದರು.

ಬೆಳಗಾಗ ಬೇಕಾದರೆ ಅಲ್ಲಿ ಗದ್ದಲ ಆರಂಭವಾಗಿತ್ತು. ದೊಡ್ಡ ಮದುವೆಯ ಚಪ್ಪರ ಹಾಕಿದ್ದರು. ಹೊಸತಾಗಿ ಬಂದ ನೆಂಟರ ಗಲಾಟೆ ಕೇಳಿಸುತಿತ್ತು. ಎದುರು ಮನೆಯ ಹುಡುಗಿಗೆ ನಾಳೆ ಮದುವೆ.

ರಾಮರಾಯರು ನಿಂತಲ್ಲಿಯೇ ನಿಂತು ಎದುರು ಮನೆಯ ವಾತಾವರಣವನ್ನು ಒಂದು ಕ್ಷಣ ಈಕ್ಷಿಸಿದರು. ಕ್ಷೀಣವಾದ ಮಂದಹಾಸದೊಂದಿಗೆ ದೀರ್ಘವಾದ ನಿಟ್ಟುಸಿರೊಂದು ಅವರ ಹೃದಯಾಂತರಾಳದಿಂದ ಹೊರಟು ವಿಶ್ವದನಂತಾಕಾಶದಲ್ಲಿ ಲೀನವಾಯಿತು— ಹೃದಯ ಕಂಪಿಸಿತು. ಹೆಚ್ಚು ಹೊತ್ತು ಅವರಿಂದ ಅಲ್ಲಿಯೇ ನಿಲ್ಲಲಾಗಲಿಲ್ಲ. ಒಳಗೆ ನಡೆದುಬಿಟ್ಟರು.

ಅವರ ತಮ್ಮ ಗೋಪು ಆಗಲೇ ಎದ್ದು ಹಾಸಿಗೆಯ ಮೇಲೆ ಕುಳಿತು ಕಣ್ಣು ಉಜ್ಜಿಕೊಳ್ಳುತ್ತಿದ್ದ. ತಂಗಿ ಶಾಂತಾ ಬೆಳಗಿನ ಗಂಜಿಯೂಟದ ಸಿದ್ಧತೆ ಮಾಡುತ್ತಿದ್ದಳು.

“ ಗೋಪೂ, ನಾಳೆಯೇ ನಾವು ಇಲ್ಲಿಂದ ಹೊರಡಬೇಕಾಗಿದೆ. ”

ಗೋಪೂ ಆಶ್ಚರ್ಯದಿಂದ ಅಣ್ಣನ ಮುಖವನ್ನೇ ನೋಡಿದ. ಅವರಾಡಿದ ಮಾತಿನ ಅರ್ಥವಾಗದವರಂತೆ ಅವರನ್ನೇ ನೋಡಿದ.

“ ಪಂಜದ ಡಾಕ್ಟರರಿಗೆ ಒಬ್ಬ ಕಂಪೌಂಡರನ ಅಗತ್ಯವಿದೆಯಂತೆ. ಅವರು ನನ್ನ ಪರಿಚಿತರು, ನಿನ್ನೆಯೇ ಅವರ ಪತ್ರ ಬಂದಿತ್ತು. ನಾಳೆಯೇ ಹೊರಡಬೇಕಾಗಿದೆ. ”

“ ಎಲ್ಲರೂ ಹೋಗಿ ಅಲ್ಲಿಯೇ ಬಿಡಾರ ಹೂಡುವುದೇ ? ”

" ಹೌದು, ಮತ್ತೆ ನಮಗೆ ಇಲ್ಲೇನು ಕೆಲಸ ; ಎಲ್ಲಿಯಾದರೂ ನೆಮ್ಮದಿಯಿಂದ ಇದ್ದರಾಯಿತು. "

" ಇಲ್ಲಿ ಎಲ್ಲಿಯಾದರೂ ಕೆಲಸ ದೊರೆಯಲು ಸಾಧ್ಯವಿಲ್ಲವೇ ? "

" ಸಾಧ್ಯವಿದ್ದರೂ ನನಗದು ಬೇಡ. ನಾಳೆ ನಸುಕಿನಲ್ಲಿಯೇ ಸಾಮಾನನ್ನೆಲ್ಲ ಕಟ್ಟಿ ಹೊರಟು ಬಿಡಬೇಕು. "

" ಪಂಜಕ್ಕೆ ಬಸ್ಸು ಇಲ್ಲವಲ್ಲ ? "

" ಎರಡು ಎತ್ತಿನ ಗಾಡಿಗಳಿಗೆ ಹೇಳಿರುವೆ. ಸಂಜೆಯೊಳಗೆ ಸಾಮಾನುಗಳನ್ನೆಲ್ಲ ಕಟ್ಟಿ ಸಿದ್ಧವಾಗಿಡು. ನಸುಕಿನಲ್ಲೇ ಇಲ್ಲಿಂದ ಹೊರಡಬೇಕು. "

ಅವರ ದನಿಯುಲ್ಲಿ ನಿರ್ಧಾರವಿತ್ತು.

ಅಣ್ಣನ ನಿರ್ಧಾರದ ಬೆಲೆ ಗೋಪುವಿಗೂ ಚೆನ್ನಾಗಿ ಗೊತ್ತು. ಅವನು ಹೆಚ್ಚಿಗೆ ಮಾತನಾಡುವ ಸಾಹಸ ಮಾಡಲಿಲ್ಲ. ಆದರೂ ಈ ರೀತಿಯ ಆಕಸ್ಮಿಕ ನಿರ್ಧಾರ ಅವನಿಗೆ ಬೇಸರ ಹುಟ್ಟಿಸಿತ್ತು. ಇನ್ನೂ ಎಳೆಯ ಹುಡುಗನಾದ ಅವನಿಗೆ ಪೇಟೆಯ ವಾತಾವರಣವನ್ನು ಬಿಟ್ಟು ಪಂಜದಂಥ ಕಾಡುಕೊಂಪೆಗೆ ಹೋಗಲು ಸ್ವಲ್ಪವೂ ಇಷ್ಟವಿರಲಿಲ್ಲ.

ಆದರೆ ಅಣ್ಣನ ಮಾತು ಮೀರಿ ನಿಲ್ಲುವುದಕ್ಕೂ ಸಾಧ್ಯವಿರಲಿಲ್ಲ. ಅದಕ್ಕೆ ಅವರ ಮೇಲೆ ಅವನಿಗಿದ್ದ ಗೌರವವೇ ಕಾರಣ.

ಹಾಗಿದ್ದರೂ ಅವನ ಎಳೆಯ ಮನಸ್ಸಿನಲ್ಲಿ ಹಲವಾರು ವಿಚಾರಗಳು ಬಂದುಹೋದುವು. ಆದರೂ ಈ ಆಕಸ್ಮಿಕ ನಿರ್ಧಾರದ ಕಾರಣವನ್ನು ಮಾತ್ರ ಊಹಿಸಲಾಗಲಿಲ್ಲ.

ಹೆಚ್ಚಿಗೆ ವಿಚಾರ ಮಾಡುವಷ್ಟು ಅವಕಾಶವೂ ಇರಲಿಲ್ಲ. ಸಂಜೆಯ ಒಳಗೆ ಬಿಡಾರದ ಎಲ್ಲಾ ಸಾಮಾನುಗಳನ್ನೂ ಕಟ್ಟಿ ಪ್ರಯಾಣಕ್ಕೆ ಸಿದ್ಧವಾಗಬೇಕಿತ್ತು.

ಕಣ್ಣುಜ್ಜಿಕೊಳ್ಳುತ್ತ ಮೈಮುರಿದು ಹಾಸಿಗೆ ಬಿಟ್ಟಿದ್ದ. ಅಣ್ಣನ ಅನಿರೀಕ್ಷಿತ ಅಪ್ಪಣೆಯಿಂದ ಅವನ ಉತ್ಸಾಹವೆಲ್ಲವು ಹಾರಿಹೋಗಿತ್ತು. ಆದರೆ ಉಪಾಯವಿಲ್ಲ. ನೆಟ್ಟಗೆ ಅಕ್ಕನ ಬಳಿಗೋಡಿದ.

ಶಾಂತಾ ಗೋಪುವಿಗಿಂತ ಎರಡೇ ವರುಷಕ್ಕೆ ಹಿರಿಯವಳು. ಪ್ರಾಯ ಹದಿನೆಂಟು ಕಳೆದರೂ ಸರಿಯಾದ ಗಂಡು ದೊರೆಯದಿದ್ದುದರಿಂದ ಅವಳ ಮದುವೆ

ಮಾತುವುದು ಸಾಧ್ಯವಾಗಿರಲಿಲ್ಲ.— ರಾಮರಾಯರಿಗೆ ತಂಗಿಯ ಮೇಲೆ ತುಂಬಾ ಪ್ರೀತಿ. ಎಂದೂ ಅವಳ ಮಾತನ್ನು ಮೀರುತ್ತಿರಲಿಲ್ಲ. ಅವಳಾದರೂ ಅಷ್ಟೇ. ಅಣ್ಣನೆಂದರೆ ಪ್ರಾಣ.

ಅವಳು ಹೇಳಿದರೆ ಅಣ್ಣನ ಮನಸ್ಸು ಬದಲಾಯಿಸಬಹುದೇನೋ, ಎಂದು ಗೋಪು ಆಶೆಪಟ್ಟುಕೊಂಡಿದ್ದ.

" ಅಕ್ಕಾ, ಅಣ್ಣನ ಮಾತು ಕೇಳಿದೆಯಾ ? "

ಶಾಂತಾ ತಲೆಯೆತ್ತಿದಳು. ಇನ್ನೂ ಮುಖ ತೊಳೆಯದೇ ಅಡುಗೆಮನೆಯೊಳಗೆ ಬಂದ ಗೋಪುವನ್ನು ಕಂಡು ಅವಳಿಗೆ ನಗು ಬಂದಿತು.

" ಏನೋ ಅದು, ಮುಖ ತೊಳೆಯದೇ ಹಾಗೇ ಓಡಿ ಬಂದೆ ? "

" ಅಣ್ಣನ ಮಾತು ಕೇಳಿದೆಯಾ ? "

" ಏನಂತೆ ? "

" ನಾಳೆಯೇ ನಾವು ಇಲ್ಲಿಂದ ಹೊರಡಬೇಕಂತೆ. "

" ಎಲ್ಲಿಗೆ ? "

" ಪಂಜದಲ್ಲಿ ಅವರಿಗೆ ಕೆಲಸವಿದೆಯಂತೆ. ಬಿಡಾರವನ್ನೇ ಅಲ್ಲಿಗೆ ತೆಗೆದುಕೊಂಡು ಹೋಗಬೇಕಂತೆ. "

" ಅದಕ್ಕೇನು ಹೋದರಾಯಿತು. ನಮಗೆ ಎಲ್ಲಿಯಾದರೇನು, ದಿನ ಕಳೆದರಾಯಿತು. "

ಗೋಪು ನಿರುತ್ತರನಾದ. ಇವಳಾದರೂ ಅಣ್ಣನಿಗೆ ಹೇಳಿ ಪ್ರಯಾಣ ನಿಲ್ಲಿಸಬಹುದೆನ್ನುವ ಆಶೆಯಿಟ್ಟುಕೊಂಡರೆ ಅದೂ ನಿರಾಶೆಯಾಗಬೇಕೇ ?

" ಹಾಗಲ್ಲ ಶಾಂತಕ್ಕ, ಈ ಪಟ್ಟಣ ಬಿಟ್ಟು ಆ ಹಳ್ಳಿಯ ಕಾಡುಕೊಂಪೆಗೆ ಹೋಗಿ ಯಾಕೆ ಸಾಯಬೇಕು ? " ಅನುಮಾನದಿಂದಲೇ ಹೇಳಿದ ಗೋಪು.

" ನಿನಗಿರುವಷ್ಟು ಬುದ್ಧಿ ನಿನ್ನಣ್ಣನಿಗಿಲ್ಲವೆಂದು ಭಾವಿಸಿದೆಯಾ ಗೋಪು, ಅಣ್ಣನ ಮನಸ್ಸನ್ನು ನೀನಿನ್ನೂ ತಿಳಿದುಕೊಂಡಿಲ್ಲ, ಅದಕ್ಕೆಂದೇ ಹೀಗನ್ನುತ್ತಿರುವೆ. ಎಷ್ಟೋ ದಿನಗಳಿಂದ ನಾನವರನ್ನು ನೋಡುತ್ತಿರುವೆ: ಅವರ ಮನಸ್ಸಿಗೆ ನೆಮ್ಮದಿಯಿಲ್ಲ. ಯಾವುದೋ ವ್ಯಥೆಯೊಂದು ಅವರ ಮನಸ್ಸನ್ನು ಕೊರೆಯುತ್ತಿದೆ. ಎಷ್ಟೋ ತಡವೆ ನಾನು ಕೇಳಬೇಕೆಂದು ಪ್ರಯತ್ನ ಪಟ್ಟೆ; ಆದರೂ ಸಾಧ್ಯವಾಗಲಿಲ್ಲ. ಪಂಜಕ್ಕೆ ಹೋಗುವುದರಿಂದ ಅವರ ಮನಸ್ಸಿಗೆ ನೆಮ್ಮದಿ

ಸಿಕ್ಕುವುದಾದರೆ ನಾವೇಕೆ ತಡೆಯಬೇಕು ಹೇಳು."

ಅಕ್ಕನ ಮಾತು ಕೇಳಿ ಗೋಪು ರೇಗಿದ.

" ನಿನಗೇನು, ನಾಳೆ ಮದುವೆಯಾಗಿ ಗಂಡನ ಮನೆಗೆ ಹೋಗುವವಳು. ಆ ಕಾಡು ಕೊಂಪೆಯಲ್ಲಿ ಬಿದ್ದು ಸಾಯಬೇಕಾದವನು ನಾನಲ್ಲವೇ ? "

ತಮ್ಮನ ಮಾತು ಕೇಳಿ ವಿಷಾದದ ನಗೆಯೊಂದು ಅವಳ ಮುಖದ ಮೇಲೆ ಮಿಂಚಿ ಮಾಯವಾಯಿತು.

" ನಾನೇನು ಮಾಡಬೇಕು ಗೋಪು. ಅಣ್ಣನ ನಿರ್ಧಾರವನ್ನು ಬದಲಿಸುವ ಶಕ್ತಿ ನನಗಿದೆಯೇ ? "

" ನೀನು ಹೇಳಿದರೆ ಅಣ್ಣ ಎಂದೂ ಇಲ್ಲವೆನ್ನುವುದಿಲ್ಲ. ಪಂಜಕ್ಕೆ ಹೋಗುವುದು ಬೇಡ ಎಂದು, ಹಟಹಿಡಿದುಬಿಡು. "

" ನಾನು ಹೇಳುವುದಕ್ಕೇನೋ ಹೇಳುವೆ, ಆದರೆ ಅವರು ನನ್ನ ಮಾತನ್ನು ಕೇಳದಿದ್ದರೆ ಮಾತ್ರ ನಾನು ಹೊಣೆಯಲ್ಲ— ಸಾಕು, ಈಗ ಹೋಗಿ ಮುಖ ತೊಳೆದುಕೊಂಡು ಬಾ. "

ಇದ್ದುದರಲ್ಲಿಯೇ ಅವನಿಗೆ ಸಮಾಧಾನವಾಯಿತು. ಅಕ್ಕನ ಮಾತನ್ನು ಅಣ್ಣ ಎಂದೂ ತೆಗೆದು ಹಾಕುವುದಿಲ್ಲ ಎನ್ನುವುದು ಅವನಿಗೆ ಚೆನ್ನಾಗಿ ತಿಳಿದಿತ್ತು.

ಬೆಳಗಿನ ಊಟದ ಹೊತ್ತಾಯಿತು. ಅಣ್ಣ ಪೇಟೆಯ ಕಡೆಗೆ ಹೋದವರು ಬಂದಿರಲಿಲ್ಲ. ಶಾಂತಾ ಬಟ್ಟಲಿಟ್ಟು ತಮ್ಮನಿಗೆ ಬಡಿಸಿದಳು.

ಒಂದರ್ಧ ಗಂಟೆ ಕಳೆದು ರಾಮರಾಯರು ಮನೆಗೆ ಬಂದರು. ಶಾಂತಾ ಅವರಿಗೂ ಬಡಿಸಿದಳು. ಊಟ ಮಾಡುವಾಗ ಅಣ್ಣನ ಮುಖವನ್ನು ನೋಡಿದಳು. ಎಂದೂ ಇಲ್ಲದ ವೇದನೆಯ ಕಳೆ ಅವರ ಮುಖದ ಮೇಲೆ ಮೂಡಿತ್ತು.

" ಅಣ್ಣ, ನಾಳೆ ಪಂಜಕ್ಕೆ ಹೊರಡುವುದೇಕೆ ? "

" ಇನ್ನು ಅಲ್ಲಿಯೇ ಬಿಡಾರ ಮಾಡುವ ನಿರ್ಧಾರ ಮಾಡಿರುವೆ ಶಾಂತಿ. ಯಾಕೆ ನಿನಗೆ ಬೇಸರವಾಯಿತೇ ? "

" ಬೇಸರವೇನಿಲ್ಲ, ಆದರೆ ಇಷ್ಟೊಂದು ಅವಸರವಾಗಿ ಏಕೆ ಹೋಗಬೇಕು ? "

ಉಣ್ಣುವುದನ್ನು ನಿಲ್ಲಿಸಿ ರಾಮರಾಯರು ತಲೆಯೆತ್ತಿ ತಂಗಿಯ ಮುಖವನ್ನೇ ನೋಡಿದರು. ಅವರ ಕಣ್ಣುಗಳಲ್ಲಿ ನೀರು ತುಂಬಿತ್ತು.

" ನಿನ್ನ ಪ್ರಶ್ನೆಗೆ ಉತ್ತರ ಕ[illegible] [illegible] ನನ್ನ ತಂಗಿ " ಎನ್ನು ವಂತಿತ್ತು ಅವರ ನೋಟ.

ಶಾಂತಿಯ ಹೃದಯ ಬಿರಿಯಿತು. ಇಂದಿನ ವರೆಗೆ ಅವಳೆಂದೂ ಅಣ್ಣನ ಕಣ್ಣಲ್ಲಿ ನೀರಾಡಿದ್ದನ್ನು ಕಂಡಿರಲಿಲ್ಲ. ಹೆಚ್ಚೇಕೆ, ಅಪ್ಪ-ಅಮ್ಮ ತೀರಿ ಹೋದಾಗಲೂ ಅವರು ಅತ್ತುದಿಲ್ಲ.

ಅಷ್ಟು ದೃಢಮನಸ್ಸಿನ ಅಣ್ಣನ ಕಣ್ಣಲ್ಲಿ ನೀರು ತುಂಬಿದ್ದನ್ನು ಕಂಡು ಅವಳಿಗೆ ತುಂಬಾ ಬೇಸರವಾಯಿತು. ಮುಂದೆ ಮಾತನಾಡುವ ಸಾಹಸವಾಗಲಿಲ್ಲ. ಮೌನವಾಗಿ ತಲೆತಗ್ಗಿಸಿ ಬಡಿಸಿದಳು.

ತಂಗಿಯ ಮನೋಭಾವ ಅವರಿಗೆ ತಿಳಿಯದಿರಲಿಲ್ಲ. ಆದರೆ ಅವರು ಅಸಹಾಯರು. ತಂಗಿ-ತಮ್ಮಂದಿರ ಸಮಾಧಾನಕ್ಕಾಗಿ ತಮ್ಮ ನಿರ್ಧಾರವನ್ನು ಅವರು ಬದಲಿಸಲು ಸಾಧ್ಯವಿರಲಿಲ್ಲ.

ಪಟ್ಟಣದಲ್ಲಿ ನಿಂತು ತಮ್ಮ ಕಣ್ಣೆದುರಲ್ಲೇ ತಮ್ಮ ಹೃದಯದ ಬಯಕೆಗಳ ಸಮಾಧಿಯಾಗುತ್ತಿರುವುದನ್ನು ನೋಡುವುದು ಅವರಿಂದ ಸಾಧ್ಯವಿರಲಿಲ್ಲ.

ಅವರಿಗೆ ನೆಮ್ಮದಿ ಬೇಕಿತ್ತು. ಜನರಿಲ್ಲದ ಊರನ್ನು ತಮ್ಮ ನೋವು ಮರೆಯುವುದಕ್ಕಾಗಿಯೇ ಅವರು ಆರಿಸಿದ್ದರು.

ಆದರೆ ತಮ್ಮ ನಿರ್ಧಾರದಿಂದ ತಂಗಿಯ ಮನಸ್ಸನ್ನು ನೋಯಿಸಲು ಅವರು ಸಿದ್ಧರಿರಲಿಲ್ಲ. ಶಾಂತಿ ಎಂದರೆ ಅವರಿಗೆ ಅಷ್ಟು ಪ್ರೀತಿ. ಚಿಕ್ಕಂದಿನಿಂದಲೂ ಮನೆಯ ಬೆಳಕೆಂಬಂತೆ ಮುದ್ದಿನಿಂದ ಅವಳನ್ನು ಬೆಳೆಸಿದ್ದರು. ಅಂಥವಳನ್ನು ನೋಯಿಸುವುದು ಅವರ ಶಕ್ತಿಗೆ ಮೀರಿದ ವಿಚಾರ—ಅವಳು ತಲೆತಗ್ಗಿಸಿದುದನ್ನು ಕಂಡು ರಾಮರಾಯರಿಗೆ ಏನು ಮಾಡುವುದೆಂದು ತಿಳಿಯಲಿಲ್ಲ. ಒಂದು ಕ್ಷಣ ಅವಳನ್ನೇ ನೋಡಿದರು.

"ಏಕೆ ಶಾಂತೂ, ಇಲ್ಲಿಂದ ಹೋಗುವುದು ನಿನಗೆ ಮನಸ್ಸಿಲ್ಲವೇ ? "

ಶಾಂತಾ ತಲೆ ಎತ್ತಿ ಅಣ್ಣನ ಮೊಗವನ್ನೇ ನೋಡಿದಳು. ಅಲ್ಲಿ ಮೂಡಿದ ದೈನ್ಯ ಅವಳ ಹೃದಯುವನ್ನು ಕಲಕಿಬಿಟ್ಟಿತು.

" ನನ್ನನ್ನು ಬದುಕಿಸುವ ಹೊಣೆ ನಿನ್ನದು ತಂಗಿ, ಇಲ್ಲಿದ್ದರೆ ನಾನು ಬದುಕಲಾರೆ " ಎಂದು ಸಂಕೇತ ಮಾಡುವಂತೆ ರಾಮರಾಯರು [illegible]ದೃಷ್ಟಿಯಿಂದ ಅವಳನ್ನೇ ನೋಡುತ್ತಿದ್ದರು.

ತನ್ನ ಒಲವಿನ ಅಣ್ಣನಿಗಾಗಿ ಶಾಂತಿ ಯಾವ ತ್ಯಾಗವನ್ನೂ ಮಾಡಲು ಸಿದ್ಧ. ಅವರು ತನ್ನ ಬಳಿ ಧೈರ್ಯ ತೋರಿಸಬೇಕೆ ?

ಆಕೆ ಬಹು ಬೇಗನೆ ಎಚ್ಚತ್ತಳು. ಹೆಣ್ಣು ಜಗತ್ತಿನಲ್ಲಿ ಸಹನೆಯ ಮೂರ್ತಿ, ತ್ಯಾಗದ ಪ್ರತೀಕ. ಅದರಲ್ಲೇ ಆಕೆಗೆ ಮುಕ್ತಿ. ಶಾಂತಾ ಅದಕ್ಕೆ ಹೊರತಾಗಿರಲಿಲ್ಲ.

" ನೀವೇನೂ ಬೇಸರಿಸಬೇಡಿ ಅಣ್ಣ, ಸುಮ್ಮನೆ ಕೇಳಿದೆ. ನಿಮಗಾಗಿ ನಾನು ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧ."

ಅವರಿಗೆ ಮಾತನಾಡಲು ಸಾಧ್ಯವಾಗಲಿಲ್ಲ. ಉಕ್ಕಿಬರುವ ಕಣ್ಣೀರನ್ನು ಹೇಗೋ ಸಹಿಸಿಕೊಂಡು ಎದ್ದು ಹೊರಗೆ ನಡೆದರು.

ವಿಚಾರ ಮಾಡುತ್ತಲೇ ಅವರು ಮನೆಯ ಜಗುಲಿಯ ಮೇಲೆ ಬಂದು ನಿಂತರು. ಎದುರು ಮನೆಯಲ್ಲಿ ಗಲಾಟೆ ನಡೆಯುತ್ತಲೇ ಇತ್ತು. ಹೊಸ ತಾಗಿ ದೂರದ ನೆಂಟರು ಬರುತ್ತಲೇ ಇದ್ದರು. ಸಂತಸದ ನಗು ನಾಲ್ಕೂ ಕಡೆಗಳಿಂದ ಪ್ರತಿಧ್ವನಿಸುತ್ತಿತ್ತು. ಅದನ್ನು ಕೇಳಿದಂತೆ ರಾಮರಾಯರ ಉದ್ವಿಗ್ನತೆ ಹೆಚ್ಚಾಗುತ್ತಿತ್ತು.

ಇಲ್ಲ, ಇಲ್ಲಿ ಒಂದು ಕ್ಷಣ ನಿಲ್ಲುವುದಕ್ಕೂ ನನ್ನಿಂದ ಸಾಧ್ಯವಿಲ್ಲ. ನಾನು ಹುಚ್ಚನಾಗಿಬಿಡುವೆ. ನಾಳೆ ಬೆಳಗಾದ ಕೂಡಲೇ ಹೊರಡಲೇ ಬೇಕು. ದೂರ, ಎದುರು ಮನೆಯ ಗದ್ದಲ ಕೇಳದಷ್ಟು ದೂರಕ್ಕೆ ಹೊರಟು ಹೋಗ ಬೇಕು.

" ಗೋಪೂ, ಗೋಪೂ.... "

ಒಳಗೆ ಸಿಟ್ಟಿನಿಂದ ಕುಳಿತ ಗೋಪು ಹೊರಗೆ ಬಂದ.

" ನಾಳೆ ನಸುಕಿನಲ್ಲೇ ಇಲ್ಲಿಂದ ಹೊರಡಬೇಕು ಗೋಪು, ಒಂದು ದಿನವೂ ತಡೆಯುವಂತಿಲ್ಲ. ಸಾಮಾನುಗಳನ್ನೆಲ್ಲ ಕಟ್ಟಿ ಸಿದ್ಧವಾಗಿರಿಸು. ಬೇಕಾದರೆ ಒಬ್ಬ ಕೂಲಿಯವನನ್ನು ಸಹಾಯಕ್ಕೆ ತೆಗೆದುಕೋ. "

ತಮ್ಮನಿಗೆ ಅಪ್ಪಣೆ ಕೊಟ್ಟವರೇ ಹೊರಗೆ ನಡೆದುಬಿಟ್ಟರು. ಒಂದು ಕ್ಷಣವೂ ಅಲ್ಲಿ ನಿಲ್ಲುವುದಕ್ಕೆ ಅವರಿಂದ ಸಾಧ್ಯವಿರಲಿಲ್ಲ.

ಗೋಪು ನೆಟ್ಟಗೆ ಅಕ್ಕನ ಬಳಿಗೆ ಓಡಿದ. ಶಾಂತಾ ಅಡುಗೆಯ ಮನೆಯಲ್ಲಿ ತಲೆತಗ್ಗಿಸಿ ಕಣ್ಣೊರಸಿಕೊಳ್ಳುತ್ತಿದ್ದಳು.

" ಅಕ್ಕಾ.... " ಅಕ್ಕನ ಅವಸ್ಥೆಯನ್ನು ಕಂಡು ಮುಂದೆ ಮಾತನಾಡಲು ಅವನಿಗೆ ಸಾಧ್ಯವಾಗಲಿಲ್ಲ. ಶಾಂತಾ ಅವನ ಬಳಿಗೆ ಬಂದು ಅವನ ಕೂದಲು ನೇವರಿಸುತ್ತ—

" ಗೋಪು, ನಾನು ನಿನ್ನ ಅಕ್ಕನಲ್ಲವೇ ? "

ಗೋಪು ಆಶ್ಚರ್ಯದಿಂದ ಅವಳ ಮುಖವನ್ನೇ ನೋಡಿದ.

" ನಾನೊಂದು ಮಾತು ಹೇಳುತ್ತೇನೆ ಕೇಳ್ತೀಯಾ ? " ಗೋಪು ಮಾತ ನಾಡಲಿಲ್ಲ, ಮತ್ತೂ ಅವಳನ್ನೇ ನೋಡುತ್ತಾ ನಿಂತ.

" ನೋಡು ಗೋಪು, ಅಣ್ಣನ ಮನಸ್ಸು ತುಂಬಾ ನೊಂದಿದೆ. ಮನ ಸ್ಸಿಗೆ ನೆಮ್ಮದಿ ಸಿಕ್ಕುವುದೋ ಎಂಬ ಆಶೆಯನ್ನಿಟ್ಟುಕೊಂಡು ಅವರು ಇಲ್ಲಿಂದ ಹೊರಡುತ್ತಿರುವರು. ನಮಗಿರುವುದು ಒಬ್ಬರೇ ಅಣ್ಣ. ಅವರನ್ನು ನೋಯಿಸ ಬೇಡ ಕಂಡೆಯಾ ? "

ಶಾಂತಾ ತಮ್ಮನನ್ನು ತಬ್ಬಿಕೊಂಡು ಅಳುತ್ತಿದ್ದಳು. ಅಕ್ಕನ ವರ್ತನೆ ಯನ್ನು ಕಂಡು ಗೋಪುವಿಗೆ ಆಶ್ಚರ್ಯವಾಯಿತು. ಅವಳ ಮೇಲೆ ಅವನಿಗೆ ತುಂಬಾ ಪ್ರೀತಿ. ಅವಳ ಅಳುವನ್ನು ಕಂಡು ಅವನಿಗೆ ತುಂಬಾ ಬೇಸರ ವಾಯಿತು.

" ಹೇಳು ಗೋಪು, ನಾನು ಎಂದಂತೆ ಮಾಡುವೆಯಾ ?" ಅವಳ ಬೇಡಿಕೆ ಯನ್ನು ಪ್ರತಿಭಟಿಸಲು ಅವನಿಂದ ಆಗಲಿಲ್ಲ.

" ಆಗಲಿ ಶಾಂತಕ್ಕ, ನೀವಿಬ್ಬರೂ ಹೇಳಿದ ಮೇಲೆ ನನ್ನದೇನು ? "

" ಹಾಗಲ್ಲ ಗೋಪು, ನೀನು ಸಂತೋಷದಿಂದ ಹೊರಡುವುದಕ್ಕೆ ಸಿದ್ಧ ನಾಗಬೇಕು. ಇಲ್ಲವಾದರೆ ಅಣ್ಣನಿಗೆ ಬೇಸರವಾಗುವುದು. ಆಗ ನೀನು ಹೇಳಿದ ಮಾತನ್ನು, ಅವರೊಡನೆ- ಹೇಳುವುದಕ್ಕೆ ಹೋದೆ, ಅತ್ತುಬಿಟ್ಟರು. ಮುಂದೆ ಮಾತನಾಡಲು ನನಗೆ ಬಾಯಿಯೇ ಬರಲಿಲ್ಲ. "

ಗೋಪು ಸೋತ. ಅಕ್ಕನ ಸ್ನೇಹವನ್ನು ಕಡೆಗಣಿಸುವ ಶಕ್ತಿ ಅವನಿಗಿದ್ದಿಲ್ಲ.

"ಆಗಲಕ್ಕ, ನೀನು ಹೇಳಿದಂತೆ ಮಾಡುವೆ. ಅಣ್ಣನಿಗೆ ನೋವಾಗುವಂತೆ ವರ್ತಿಸುವುದಿಲ್ಲ. "

ಶಾಂತಿ ಕಣ್ಣೊರಸಿಕೊಂಡು ಗೋಪುವಿನ ಗಲ್ಲ ತಟ್ಟಿದಳು.

" ಹಾಗಾದರೆ ಶಾಂತಕ್ಕಾ, ಅವರು ಒಮ್ಮೆಲೆ ಹೊರಡುವುದಕ್ಕೆ ಕಾರಣ ವೇನೆಂದು ಕೇಳಿದೆಯಾ ? "

" ಕೇಳಿದೆ ಗೋಪು. ಅದಕ್ಕೆ ಉತ್ತರ ಕೊಡುವ ಬದಲು ಕಣ್ಣೀರಿನ ಆರತಿಯಾಯಿತು, ಏನು ಮಾಡಲಿ ಹೇಳು ? "

ತನಗಾಗಿ ಮಾಡುವ ಪ್ರಯತ್ನವೆಲ್ಲವನ್ನೂ ಅಕ್ಕ ಮಾಡಿದ್ದಾಳೆ ಎಂದು ಅಭಿಮಾನದಿಂದ ಅವಳನ್ನು ನೋಡಿ ಗೋಪು ಹೊರಟುಹೋದ. ಅಕ್ಕನಿಗಾಗಿ ಅವನು ಸಮ್ಮತಿಸಿದ್ದರೂ ಅವನ ಮನಸ್ಸು ಅದಕ್ಕೆ ಒಪ್ಪಿಗೆಯನ್ನು ಕೊಟ್ಟಿರ ಲಿಲ್ಲ. ಆದರೆ ಅಣ್ಣ ಮತ್ತು ಅಕ್ಕನ ಮನಸ್ಸಿಗೆ ಬೇಸರ ಮಾಡುವುದಕ್ಕೂ ಅವ ನಿಂದ ಸಾಧ್ಯವಿರಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಹೊರಡುವ ಸಿದ್ಧತೆಗಳನ್ನು ಮಾಡತೊಡಗಿದ. ಜೊತೆಗೆ ಒಬ್ಬ ಕೂಲಿಯನ್ನು ತೆಗೆದುಕೊಂಡ. ಯಾಂತ್ರಿಕ ವಾಗಿ ಕೆಲಸ ಮಾಡುವಂತಿತ್ತು ಅವನ ಸ್ಥಿತಿ. ಆದರೆ ಒಂದು ಶಬ್ದವನ್ನೂ ಬಾಯಿಯಿಂದ ಉಚ್ಚರಿಸಲಿಲ್ಲ.

ಸಮಯ ಕಳೆಯಿತು, ಮಧ್ಯಾಹ್ನವಾಯಿತು, ಸಂಜೆಯಾಯಿತು, ಹೊರ ಡುವ ಸಿದ್ಧತೆ ಎಲ್ಲವೂ ಮುಗಿದಿತ್ತು. ಸಂಜೆಯ ಊಟ ಮುಗಿಸಿ ಎಲ್ಲರೂ ಮಲಗುವ ಸಿದ್ಧತೆ ಮಾಡಿದ್ದರು. ಬೆಳಿಗ್ಗೆ ನಸುಕಿನಲ್ಲೇ ಎದ್ದು ಗಾಡಿ ಕಟ್ಟ ಬೇಕಿತ್ತು. ರಾಮರಾಯರು ಎರಡು ಗಾಡಿಗಳಿಗೆ ಹೇಳಿದ್ದರು.

## ೨

ಗೋಪುವಿಗೆ ಮಲಗಿದೊಡನೆ ನಿದ್ದೆ ಬಂದುಬಿಟ್ಟಿತು. ಆದರೆ ಶಾಂತಿಗೂ ರಾಮರಾಯರಿಗೂ ನಿದ್ದೆ ಬರುವಂತಿರಲಿಲ್ಲ.

ಶಾಂತಾ ಚಾಪೆಯ ಮೇಲೆ ಬಿದ್ದುಕೊಂಡು ಕಣ್ಣೀರಿಡುತಿದ್ದಳು. ಎದು ರಿನ ಮನೆಯ ಗದ್ದಲ ಕೇಳಿದಂತೆಲ್ಲ ಅವಳಿಗೆ ತುಂಬಾ ವೇದನೆಯಾಗುತ್ತಿತ್ತು. ಅವಳ ಗೆಳತಿ ಶಾರದೆಗೆ ಮದುವೆ.

ಇಬ್ಬರೂ ಚಿಕ್ಕಂದಿನಿಂದ ಜೊತೆಯಾಗಿ ಬೆಳೆದವರು; ಕೂಡಿ ಆಡಿದವರು; ಜೊತೆಯಾಗಿಯೇ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸಿದ್ದರು. ಆದರೆ ಇಂದು

ಶಾರದೆಯ ಮದುವೆಯ ಸಿದ್ಧತೆ ನಡೆಯುತ್ತಿದೆ. ನಾಳೆ ಅವಳ ಮದುವೆ. ಆಮೇಲೆ....ಆಮೇಲೆ....ಅವಳಿಂದ ಮುಂದೆ ವಿಚಾರ ಮಾಡಲಾಗಲಿಲ್ಲ.... ಕಣ್ಣೀರು ಕೋಡಿಗಟ್ಟಿ ಹರಿಯತೊಡಗಿತು.

"ನಾನು ದುರ್ದೈವಿ....ನನಗೆ ಆ ಭಾಗ್ಯವಿಲ್ಲ...." ಮಲಗಿದಲ್ಲಿಯೇ ಅವಳಿಗೆ ಏನೋ ನೆನಪಾದಂತಾಯಿತು. ಶಾರದಾ ತನ್ನ ಗೆಳತಿ, ಆದರೆ ಮದುವೆಗೆ ತನ್ನಿಂದ ನಿಲ್ಲುವುದಕ್ಕೆ ಸಾಧ್ಯವಿಲ್ಲ. ನಸುಕಿನಲ್ಲೇ ಎದ್ದು ಹೊರಡ ಬೇಕು. ಅವಳನ್ನು ಕಂಡು ಮಾತನಾಡಿಸಬೇಡವೆ? ಇನ್ನು ನಮ್ಮ ಭೆಟ್ಟಿಯಾಗು ವುದು ಯಾವ ಕಾಲಕ್ಕೋ ಏನೋ !

ಮೆಲ್ಲನೆ ಸದ್ದು ಮಾಡದೆ ಎದ್ದು ಪಕ್ಕದ ಮನೆಯ ಕಡೆಗೆ ನಡೆದಳು. ನೆಟ್ಟಗೆ ಅವರ ಮನೆಯೊಳಗೆ ನಡೆದಳು. ಒಳಕೋಣೆಯ ಗೋಡೆಗೊರಗಿ ಕುಳಿತ ಶಾರದೆಯನ್ನು ಕಂಡಳು. ಶಾರದಾ ಅಳುತ್ತಿದ್ದಳು. ಮುಖದ ಮೇಲೆ ಉತ್ಸಾಹವಿರಲಿಲ್ಲ. ಶಾಂತಿಗೆ ಆಶ್ಚರ್ಯ, ನಾಳಿನ ವಧು ಇಂದು ಅಳುವುದೇಕೆ?

ಶಾಂತಿಯನ್ನು ಕಂಡೊಡನೆ ಅವಳ ಅಳು ಹೆಚ್ಚಾಯಿತು. ಓಡಿ ಬಂದು ಗೆಳತಿಯನ್ನು ಅಪ್ಪಿಕೊಂಡಳು.

"ಇದೇನೇ ಶಾರಿ, ನಾಳಿನ ವಧು ಅಳುವುದೇ ?"

"ಹುಂ, ನಾಳಿನ ವಧು" ಎಂದಳು. ನೋವು ತುಂಬಿತ್ತು ಅವಳ ದನಿಯಲ್ಲಿ.

"ಅದೇಕೆ ಹಾಗನ್ನುವೆ ಶಾರಿ. ಈ ಮದುವೆ ನಿನಗೆ ಇಷ್ಟವಿಲ್ಲವೇ ?"

"ಹೆಣ್ಣಿನ ಇಚ್ಛೆ ಅನಿಚ್ಛೆಗಳಿಗೆಲ್ಲ ಬೆಲೆಯೆಲ್ಲಿದೆ ಶಾಂತೂ. ಬಂದುದಕ್ಕೆ ತಲೆ ಕೊಡಬೇಕು. ಅದೇ ನಮ್ಮ ಹಣೆಯಲ್ಲಿ ಬರೆದಿರುವುದು."

"ನಿನ್ನ ಮದುವೆಯನ್ನು ನೋಡುವ ಭಾಗ್ಯ ನನಗಿಲ್ಲ ಶಾರಿ."

"ಏಕೆ ಏನಾಯಿತು ?"

"ನಾಳೆಯೇ ನಾವು ಪಂಜಕ್ಕೆ ಹೊರಡುವೆವು. ನಸುಕಿನಲ್ಲೇ ಗಾಡಿ ಕಟ್ಟುವ ವ್ಯವಸ್ಥೆಯಾಗಿದೆ."

"ಎಲ್ಲರೂ ಹೋಗುವಿರೇನು ?"

"ಹೌದು, ಬಿಡಾರವನ್ನೇ ಅಲ್ಲಿಗೆ ತೆಗೆದುಕೊಂಡು ಹೋಗಬೇಕಂತೆ. ಇದ್ದಕ್ಕಿದ್ದಂತೆ ಅಣ್ಣಾ ಒಂದು ರೀತಿಯಾಗಿಬಿಟ್ಟಿದ್ದಾರೆ."

"ನನಗೇನು ನಿಮ್ಮನ್ನು ತಡೆಯುವ ಶಕ್ತಿಯಿಲ್ಲ ಶಾಂತಾ. ಹೋದೊಡನೆ ಪತ್ರ ಬರೆಯುವುದಕ್ಕೆ ಮಾತ್ರ ಮರೆಯಬೇಡ."

ಶಾರದೆಗೆ ಈ ವಿಷಯ ಆದಷ್ಟು ಬೇಗನೆ ಮುಗಿಯಬೇಕಿತ್ತು. ಅವರ ಮನೆಯ ವಿಚಾರವಾಗಿ ಹೆಚ್ಚು ಉದ್ದಕ್ಕೆ ಮಾತು ಬೆಳೆಸಲು ಅವಳು ಸಿದ್ಧಳಿರಲಿಲ್ಲ.

"ಮದುವೆಯಾಗಿ ಹೊಸ ಗಂಡನ ಜೊತೆಯ ಆಟದಲ್ಲಿ ನನ್ನನ್ನು ಮರೆಯಬೇಡ ಶಾರಿ." ಶಾರದೆ ಮಾತನಾಡಲಿಲ್ಲ. ಗೆಳತಿಯನ್ನು ಅಪ್ಪಿಕೊಂಡು ತುಂಬಾ ಅತ್ತಳು.

"ನಿನ್ನನ್ನು ಮರೆಯುವುದು ನನಗೆ ಸಾಧ್ಯವೇ ಇಲ್ಲ ಶಾಂತಾ" ಎನ್ನುವ ಮನಸ್ಸಾಯಿತು. ಆದರೆ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ.

ಅಳುತ್ತಲೇ ಗೆಳತಿಯರಿಬ್ಬರೂ ಅಗಲಿದರು. ಶಾಂತಾ ಭಾರವಾದ ಮನಸ್ಸನ್ನು ಹೊತ್ತುಕೊಂಡು ಮನೆಗೆ ಹಿಂತಿರುಗಿದಳು.

ಶಾರದೆಯ ಆಕಸ್ಮಿಕ ವರ್ತನೆಯನ್ನು ಕಂಡು ಅವಳಿಗೆ ಆಶ್ಚರ್ಯವಾಗಿತ್ತು. ಅವಳ ಹೃದಯದ ಆಳವನ್ನು ತಿಳಿಯಲು ಸಾಧ್ಯವಾಗದೆ ಹೋದರೂ, ಈ ಮದುವೆ ಅವಳಿಗೆ ಇಷ್ಟವಿಲ್ಲವೆನ್ನುವುದು ಅವಳಿಗೆ ಖಚಿತವಾಗಿತ್ತು.

ಮನೆಗೆ ಬಂದು ಮಲಗಿದವಳಿಗೆ ತುಂಬಾ ಹೊತ್ತಿನ ವರೆಗೆ ನಿದ್ದೆಯೇ ಬರಲಿಲ್ಲ.

ರಾಮರಾಯರು ತಮ್ಮ ಕೋಣೆಯಲ್ಲಿ ಬಿದ್ದುಕೊಂಡಿದ್ದರು. ಅವರಿಗೂ ನಿದ್ದೆ ಬರುವಂತಿರಲಿಲ್ಲ; ಅವರ ಹೃದಯ ತುಂಬಾ ಅಧೀರವಾಗಿತ್ತು. ಬಯಸದ ಘಟನೆಯೊಂದು ಅವರ ಹೃದಯವನ್ನು ಹಿಂಡಿ ಹಿಪ್ಪೆಮಾಡಿತ್ತು.

ಅವರು ಜೀವನದಲ್ಲಿ ಬಯಸಿದ ಮೊದಲ ಬಯಕೆ, ನಿರಾಶೆಯಲ್ಲಿ ಕೊನೆಗೊಂಡಿತ್ತು. ಎದುರುಮನೆಯಲ್ಲಿಯ ಗಲಾಟೆ ಜೋರಾಗಿ ಕೇಳಿದಂತೆಲ್ಲ ತನ್ನನ್ನು ಯಾರೋ ಚೂರಿಯಿಂದ ಇರಿಯುತ್ತಿರುವಂತೆ ಭಾಸವಾಗುತ್ತಿತ್ತು.

ಒಂದಿಷ್ಟು ಹೊತ್ತು ಮೌನವಾಗಿ ಕಳೆಯಿತು. ಒಮ್ಮಿಂದೊಮ್ಮೆ ಅಸ್ಪಷ್ಟವಾಗಿ ಯಾರೋ ಅಳುತ್ತಿರುವ ಸದ್ದು ಕೇಳಿಸಿತು. ಅದು ಎದುರು ಮನೆಯಿಂದ ಕೇಳಿಸುತ್ತಿತ್ತು. ಯಾರು, ಶಾರದೆ ಅಳುತ್ತಿರಬಹುದೇ? ಛೆ, ಅವಳೇಕೆ ಅಳಬೇಕು? ನಾಳೆ ಅವಳ ಮದುವೆ. ಈ ಸಂಭ್ರಮದ ಸಮಯದಲ್ಲಿ ಅವಳೇಕೆ ಅಳಬೇಕು?

ನನ್ನದೇ ಹುಚ್ಚು. ನೆಮ್ಮದಿಯಿಲ್ಲದ ಮನಸ್ಸಿಗೆ ಏನೇನೋ ಕೇಳಿಸುತ್ತಿದೆ. ಒಂದಿಷ್ಟು ಹೊತ್ತು ಮೌನವಾಗಿ ಕುಳಿತರು. ಬಿಕ್ಕಿ ಬಿಕ್ಕಿ ಅಳುತ್ತಿರುವ ಸದ್ದು ಮತ್ತೂ ಕೇಳಿಸುತ್ತಿತ್ತು. "ಹೌದು, ತನ್ನದು ಭ್ರಮೆಯಲ್ಲ; ಎದುರು ಮನೆಯಲ್ಲಿ ಯಾರೋ ಅಳುತ್ತಿದ್ದಾರೆ. ಆದರೆ ಯಾರು? ಶಾರದೆಯೇ ಇರಬೇಕು. ಆದರೆ ಕಾರಣ? ಈ ಮದುವೆ ಅವಳಿಗೆ ಇಷ್ಟವಿಲ್ಲವೇ?"

ಹುಡುಗ ಸುಂದರ, ಶ್ರೀಮಂತ. ಹಾಗಿದ್ದೂ ಅವಳಿಗೆ ಒಪ್ಪಿಗೆಯಾಗದಿರಲು ಕಾರಣವೇನು?

ಇಲ್ಲ, ಹಾಗಿರಲಾರದು. ನನ್ನದೇ ಭ್ರಮೆ. ಮುಂದೆ ವಿಚಾರ ಸಾಗಲಿಲ್ಲ; ಹೃದಯವನ್ನು ಯಾರೋ ಒತ್ತಿ ಹಿಸುಕಿದಂತಾಯಿತು. ಕಣ್ಣುಗಳು ಹನಿಗೂಡಿದುವು; ಆದರೂ ಉಕ್ಕಿಬರುವ ದುಃಖವನ್ನು ಹೇಗೋ ತಡೆದುಕೊಂಡರು. ನಾನೇಕೆ ದುಃಖಪಡಬೇಕು; ಭಾಗ್ಯದಲ್ಲಿ ಬರೆದಂತಾಗುವುದು.

ಎಷ್ಟು ಪ್ರಯತ್ನಪಟ್ಟರೂ ಅವರಿಗೆ ನಿದ್ದೆ ಬರುವಂತಿರಲಿಲ್ಲ.

"ದೇವಾ, ನನಗೆ ಸಹಿಸುವ ಶಕ್ತಿಯನ್ನು ಕೊಡಲಾರೆಯಾ. ಕಳೆದುಹೋದ ನನ್ನ ನೆಮ್ಮದಿಯನ್ನು ಹಿಂತಿರುಗಿಸಲಾರೆಯಾ?" ಇದು ಅವರ ಕೊನೆಯ ಮೊರೆ.

ಸಹಿಸುವ ಶಕ್ತಿಯನ್ನು ದೇವರು ಕೊಡದಿದ್ದರೂ ಅವರದನ್ನು ರೂಢಿಸಿಕೊಳ್ಳಬೇಕು. ಇಲ್ಲವಾದರೆ ಅವರಿಂದ ಬದುಕಿರುವುದಕ್ಕೆ ಸಾಧ್ಯವಿಲ್ಲ.

ಆದರೆ ನೆಮ್ಮದಿ? ಅದು ಅವರ ಪಾಲಿಗೆ ಕನಸಿನ ಮಾತು. ಈ ಜನ್ಮದಲ್ಲಿ ಅವರಿಗಿನ್ನು ನೆಮ್ಮದಿ ದೊರೆಯಲು ಸಾಧ್ಯವಿಲ್ಲ.

ಮಲಗಿದಲ್ಲಿಯೇ ಹೊರಳಾಡುತ್ತಾ ಬೆಳಗಾಗುವುದನ್ನೇ ಕಾಯತೊಡಗಿದರು. ಗಂಟೆ ಆಗಲೇ ಹನ್ನೆರಡು ಕಳೆದಿತ್ತು. ಹೊರಡುವುದಕ್ಕೆ ಇನ್ನೂ ನಾಲ್ಕು ಗಂಟೆಗಳ ಕಾಲಾವಕಾಶವಿದೆ. ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಕಾಣಿಸುತ್ತಿತ್ತು.

ಗಂಟೆಗಳು ಒಂದೊಂದಾಗಿ ಕಳೆದುವು. ಹೇಗೂ ಮೂರು ಗಂಟೆಯಾಯಿತು; ಇನ್ನು ಮಲಗುವುದಕ್ಕೆ ಸಾಧ್ಯವಿಲ್ಲ, ಎದ್ದರು. ನಿದ್ದೆಯಿಲ್ಲದೆ ತಲೆ ಭಾರವಾಗಿತ್ತು. ಮೆಲ್ಲನೆ ಸಾವರಿಸಿಕೊಂಡು ಹೊರಜಗುಲಿಗೆ ಬಂದರು.

ಎದುರು ಮನೆಯಲ್ಲಿ ಆಗಲೇ ಗದ್ದಲಕ್ಕೆ ಪ್ರಾರಂಭವಾಗಿತ್ತು. ನಾಲ್ಕಾರು

ಗ್ಯಾಸ್‌ಲಾಯಿಟುಗಳನ್ನು ಹೊತ್ತಿಸಿದ್ದರು. ಅಂದು ಶಾರದೆಯ ಮದುವೆ.

ಇನ್ನು ಒಂದು ಕ್ಷಣವೂ ಅವರಿಗೆ ಅಲ್ಲಿ ನಿಲ್ಲುವ ಮನಸ್ಸಾಗಲಿಲ್ಲ. ಅದೇ ಹೊತ್ತಿಗೆ ಅವರು ಹೇಳಿಕಳುಹಿಸಿದ ಗಾಡಿಗಳೆರಡೂ ಎತ್ತಿನ ಗೆಜ್ಜೆಯ ಸದ್ದು ಮಾಡುತ್ತಾ ಮನೆಯಂಗಳದಲ್ಲಿ ಬಂದು ನಿಂತುವು.

“ಗೋಪೂ ಗೋಪೂ....” ಗೋಪು ಕಣ್ಣುಜ್ಜಿಕೊಳ್ಳುತ್ತ ಎದ್ದು ಹೊರಗೆ ಬಂದ. ಅಂಗಳದಲ್ಲಿ ಗಾಡಿಗಳು ನಿಂತಿರುವುದು ಕಂಡಿತು.

ಮುಂದಿನದು ತಿಳಿದೇ ಇತ್ತು. ಶಾಂತಾ ಆಗಲೇ ಎದ್ದು ಸಿದ್ಧವಾಗಿದ್ದಳು; ಅವಳಿಗೂ ರಾತ್ರೆಯಿಡೀ ನಿದ್ದೆಯಿಲ್ಲ.

ಸಾಮಾನುಗಳನ್ನು ಗಾಡಿಗೆ ಸಾಗಿಸಿದರು. ಗಂಟೆ ನಾಲ್ಕಾಗಬೇಕಾದರೆ ಎಲ್ಲವೂ ಸಿದ್ಧವಾಗಿತ್ತು; ಮೂವರೂ ಗಾಡಿಯಲ್ಲಿ ಕುಳಿತುಕೊಳ್ಳಲು ಹೊರಟರು.

ಹುಟ್ಟಿದ ಊರು, ಮನೆಯನ್ನು ಬಿಟ್ಟು ಹೊರಡುವುದು ಅಷ್ಟು ಸುಲಭವಾಗಿರಲಿಲ್ಲ. ಚಿಕ್ಕಂದಿನಿಂದ ಆಡಿ ಕುಣಿದಾಡಿದ ಮನೆ.

ಮೂವರೂ ಅಳುತ್ತಾ ನಿಂತಿದ್ದರು; ಹೃದಯಗಳು ಭಾರವಾಗಿದ್ದುವು. ಆ ಅಳುವಿನ ಹಿಂದುಗಡೆಯಿರುವ ನೋವು ಎಂತಹುದೆಂದು ಅವರಿಗೇ ಗೊತ್ತು. ಮೂವರ ಹೃದಯಗಳೂ ನೋವಿನಿಂದ ತತ್ತರಿಸಿ ಹೋಗಿದ್ದುವು.

ಎದುರು ಮನೆಯ ಮದುವೆಯ ಉತ್ಸಾಹದ ಗದ್ದಲವೇ ಇವರ ಅಳುವಿನ ಸಂಗೀತಕ್ಕೆ ಹಿಮ್ಮೇಳದಂತಿತ್ತು.

“ಶಾಂತಿ, ಸುಮ್ಮನೆ ಅಳುವುದೇಕೆ ಹೇಳು. ಇಂದಿಗೆ ನಮಗೆ ಇಲ್ಲಿಯ ಋಣ ಮುಗಿಯಿತು. ಎಲ್ಲವೂ ವಿಧಿಯಿಚ್ಛೆ.” ಬಾಯಿಂದ ತಂಗಿಗೆ ಸಮಾಧಾನ ಹೇಳಿದರೂ ಅವರ ಕಣ್ಣುಗಳಲ್ಲಿಯೂ ನೀರಾಡುತ್ತಿತ್ತು.

ಶಾಂತಿ ಮಾತನಾಡಲಿಲ್ಲ. ಹೇಗೋ ತಡೆದುಕೊಂಡು ಕಣ್ಣೊರಸಿಕೊಂಡಳು, ಅಣ್ಣನ ಕಣ್ಣಿಗೆ ಕಾಣಿಸದಂತೆ.' ತನ್ನನ್ನು ಇಷ್ಟು ದಿನ ಆಶ್ರಯ ಕೊಟ್ಟು ಸಲಹಿದ ಹಿರಿಯರ ಮನೆಗೆ ಕೈಮುಗಿದಳು.

ಮತ್ತೂ ಹೆಚ್ಚು ಹೊತ್ತು ಅಳುತ್ತಾ ನಿಂತಿರುವಂತಿರಲಿಲ್ಲ. ಮೂವರೂ ಗಾಡಿ ಹತ್ತಿದರು. ಅಯೋಧ್ಯೆಯ ರಾಮ ವನವಾಸಕ್ಕೆ ಹೊರಟಂತಿತ್ತು ಅವರ ಭಾವ.

ನಿಜವಾಗಿಯೂ ಒಂದಿಲ್ಲೊಂದು ರೀತಿಯಲ್ಲಿ ಮೂವರ ಪಾಲಿಗೂ ಅದೊಂದು ವನವಾಸವೇ.

ಎಂದೂ ಕಾಣದ ಊರಿಗೆ, ಹುಟ್ಟಿದ ಮನೆ ಊರು ಎಲ್ಲವನ್ನೂ ಬಿಟ್ಟು ಒಮ್ಮೆಲೇ ಹೊರಡುವುದೆಂದರೆ ಅದು ವನವಾಸವಲ್ಲದೆ ಮತ್ತೇನು ?

ಬೆಳಗಿನ ಶಾಂತ ವಾತಾವರಣದಲ್ಲಿ ಗಾಡಿಗಳು ಸಾಗುತ್ತಿದ್ದುವು. ಇನ್ನೂ ಬೆಳಕು ಹರಿದಿರಲಿಲ್ಲ. ಗಾಡಿಗೆ ಕಟ್ಟಿದ ಲಾಟಾನುಗಳೆರಡು ಎತ್ತುಗಳ ಮುನ್ನಡೆಗೆ ದಾರಿ ತೋರುತ್ತಿದ್ದುವು.

ಪ್ರಕೃತಿ ನಿಶ್ಚಲವಾಗಿತ್ತು. ದಿಗಂತದ ವರೆಗೂ ಗಂಭೀರ ಶಾಂತತೆ ನೆಲಸಿತ್ತು.

ಮೂವರೂ ಗಾಡಿಯ ಒಳಗಡೆ ಮೌನವಾಗಿ ಕುಳಿತಿದ್ದರು. ಒಬ್ಬೊಬ್ಬರ ಮನದಲ್ಲಿ ಒಂದೊಂದು ರೀತಿಯ ವಿಚಾರಗಳು.

ರಾಮರಾಯರ ಮನಸ್ಸಿಗೆ ಮಾತ್ರ ಯಾವ ರೀತಿಯಲ್ಲಿಯೂ ನೆಮ್ಮದಿಯಿಲ್ಲ. ತುಂಬಾ ದೂರದ ವರೆಗೆ ಎದುರು ಮನೆಯ ಗದ್ದಲ ಅವರಿಗೆ ಕೇಳಿಸುತ್ತಿತ್ತು. ಶಾರದೆಯ ಮದುವೆ ; ಮಧ್ಯಾಹ್ನವಾಗಬೇಕಾದರೆ ಅವಳು ಗೃಹಿಣಿಯ ಪಟ್ಟಕ್ಕೇರುವಳು. ಮತ್ತೇಕೆ ಅವಳ ವಿಚಾರ ?

ಅವರು ತಮ್ಮ ವಿಚಾರವನ್ನು ಬೇರೆ ಕಡೆಗೆ ತಿರುಗಿಸಲು ತುಂಬಾ ಪ್ರಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ಬೆಳಕು ಹರಿಯಿತು. ಆದರೂ ರಾಮರಾಯರ ಧ್ಯಾನ ಶಾರದೆಯ ಮನೆಯ ಕಡೆಗೇ ಇತ್ತು.

ಬೇರೆ ಯಾರಿಗೂ ಯಾವ ಶಬ್ದವೂ ಕೇಳಿಸದಿದ್ದರೂ ಅವರಿಗೆ ಮಾತ್ರ ಅವಳ ಮನೆಯಲ್ಲಿ ಮೊಳಗುತ್ತಿದ್ದ ಬೇಂಡು ವಾದ್ಯಗಳ ದನಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅದನ್ನು ಕೇಳಕೂಡದೆಂದು ಕಿವಿಗಳನ್ನು ಮುಚ್ಚಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಗು. ಅವರ ಪ್ರಯತ್ನ ಹೆಚ್ಚಾದಂತೆ ಸದ್ದು ಮತ್ತೂ ಜೋರಾಗಿ ಕೇಳಿಸುತ್ತಿತ್ತು.

ಹುಚ್ಚರಂತಾಗಿಬಿಡುತ್ತಿದ್ದರು. ಸದ್ದು ತಮ್ಮ ಹೃದಯದೊಳಗಿಂದಲೇ ಪ್ರತಿಧ್ವನಿಸುತ್ತಿದೆಯೆಂಬುದನ್ನು ತಿಳಿದುಕೊಳ್ಳಲು ಅಧೀರವಾದ ಅವರ ಮನಸ್ಸಿಗೆ ಸಾಧ್ಯವಾಗಲಿಲ್ಲ.

" ಶಾರದೆಯ ಮನೆಯ ವಾದ್ಯದ ಶಬ್ದ ಕೇಳಿಸುವುದಿಲ್ಲವೇ ಶಾಂತೂ ? "

ಅಣ್ಣನ ಮಾತು ಕೇಳಿ ಶಾಂತಾ ಹಾರಿಬಿದ್ದಳು. ತೀರ ಅನಿರೀಕ್ಷಿತ ಪ್ರಶ್ನೆ, ಮಾತ್ರವಲ್ಲ ತೀರ ಹುಚ್ಚು ಪ್ರಶ್ನೆ. ಆಗಲೇ ಐದಾರು ಮೈಲು ದೂರಕ್ಕೆ ಅವರು ಬಂದಾಗಿತ್ತು. ಇಷ್ಟು ದೂರದ ವರೆಗೆ ಅವರ ಮನೆಯ ವಾದ್ಯದ ದನಿ ಕೇಳಿಸುವುದಕ್ಕೆ ಸಾಧ್ಯವೇ ಇರಲಿಲ್ಲ.

ಅವಳು ಮಾತನಾಡದೆ ಅಣ್ಣನ ಮುಖವನ್ನೇ ನೋಡಿದಳು. ಅಲ್ಲಿ ಮೂಡಿದ ಉನ್ಮಾದ, ನೋವು ಅವಳನ್ನು ನಡುಗಿಸಿತು.

ಅಣ್ಣ ಶಾರದೆಯನ್ನು ಪ್ರೀತಿಸುತ್ತಿರಬಹುದೇ ? ಛೇ, ಹಾಗಿದ್ದರೆ ಅದು ನನಗೆ ತಿಳಿಯದಿರುತ್ತಿತ್ತೇ ?

ಹಿಂದಿನ ರಾತ್ರೆ ಶಾರದೆ ಅತ್ತುದು ನೆನಪಿಗೆ ಬಂತು. ಅದಕ್ಕೂ ಇದಕ್ಕೂ ಸಂಬಂಧವಿರಬಹುದೇ ? ಆದರೂ ಅವಳಿಗೆ ಅನುಮಾನ. ತನಗೆ ತಿಳಿಯದೇ ಅವರಿಬ್ಬರ ಪ್ರೇಮ ಬೆಳೆಯುವುದಕ್ಕೆ ಸಾಧ್ಯವಿಲ್ಲವೆನ್ನುವುದು ಅವಳಿಗೆ ಚೆನ್ನಾಗಿ ತಿಳಿದಿತ್ತು.

ಆದರೂ ಈ ವಿಚಾರವನ್ನು ಅವಳ ಹೃದಯ ಪೂರ್ತಿಯಾಗಿ ಒಪ್ಪುವಂತಿರಲಿಲ್ಲ. ಅಣ್ಣನ ಆಕಸ್ಮಿಕ ಪ್ರಯಾಣ--- ಶಾರದೆಯ ಅಳು— ಮತ್ತು ಈಗಿನ ವಿಚಿತ್ರ ಪ್ರಶ್ನೆ. ಮೂರಕ್ಕೂ ಏನೋ ಸಂಬಂಧವಿದೆಯೆಂದು ಅವಳ ಹೃದಯ ಸಾರಿ ಹೇಳುತ್ತಿತ್ತು. ಆದರೂ ಬಾಯಿಬಿಟ್ಟು ಅವರೊಡನೆ ಕೇಳುವ ಸಾಹಸವಾಗಲಿಲ್ಲ.

ಮತ್ತೊಮ್ಮೆ ತಲೆಯೆತ್ತಿ ಅಣ್ಣನನ್ನು ನೋಡಿದಳು. ಅದೇ ಉನ್ಮಾದ, ನೋವಿನ ಕಳೆ ಎದ್ದು ಕಾಣಿಸುತ್ತಿತ್ತು.

“ ಕನಸು ಕಾಣುತ್ತಿರುವಿರೇನಣ್ಣಾ. ಶಾರದೆಯ ಮನೆ ಆರು ಮೈಲಿಗಳಷ್ಟು ಹಿಂದುಳಿಯಿತು. ಇಷ್ಟು ದೂರಕ್ಕೆ ವಾದ್ಯದ ಶಬ್ದ ಕೇಳಿಸಲು ಸಾಧ್ಯವಿದೆಯೇನು ? ”

ಅವರು ತೀಕ್ಷ್ಣವಾಗಿ ತಂಗಿಯ ಮುಖವನ್ನೇ ನೋಡಿದರು.

“ ನನ್ನನ್ನು ಹುಚ್ಚನೆಂದು ಭಾವಿಸಿದೆಯಾ ಶಾಂತಿ ? ಅದೋ ನೋಡು, ಅಷ್ಟು ಸ್ಪಷ್ಟವಾಗಿ ಸದ್ದು ಕೇಳಿಸುತ್ತಿದೆ. ನನ್ನೊಡನೆ ಸುಳ್ಳು ಹೇಳುತ್ತಿರುವೆ. ”

ಶಾಂತಿಗೆ ದುಃಖವನ್ನು ತಡೆಯಲಾಗಲಿಲ್ಲ. ಕಣ್ಣೀರು ಉಕ್ಕಿ ಬಂದಿತು. “ ರಾತ್ರೆ ನಿದ್ದೆಯಿಲ್ಲದೆ ಪಿತ್ತವಿಕಾರವಾಗಿರಬೇಕಣ್ಣಾ. ಇಲ್ಲಿ ತುಂಬಾ ಜಾಗ

ವಿದೆ, ನನ್ನ ತೊಡೆಯ ಮೇಲೆ ತಲೆಯಿಟ್ಟು ಸುಮ್ಮನೆ ಮಲಗಿ."

"ಇಲ್ಲ ಶಾಂತಿ, ಈ ವಾದ್ಯದ ಗಲಾಟೆಯಲ್ಲಿ ನನಗೆ ನಿದ್ದೆ ಬರುವುದಕ್ಕೆ ಸಾಧ್ಯವಿಲ್ಲ; ನೀನು ಸುಮ್ಮನಿರು."

ಶಾಂತಿ ಅವರನ್ನು ಹಾಗೆಯೇ ಬಿಡಲಿಲ್ಲ. ಒತ್ತಾಯದಿಂದ ಎಳೆದು ಮಲಗಿಸಿದಳು. ಹಣೆಯ ಮೇಲೆ ಮೃದುವಾಗಿ ಕೈಯಾಡಿಸತೊಡಗಿದಳು.

"ನನ್ನಾಣೆ ಅಣ್ಣಾ, ಸುಮ್ಮನೆ ಕಣ್ಣುಮುಚ್ಚಿಕೊಂಡು ಮಲಗಿ." ತಂಗಿಯ ಅಪ್ಪಣೆಯನ್ನು ಅವರಿಂದ ಮೀರಲಾಗಲಿಲ್ಲ. ಸುಮ್ಮನೆ ಕಣ್ಣುಮುಚ್ಚಿಕೊಂಡರು. ಆದರೆ ಸುಲಭವಾಗಿ ನಿದ್ದೆ ಬರುವಂತಿರಲಿಲ್ಲ.

ಅಣ್ಣನ ವರ್ತನೆಯನ್ನು ಕಂಡು ಶಾಂತಿಯ ಹೃದಯ ಅಧೀರವಾಯಿತು. ಹೊಸ ಹೊಸ ವಿಚಾರಗಳು ಹೃದಯವನ್ನು ಹೊಕ್ಕು ಅವಳನ್ನು ನಡುಗಿಸಿದುವು. ಶಾರದೆಗೂ ಅಣ್ಣನಿಗೂ ಏನಾದರೂ ಸಂಬಂಧವಿರಬೇಕು; ಇಲ್ಲವಾದರೆ ಅವಳು ನನ್ನನ್ನು ಕಂಡು ಹಾಗೇಕೆ ಅತ್ತಳು? ಅಣ್ಣ ಹೀಗೆ ಹುಚ್ಚುಚ್ಚಾಗಿ ಏಕೆ, ಬಡಬಡಿಸುತ್ತಿರುವರು?

ಆದರೆ ಅವರೇಕೆ ಅದನ್ನು ಬಾಯಿಬಿಟ್ಟು ಹೇಳಲಿಲ್ಲ. ಅಣ್ಣನೊಡನೆ ಶಾರದೆಯ ಮದುವೆಯಾಗುವುದಕ್ಕೆ ಇದ್ದ ಆತಂಕವಾದರೂ ಏನು? ಇಬ್ಬರಲ್ಲಿಯೂ ಅಷ್ಟೊಂದು ಸಂಬಂಧವಿರುತ್ತಿದ್ದರೆ ನನಗೆ ತಿಳಿಯದಿರುತ್ತಿತ್ತೆ?

ಹಾಗಿರಲಾರದು. ನನ್ನದು ಬರಿಯ ಹುಚ್ಚು ಕಲ್ಪನೆ. ಆದರೂ ಅಣ್ಣನ ಮನಸ್ಸಿನ ಮೇಲೆ ಬಲವಾದ ಆಘಾತವಾಗಿದೆ. ಅವರ ಹೃದಯ ನೊಂದಿದೆ. ಎಷ್ಟು ವಿಚಾರ ಮಾಡಿದರೂ ಅದರ ಸರಿಯಾದ ಕಾರಣವನ್ನು ಊಹಿಸಲು ಅವಳಿಂದ ಸಾಧ್ಯವಾಗಲಿಲ್ಲ.

ಗಾಡಿಗಳು ಸಾಗುತ್ತಲೇ ಇದ್ದುವು. ಬೆಳ್ಳಗೆ ಬೆಳಕು ಹರಿದು ಆಗಲೇ ಸೂರ್ಯೋದಯವಾಗಿತ್ತು. ಗೋಪುವಿಗೆ ಕುಳಿತಲ್ಲಿಯೇ ನಿದ್ದೆ ಬಂದುಬಿಟ್ಟಿತ್ತು. ಇವರಂತೆ ಉದ್ದುದ್ದ ವಿಚಾರ ಮಾಡಲು ಅವನ ಬಳಿ ವಿಷಯವೇನೂ ಇದ್ದಿಲ್ಲ. ಇನ್ನೂ ಹದಿನೈದು ವರುಷದ ಕಿಶೋರ.

ಶಾಂತಿ ಕುಳಿತಲ್ಲಿಯೇ ಒತ್ತಾಯದಿಂದೆಂಬಂತೆ ಅಣ್ಣನನ್ನು ಮಲಗಿಸಿದಳು. ಇವಳ ತಣ್ಣನೆಯ ಕೈಯ ಸ್ಪರ್ಶ ಅವರಿಗೆ ಸುಖಪ್ರದವಾಗಿ ಕಂಡಿರಬೇಕು. ಅಲ್ಲಿಯೇ ನಿದ್ದೆ ಬಂದಿತು; ರಾತ್ರೆಯೂ ಅಷ್ಟು ಚೆನ್ನಾಗಿ ಇದ್ದೆ

ಸಾವಿರಗಟ್ಟಲೇ ವರದಕ್ಷಿಣೆ ಸುರಿಯಬೇಕು. ಅಣ್ಣನಿಗೆ ಆ ಶಕ್ತಿಯಿಲ್ಲ; ಸಾವಿರ ರೂಪಾಯಿ ಜೊತೆಯಾಗಬೇಕಾದರೆ ಇದ್ದ ಚೂರು ಆಸ್ತಿಯನ್ನು ಮಾರಬೇಕು....

ಛೀ ಎಂಥಾ ವಿಚಾರ! ಹಣೆಯಲ್ಲಿ ಬರೆದಷ್ಟೇ ಅಲ್ಲವೇ ದೊರೆಯುವುದು? ವಿಧಿ ನನ್ನ ಹಣೆಯಲ್ಲಿ ಎಂಥಾ ಬದುಕನ್ನು ಬರೆದಿರುವನೋ ಏನೊ? ಸುಮ್ಮನೆ ಇಲ್ಲದ ವಿಚಾರಗಳನ್ನು ಮಾಡಿ ನಾನೇಕೆ ದಣಿಯಬೇಕು?

ಹಣೆಯಲ್ಲಿ ಬರೆದಂತಾಗುವುದು. ಶಾರವೆಯಾದರೂ ಸುಖವಾಗಿರಲಿ. ಅದಕ್ಕಿಂತ ಹೆಚ್ಚಿಗೆ ವಿಚಾರ ಮಾಡುವ ಶಕ್ತಿ ಅವಳಲ್ಲಿರಲಿಲ್ಲ. ಹೆಣ್ಣು ಹೆಂಗಸು ಅಬಲೆ. ಬಂದುದನ್ನು ಎದುರಿಸುವುದೊಂದೇ ಅವಳಿಗುಳಿದಿರುವ ಹಾದಿ. ಅಣ್ಣ ಪಕ್ಕದಲ್ಲಿಯೇ ಕುಳಿತಿದ್ದ. ಹಣೆ ನಿರಿಕಟ್ಟಿತ್ತು; ಮನಸ್ಸಿಗೆ ನೆಮ್ಮದಿಯಿಲ್ಲವೆಂದು ಅವರ ಮುಖವೇ ಹೇಳುತ್ತಿತ್ತು. ತಂಗಿಯ ಕಣ್ಣಿಗದು ಗೋಚರವಾಗದಿರಲಿಲ್ಲ.

ಏನೂ ಆಗಲಿ, ಅಣ್ಣನಿಗಾಗಿಯಾದರೂ ನಾನು ನಗುತ್ತಿರಬೇಕು. ಇಲ್ಲ ವಾದರೆ ಅವರು ನೊಂದುಕೊಳ್ಳುವರು.

"ಪಂಜಕ್ಕೆ ಮುಟ್ಟುವಾಗ ಎಷ್ಟು ಹೊತ್ತಾಗಬಹುದಣ್ಣಾ?" ಅವರ ಗಮನವನ್ನು ಬೇರೆ ಕಡೆಗೆ ತಿರುಗಿಸುವ ಉದ್ದೇಶದಿಂದ ಅವಳು ಮಾತ ನಾಡಿದಳು.

"ಕತ್ತಲಾಗಬಹುದೇನೋ ಶಾಂತೀ. ಏಕೆ, ಆಗಲೇ ದಣಿವಾಯಿತೇ?"

"ಅದಕ್ಕಲ್ಲ, ಸುಮ್ಮನೆ ಕೇಳಿದೆ. ಅಲ್ಲಿ ಯಾರದಾದರೂ ಪರಿಚಯ ವಿದೆಯೇ ನಿಮಗೆ?"

"ಪರಿಚಯವೇನೂ ಇಲ್ಲ. ಡಾಕ್ಟರರ ಪರಿಚಯವಿದೆ."

"ಹಾಗಾದರೆ ನಾವೀಗ ಹೋಗಿ ಇರುವುದೆಲ್ಲಿ?"

"ಅವರು ಏನಾದರೂ ವ್ಯವಸ್ಥೆ ಮಾಡಿರಬಹುದು ಶಾಂತಿ. ಏಕೆ ಗಾಬರಿ ಯಾಯಿತೇನು?"

"ನನಗೇಕೆ ಗಾಬರಿ? ನೀವಿರುವಾಗ ನನಗೇತರ ಯೋಚನೆ?"

ಅವರು ಮತ್ತೆ ತಲೆತಗ್ಗಿಸಿ ವಿಚಾರ ಮಾಡತೊಡಗಿದರು. ಎಷ್ಟೋ ವಿಚಾರಗಳು ಒಂದೊಂದಾಗಿ ಅವರ ಮನಸ್ಸಿನಲ್ಲಿ ಹಾದು ಹೋದುವು.

"ಶಾಂತೂಽಽ..." ಅವಳು ತಲೆಯೆತ್ತಿ ಅಣ್ಣನ ಮುಖವನ್ನು ನೋಡಿ

ಅವರ ಮಾತು ನಿಜವಾಗಿರಬೇಕು. ನಿದ್ದೆಯಿಲ್ಲದಿದ್ದರೆ ಒಮ್ಮೊಮ್ಮೆ ಹಾಗೆಯೇ ಆಗುತ್ತದೆ ಎಂದು ಸಮಾಧಾನ ಮಾಡಿಕೊಂಡಳು.

ಎದುರಿಗೆ ಸಾಧಾರಣ ಪೇಟೆಯ ಮಟ್ಟಿನ ಹೋಟೆಲೊಂದು ಕಂಡಿತು. ಗಾಡಿ ನಿಲ್ಲಿಸಿ ಮೂವರೂ ಹೊಟ್ಟೆ ತುಂಬಾ ಉಪಾಹಾರ ಮಾಡಿದರು. ಒಂದರ್ಧ ಗಂಟೆ ಕಳೆದು ಗಾಡಿಗಳು ಪುನಃ ಮುಂದುವರಿದುವು.

" ಮುಂದಿನ ದಾರಿ ತುಂಬಾ ಕಷ್ಟ ಸ್ವಾಮೀ " ಎಂದ ಗಾಡಿಯವ.

" ಕಷ್ಟವೆಂದರೆ ? "

" ತುಂಬಾ ಏರು-ತಗ್ಗು, ದಾರಿಯಲ್ಲಿ ಕಲ್ಲುಗಳ ರಾಶಿ. "

" ಕತ್ತಲಾಗುವುದರೊಳಗೆ ಪಂಜಕ್ಕೆ ಮುಟ್ಟಬಹುದಲ್ಲವೇ ? "

" ಅದಕ್ಕೇನು ಬಿಡಿ ಸ್ವಾಮೀ, ಹೊತ್ತು ಕಂತುವುದರೊಳಗೆ ನಿಮ್ಮನ್ನು ಅಲ್ಲಿಗೆ ಮುಟ್ಟಿಸಿದರಾಯಿತಲ್ಲ ? "

ಸರಿ, ಗಾಡಿಗಳು ಒಂದೇಸವನೆ ಸಾಗತೊಡಗಿದುವು. ಅವನೆಂದಂತೆ ತುಂಬಾ ಏರು-ತಗ್ಗಿನ ದಾರಿ. ರಸ್ತೆಯ ಎರಡೂ ಪಕ್ಕಕ್ಕೆ ಉದ್ದಕ್ಕೂ ಹರಡಿ ಕೊಂಡಿರುವ ಕಾಡು. ಮಧ್ಯಾಹ್ನದ ಬಿಸಿಲಾದರೂ, ಎತ್ತರವಾಗಿ ಎರಡೂ ಕಡೆಗಳಲ್ಲಿ ಬೆಳೆದು ನಿಂತ ಕಾಡಿನ ಮರಗಳು ಬಿಸಿಲನ್ನು ತಮ್ಮ ಹತೋಟಿಯ ಲ್ಲಿಟ್ಟುಕೊಂಡಿದ್ದುವು.

ಗಾಡಿಯಲ್ಲಿ ಕುಳಿತ ಮೂವರೂ ಮೌನವಾಗಿಯೇ ಕುಳಿತಿದ್ದರು. ಶಾಂತಿಯ ವಿಚಾರ ಶಾರದೆಯ ಮನೆಯತ್ತ ಸಾಗಿತು— ಇಷ್ಟು ಹೊತ್ತಿಗೆ ಅವಳು ಭಾಗ್ಯ ಶಾಲಿಯೊಬ್ಬನ ಮಡದಿಯಾಗಿರುವಳು.

ಇನ್ನು ಅವಳಿಗೆ ಸುಖ; ಅವಳ ಪತಿ ಶ್ರೀಮಂತ, ಸುಂದರ ಯುವಕ. ನಿಜವಾಗಿಯೂ ಶಾರದೆ ಭಾಗ್ಯಶಾಲಿ.

ಅದನ್ನೆಣಿಸುತ್ತಿದ್ದಂತೆ ಅವಳ ಕಣ್ಣುಗಳು ಹಸಿಗೂಡಿದುವು. ತಾನು ಶಾರದೆಯ ಸ್ಥಾನದಲ್ಲಿರುತ್ತಿದ್ದರೆ....ಅದು ಎಂತಹ ಸುಖ, ಇಂದು ಅವಳಂತೆ ನಾನು ಸಿಂಗಾರವಾಗಿ ಮೆರೆದಾಡಬಹುದಿತ್ತು.

ಆದರೆ ನನಗಾ ಭಾಗ್ಯವಿಲ್ಲ; ನಾನು ದುರ್ದೈವಿ. ಸುಖ ನನ್ನ ಹಣೆಯಲ್ಲಿ ಬರೆದಿಲ್ಲ. ಶಾರದೆಗೆ ದೊರೆತಂತಹ ಪತಿ ನನಗೆ ದೊರೆತರೆ ?....ತನ್ನ ವಿಚಾರಗಳ ನ್ನೆಣಿಸಿ ಅವಳಿಗೇ ನಾಚಿಕೆಯಾಯಿತು.

ಸಾವಿರಗಟ್ಟಲೇ ವರದಕ್ಷಿಣೆ ಸುರಿಯಬೇಕು. ಅಣ್ಣನಿಗೆ ಆ ಶಕ್ತಿಯಿಲ್ಲ; ಸಾವಿರ ರೂಪಾಯಿ ಜೊತೆಯಾಗಬೇಕಾದರೆ ಇದ್ದ ಚೂರು ಆಸ್ತಿಯನ್ನು ಮಾರಬೇಕು....

ಛೀ ಎಂಥಾ ವಿಚಾರ! ಹಣೆಯಲ್ಲಿ ಬರೆದಷ್ಟೇ ಅಲ್ಲವೇ ದೊರೆಯುವುದು? ವಿಧಿ ನನ್ನ ಹಣೆಯಲ್ಲಿ ಎಂಥಾ ಬದುಕನ್ನು ಬರೆದಿರುವನೋ ಏನೊ? ಸುಮ್ಮನೆ ಇಲ್ಲದ ವಿಚಾರಗಳನ್ನು ಮಾಡಿ ನಾನೇಕೆ ದಣಿಯಬೇಕು?

ಹಣೆಯಲ್ಲಿ ಬರೆದಂತಾಗುವುದು. ಶಾರದೆಯಾದರೂ ಸುಖವಾಗಿರಲಿ. ಅದಕ್ಕಿಂತ ಹೆಚ್ಚಿಗೆ ವಿಚಾರ ಮಾಡುವ ಶಕ್ತಿ ಅವಳಲ್ಲಿರಲಿಲ್ಲ. ಹೆಣ್ಣುಹೆಂಗಸು ಅಬಲೆ. ಬಂದುದನ್ನು ಎದುರಿಸುವುದೊಂದೇ ಅವಳಿಗುಳಿದಿರುವ ಹಾದಿ. ಅಣ್ಣ ಪಕ್ಕದಲ್ಲಿಯೇ ಕುಳಿತಿದ್ದ. ಹಣೆ ನಿರಿಕಟ್ಟಿತ್ತು; ಮನಸ್ಸಿಗೆ ನೆಮ್ಮದಿಯಿಲ್ಲವೆಂದು ಅವರ ಮುಖವೇ ಹೇಳುತ್ತಿತ್ತು. ತಂಗಿಯ ಕಣ್ಣಿಗದು ಗೋಚರವಾಗದಿರಲಿಲ್ಲ.

ಏನೂ ಆಗಲಿ, ಅಣ್ಣನಿಗಾಗಿಯಾದರೂ ನಾನು ನಗುತ್ತಿರಬೇಕು. ಇಲ್ಲ ವಾದರೆ ಅವರು ನೊಂದುಕೊಳ್ಳುವರು.

"ಪಂಜಕ್ಕೆ ಮುಟ್ಟುವಾಗ ಎಷ್ಟು ಹೊತ್ತಾಗಬಹುದಣ್ಣಾ?" ಅವರ ಗಮನವನ್ನು ಬೇರೆ ಕಡೆಗೆ ತಿರುಗಿಸುವ ಉದ್ದೇಶದಿಂದ ಅವಳು ಮಾತ ನಾಡಿದಳು.

"ಕತ್ತಲಾಗಬಹುದೇನೋ ಶಾಂತೀ. ಏಕೆ, ಆಗಲೇ ದಣಿವಾಯಿತೇ?"

"ಅದಕ್ಕಲ್ಲ, ಸುಮ್ಮನೆ ಕೇಳಿದೆ. ಅಲ್ಲಿ ಯಾರದಾದರೂ ಪರಿಚಯ ವಿದೆಯೇ ನಿಮಗೆ?"

"ಪರಿಚಯವೇನೂ ಇಲ್ಲ. ಡಾಕ್ಟರರ ಪರಿಚಯವಿದೆ."

"ಹಾಗಾದರೆ ನಾವೀಗ ಹೋಗಿ ಇರುವುದೆಲ್ಲಿ?"

"ಅವರು ಏನಾದರೂ ವ್ಯವಸ್ಥೆ ಮಾಡಿರಬಹುದು ಶಾಂತಿ. ಏಕೆ ಗಾಬರಿ ಯಾಯಿತೇನು?"

"ನನಗೇಕೆ ಗಾಬರಿ? ನೀವಿರುವಾಗ ನನಗೇತರ ಯೋಚನೆ?"

ಅವರು ಮತ್ತೆ ತಲೆತಗ್ಗಿಸಿ ವಿಚಾರ ಮಾಡತೊಡಗಿದರು. ಎಷ್ಟೋ ವಿಚಾರಗಳು ಒಂದೊಂದಾಗಿ ಅವರ ಮನಸ್ಸಿನಲ್ಲಿ ಹಾದು ಹೋದುವು.

"ಶಾಂತೂಽಽ..." ಅವಳು ತಲೆಯೆತ್ತಿ ಅಣ್ಣನ ಮುಖವನ್ನು ನೋಡಿ

ದಳು. ದೈನ್ಯ ತುಂಬಿತ್ತು ಮೊಗದಲ್ಲಿ; ಕಣ್ಣುಗಳಲ್ಲಿ ನೀರಾಡುತ್ತಿತ್ತು.

ಛೀ ನಾನು ಪಾಪಿ, ನನ್ನಿಂದಾಗಿ ಅಣ್ಣನಿಗೆ ನೆಮ್ಮದಿಯಿಲ್ಲ ಎಂದು ಮರುಗಿತು ಅವಳ ಮನಸ್ಸು.

"ಏನಣ್ಣ?" ಅವಳ ದನಿಯಲ್ಲಿ ಸ್ವಲ್ಪವೂ ಉದ್ವೇಗವಿರಲಿಲ್ಲ.

"ನಿನ್ನ ಅಣ್ಣ ತುಂಬ ಕೆಟ್ಟವನೆಂದು ಅನಿಸುವುದಿಲ್ಲವೆ ಶಾಂತೂ...." ಶಾಂತಿ ಅವರಿಗೆ ಮುಂದೆ ಮಾತಾಡಗೊಡಲಿಲ್ಲ. ಕೈಯಿಂದ ಅವರ ಬಾಯಿ ಮುಚ್ಚಿದಳು.

"ನೀವು ಇನ್ನು ಮುಂದೆ ಹೀಗೆಲ್ಲಾ ಆಡಿದರೆ ನಿಮ್ಮ ಕಾಲ ಬುಡದಲ್ಲಿಯೇ ಹಣೆ ಜಜ್ಜಿಕೊಂಡು ಸಾಯುವೆ." ಮುಂದೆ ಅವಳಿಂದಲೂ ಮಾತನಾಡಲಾಗ ಲಿಲ್ಲ. ಕಣ್ಣೀರು ಉಕ್ಕಿ ಬಂದಿತು.

ಅಣ್ಣನಿಗೆ ಕಾಣಿಸದಂತೆ ಪಕ್ಕಕ್ಕೆ ಹೊರಳಿ ಪ್ರಯಾಸಪಟ್ಟು ಅದನ್ನೊರಸಿ ಕೊಂಡಳು. ಆದರೂ ರಾಮರಾಯರ ಕಣ್ಣಿಗೆ ಅದು ಗೋಚರವಾಗದಿರಲಿಲ್ಲ. ತಂಗಿಯೆದುರು ಮತ್ತೆ ಮಾತನಾಡುವ ಸಾಹಸವಾಗಲಿಲ್ಲ.

ಎತ್ತುಗಳು ಯಾವ ವಿಚಾರವೂ ಇಲ್ಲದೆ ಸಾಗುತ್ತಿದ್ದುವು. ನಡಿಗೆಯ ಆಯಾಸ ಅವುಗಳ ವೇಗವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿತ್ತು. ಆದರೂ ಯಾವುದರ ಪರಿವೆಯೂ ಇಲ್ಲದೆ ಅವುಗಳು ಸಾಗುತ್ತಲೇ ಇದ್ದುವು.

ಸಂಜೆಯಾಗುತ್ತ ಬಂದಿತ್ತು. ಮಧ್ಯದಲ್ಲಿ ಪುನಃ ಗಾಡಿ ನಿಲ್ಲಿಸಿ ಉಪಾ ಹಾರವಾಯಿತು.

೩

ಕತ್ತಲಾಗಲು ಇನ್ನೂ ಕೆಲವು ಹೊತ್ತು ಉಳಿದಿದೆ ಎನ್ನುವಾಗ ಗಾಡಿಗಳೆ ರಡೂ ಒಂದು ಕಡೆಯಲ್ಲಿ ನಿಂತುವು.

"ಪಂಜ ಬಂತು ಸ್ವಾಮೀ." ಗಾಡಿಯವನ ದನಿ ಒಳಗಿದ್ದವರನ್ನು ಎಚ್ಚರಿಸಿತು.

ಮೂವರೂ ಮೆಲ್ಲನೆ ಕೆಳಕ್ಕಿಳಿದರು. ಕತ್ತಲಾಗಲು ಇನ್ನೂ ಸ್ವಲ್ಪ

ಹೊತ್ತು ಉಳಿದಿತ್ತು. ರಾಮರಾಯರು ಸುತ್ತಲೂ ಕಣ್ಣು ಹೊರಳಿಸಿದರು. ತಾನು ನಿಂತ ಜಾಗ ಒಂದು ಊರು ಎಂದು ಹೇಳಿಕೊಳ್ಳಲು ಸಾಧ್ಯವಿರಲಿಲ್ಲ. ಸುತ್ತಲೂ ಕಣ್ಣಿಗೆ ಕಾಣಿಸುವಷ್ಟು ದೂರಕ್ಕೆ ಕಾಡು ಹಬ್ಬಿಕೊಂಡಿತ್ತು. ಮನುಷ್ಯ ವ್ಯಕ್ತಿಯ ಸುಳಿವೇ ಕಾಣಿಸುತ್ತಿರಲಿಲ್ಲ. ಎಲ್ಲರಿಗಿಂತಲೂ ಸುತ್ತಲಿನ ವಾತಾವರಣವನ್ನು ಕಂಡು ಬೇಸರವಾದುದು ಗೋಪುವಿಗೆ.

“ಇದೆಂಥಾ ಊರಣ್ಣಾ. ಈ ಕಾಡಿನಲ್ಲಿ ಮನುಷ್ಯರಿರುವುದಕ್ಕೆ ಸಾಧ್ಯವಿದೆಯೇ? ನಿನಗೆ ಹುಚ್ಚು. ಬಂದ ಹಾಗೆಯೇ ಹಿಂತಿರುಗೋಣ.”

ಅವರು ತಮ್ಮನ ಮಾತಿನ ಕಡೆಗೆ ಹೆಚ್ಚಿನ ಗಮನ ಕೊಡಲಿಲ್ಲ. ಮಾತ್ರವಲ್ಲ, ಎಲ್ಲವನ್ನೂ ಬಿಟ್ಟು ಹೊರಟು ಬಂದವರು ಮತ್ತೆ ಹಿಂತಿರುಗಲು ಸಿದ್ಧರಾಗಲಿಲ್ಲ.

ಕೆಲವು ನಿಮಿಷ ನಿಂತಲ್ಲಿಯೇ ನಿಂತು ಸುತ್ತಲೂ ನೋಡಿದರು. ಹತ್ತಿರ ಜನವಸತಿಯ ಸುಳಿವೇ ಕಾಣುತ್ತಿರಲಿಲ್ಲ.

“ಪಂಜದಲ್ಲಿ ಪೇಟೆಯಿಲ್ಲವೇ?” ಎಂದು ಗಾಡಿಯವರನ್ನು ಕೇಳಿದರು.

“ಇಲ್ಲಿ ಪೇಟೆಯೆಂದು ಇಲ್ಲ ಸ್ವಾಮೀ, ಸ್ವಲ್ಪ ಮುಂದೆ ಹೋದರೆ ಒಂದು ಹೊಟೇಲು ಮತ್ತು ಚಿಕ್ಕ ಬೀಡಾ ಅಂಗಡಿಯಿದೆ. ಇಲ್ಲಿಯ ಪೇಟೆಯೆಂದರೆ ಅದೇ.”

ರಾಮರಾಯರು ಗಾಡಿಯವನ ಜೊತೆಯಲ್ಲಿ ಮುಂದಕ್ಕೆ ಹೊರಟರು. ಯಾರಾದರೂ ಸಿಕ್ಕಿದರೆ ಡಾಕ್ಟರರ ಮನೆ ಗೊತ್ತು ಹಚ್ಚಬೇಕಲ್ಲವೇ?

ನಾಲ್ಕು ಮಾರು ಹೋಗುವುದರೊಳಗೆ ಮುದುಕನೊಬ್ಬ ಬರುತ್ತಿರುವುದು ಕಂಡಿತು. ತಲೆಗೆ ಕೆಂಪು ಮುಂಡಾಸು ಸುತ್ತಿಕೊಂಡಿದ್ದ.

ಹೊಸಬರನ್ನು ಕಂಡು ಅವನಿಗೆ ಆಶ್ಚರ್ಯವಾಗಿರಬೇಕು. ಇವರನ್ನು ನೋಡುತ್ತ ನಿಂತುಬಿಟ್ಟ.

“ಡಾಕ್ಟರರ ಮನೆ ಗೊತ್ತಿದೆಯೇ ಸ್ವಾಮೀ ನಿಮಗೆ?” ಮುದುಕನಿಗೆ ಲೋಕವೇ ತಲೆಕೆಳಗಾದಂತಾಯಿತು. ಹುಟ್ಟಿದಂದಿನಿಂದ ಇಷ್ಟರ ವರೆಗೆ ಯಾರೂ ಅವನನ್ನು ಸ್ವಾಮೀ ಎಂದು ಕರೆದಿರಲಿಕ್ಕಿಲ್ಲ. ಜೊತೆಯಲ್ಲಿ ಸಂಕೋಚವೂ ಆಯಿತು.

“ಗೊತ್ತಿದೆ ಸ್ವಾಮೀ, ಇಲ್ಲಿಯೇ ಹತ್ತಿರದಲ್ಲಿದೆ. ಬೇಕಾದರೆ ಅಲ್ಲಿಯ

ವರೆಗೆ ಕರೆದುಕೊಂಡು ಹೋಗುತ್ತೇನೆ. ”

ಸರಿ, ಒಂದು ಸಮಸ್ಯೆ ತೀರಿತು. ರಾಮರಾಯರು ತಮ್ಮನನ್ನು ಗಾಡಿಯ ಬಳಿ ನಿಲ್ಲಿಸಿ, ತಂಗಿಯನ್ನು ಕರೆದುಕೊಂಡು ಹೊರಟರು.

ಒರಟು ಕಲ್ಲು-ಮುಳ್ಳುಗಳ ಹಾದಿ. ಶಾಂತಿಯ ಕಾಲಿಗೆ ಒಂದೆರಡು ಮುಳ್ಳು ಚುಚ್ಚಿದರೂ ತೋರಿಸಿಕೊಳ್ಳದೆ ಮುಂದಕ್ಕೆ ನಡೆದಳು.

“ ಮೊದಲು ಇದು ಬಲ್ಲಾಳರ ಬೀಡಿನ ಮನೆಗೆ ಹೋಗುವ ರಸ್ತೆ ಸ್ವಾಮಿ. ಚೆನ್ನಾಗಿ ನಡೆದುಕೊಂಡು ಹೋಗಲು ಸಾಧ್ಯವಿರುವ ಅಗಲವಾದ ರಸ್ತೆಯಿತ್ತು. ಈಗ ಎಲ್ಲವೂ ಹಾಳುಬಿದ್ದಿದೆ. ಅರಮನೆಯಿದ್ದಲ್ಲಿ ಕಾಡು ಬೆಳೆದಿದೆ. ಇಡೀ ಊರಿಗೆ ಊರೇ ಹಾಳುಬಿದ್ದು ಹೋಗಿದೆ ಸ್ವಾಮಿ. ಕೋಟಿ ಚೆನ್ನಯ್ಯರು ಪ್ರತಾಪ ತೋರಿದ ಊರು ಸ್ವಾಮಿ ಇದು. ಅವರು ನಡೆಯು ವಾಗ ನೆಲ ಅದುರುತ್ತಿತ್ತಂತೆ ಕಾಲಗತಿ, ಎಷ್ಟು ಚಂದದ ಊರು ಕಾಡು ಕೊಂಪೆಯಾಗಿ ಹೋಗಿದೆ. ”

ಮುದುಕ ಒಂದೇಸವನೆ ತನ್ನ ಊರಿನ ಗತವೈಭವದ ಚರಿತ್ರೆಯನ್ನು ಅಭಿಮಾನದಿಂದ ಹೇಳುತ್ತಲೇ ಇದ್ದ. ರಾಮರಾಯರಿಗೆ ಪ್ರಯಾಣದ ಆಯಾಸದಲ್ಲಿ ಅವನ ಕತೆ ಕೇಳುವ ಉತ್ಸಾಹವಿರಲಿಲ್ಲ. ಆದರೂ ಹೂಗುಟ್ಟು ತ್ತಲೇ ಸಾಗುತ್ತಿದ್ದರು.

“ ಬಲ್ಲಾಳರು ಈ ದಾರಿಯಾಗಿ ಬರುವಾಗ, ಮೆರವಣಿಗೆ ನೋಡಬೇಕಿತ್ತು ಸ್ವಾಮಿ, ಎಂಥಾ ವೈಭವ! ಆದರೆ ಇಂದು ಇದನ್ನೆಲ್ಲ ಕಂಡರೆ ಅವನ್ನು ನಂಬುವು ದಕ್ಕೆ ಕಷ್ಟವಾಗುತ್ತದೆ. ”

“ ಅದನ್ನೆಲ್ಲಾ ನೀನೇ ಕಂಡಿರುವೆಯಾ ಮುದುಕಪ್ಪ ? ” ಶಾಂತಿ ದನಿ ಗೂಡಿಸಿದಳು.

“ ನಾನು ನೋಡದಿದ್ದರೇನಾಯಿತು ಅಮ್ಮಣ್ಣಿ. ನಮ್ಮ ಅಜ್ಜ ಬಲ್ಲಾ ಳರ ದಂಡಿನ ಹಿರಿ ಬಂಟರಾಗಿದ್ದರಂತೆ. ಅವರ ಬಾಯಿಯಿಂದಲೇ ನಾನೆಲ್ಲ ವನ್ನೂ ಕೇಳಿದ್ದೆ. ”

ತನ್ನ ಹಿರಿಯರ ಕಲಿತನದ ವರ್ಣನೆ ಮಾಡುವಾಗ ಅವನ ನಡಿಗೆಯಲ್ಲಿ ಒಂದು ರೀತಿಯ ಗಾಂಭೀರ್ಯ ಕಂಡುಬರುತ್ತಿತ್ತು.

ತಾನೂ ಬಲ್ಲಾಳರ ದಂಡಿನ ಬಂಟರ ವಂಶದವನಲ್ಲವೇ ? ಎಂಬ ಹೆಮ್ಮೆಯಿಂದ ಮಾತನಾಡುವಂತಿತ್ತು ಅವನ ಭಾವ.

ಅವನು ಅಷ್ಟು ಉತ್ಸಾಹದಿಂದ ಹೇಳುತ್ತಿದ್ದರೂ ಕೇಳುವವರಲ್ಲಿ ಅವನ ಉತ್ಸಾಹವಿದ್ದಿಲ್ಲ. ಒಮ್ಮೆ ಡಾಕ್ಟರ ಮನೆ ಮುಟ್ಟಿದರೆ ಸಾಕು ಎಂಬಂತೆ ಅವನನ್ನು ಹಿಂಬಾಲಿಸುತ್ತಿದ್ದರು.

ಕೆಲವು ನಿಮಿಷಗಳ ದಾರಿ ಕಳೆಯಿತು ; ದೂರದಲ್ಲಿ ಚಿಕ್ಕ ಹಂಚಿನ ಮನೆಯೊಂದು ಎತ್ತರದ ಜಾಗದಲ್ಲಿ ಕಾಣಿಸಿತು. ಅದರ ಪಕ್ಕದಲ್ಲಿ ಮತ್ತೊಂದು ಮನೆ ; ಅದೂ ಹಂಚಿನದೇ.

ಅಲ್ಲಲ್ಲಿ ಒಂದೆರಡು ಗುಡಿಸಲುಗಳು— ಊರಲ್ಲಿ ಜನವಸತಿ ಇದೆ ಎಂಬುದನ್ನು ಸೂಚಿಸುತ್ತಿದ್ದುವು. ಮನೆ ಹತ್ತಿರವಾದಂತೆ ಅಲ್ಲಿ ಮೂರು ನಾಲ್ಕು ಹಂಚಿನ ಮನೆಗಳಿದ್ದುದು ಕಾಣಿಸಿತು.

" ಅಲ್ಲಿ ಎದುರು ಕಾಣುತ್ತಿರುವುದು ಕಿರಿಸ್ತಾನರ ಇಗರ್ಜಿ " ಎಂದ ಮುದುಕ.

" ಅದರ ಹಿಂದುಗಡೆ ಕಾಣುವ ದೊಡ್ಡ ಮನೆಯಲ್ಲಿಯೇ ಡಾಕ್ಟರರು ಇರುವುದು. "

" ಅವರ ಆಸ್ಪತ್ರೆ ಇರುವುದೆಲ್ಲಿ ? "

" ಆಸ್ಪತ್ರೆ-ಮನೆ ಎಲ್ಲವೂ ಅಲ್ಲಿಯೇ ಇದೆ ಸ್ವಾಮಿ. ಅವರೊಬ್ಬರು ಪುಣ್ಯಾತ್ಮರು ಇಲ್ಲಿ ಬಂದ ಮೇಲೆ ಊರು ಸ್ವಲ್ಪ ಗೆಲುವಾಗಿದೆ. ಮೊದಲು ಇಲ್ಲಿ ಚಳಿ-ಜ್ವರ ಹಿಡಿದು ಸಾಯುವವರು ಸ್ವಲ್ಪ ಮಂದಿಯೇ ಸ್ವಾಮಿ. "

ಮುದುಕನ ಮಾತು ಮುಗಿಯುವುದರೊಳಗೆ ಮೂವರೂ ಡಾಕ್ಟರರ ಮನೆಯೆದುರು ಬಂದು ನಿಂತರು.

ಎದುರುಗಡೆಯಲ್ಲಿ ಡಾ। ಮಾಧವರಾವ್, ಎಂ. ಬಿ., ಬಿ. ಎಸ್. ಎಂದು ಬರೆದ ಬೋರ್ಡು ತೂಗಹಾಕಿತ್ತು. ಹೊರಜಗುಲಿಯ ಮೇಲೆ ಅಸ್ಥಿಪಂಜರಗಳಂತಿದ್ದ ಹಲವು ರೋಗಿಗಳು ಅರೆಬತ್ತಲೆಯಾಗಿ ನಿಂತಿದ್ದರು.

ಮದ್ದಿಗೆ ಬಂದವರಿರಬೇಕು ; ಶಾಂತಿ ಅವರನ್ನು ನೋಡಿದಳು. ಅಲ್ಲಿಯ ನೋಟ ಆಕೆಯ ಹೃದಯವನ್ನು ಕಲಕಿಬಿಟ್ಟಿತು. ರಾಮರಾಯರೂ ಅವರನ್ನು ನೋಡದಿರಲಿಲ್ಲ.

ದಿನವೂ ಇವರನ್ನು ನೋಡುತ್ತಲೇ ಇರಬೇಕಲ್ಲ; ಈಗಲೇ ಯೋಚನೆ ಯೇಕೆ ಎಂದುಕೊಂಡು ಮನೆಯನ್ನು ಪ್ರವೇಶಿಸಿದರು.

ಡಾಕ್ಟರರು ರೋಗಿಗಳಿಗೆ ಮದ್ದು ಸೇರಿಸಿ ಕೊಡುವುದರಲ್ಲಿ ಮಗ್ನರಾಗಿದ್ದರು. ರಾಮರಾಯರನ್ನು ಕಂಡೊಡನೆ ಅವರ ಮುಖದಲ್ಲಿ ನಗು ಮೂಡಿತು. ಒಬ್ಬಂಟಿಗನಾಗಿ ದುಡಿಯುತ್ತಿದ್ದವನಿಗೆ ಜೊತೆಗಾರನೊಬ್ಬ ದೊರೆತರೆ ಸಂತಸ ವಾಗದಿರುತ್ತದೆಯೇ ?

“ ಬನ್ನಿ ರಾಮರಾಯರೇ, ಯಾವಾಗ ಬಂದಿರಿ ? ಇವರು ಯಾರು ಜೊತೆ ಯಲ್ಲಿ ? ” ಎಂದು ಶಾಂತಿಯ ಕಡೆಗೆ ಸಂಕೇತ ಮಾಡಿದರು.

“ ಈಗಾಗಲೇ ಬಂದೆ ಡಾಕ್ಟರರೇ, ಬಿಡಾರವನ್ನೇ ತೆಗೆದುಕೊಂಡು ಬಂದಿದ್ದೇನೆ. ಇವಳು ನನ್ನ ತಂಗಿ, ಇನ್ನೊಬ್ಬ ತಮ್ಮನೂ ಜೊತೆಯಲ್ಲಿದ್ದಾನೆ ; ಬಿಡಾರದ ಸಾಮಾನುಗಳೆಲ್ಲವನ್ನೂ ತುಂಬಿಸಿಕೊಂಡು ಬಂದಿದ್ದೇವೆ. ”

“ ಸಾಮಾನೆಲ್ಲ ಎಲ್ಲಿದೆ ? ”

“ ರಸ್ತೆಯ ಮೇಲೆಯೇ ಗಾಡಿಗಳು ನಿಂತಿವೆ. ”

ಡಾಕ್ಟರರು ಸಾಮಾನನ್ನು ಹೊತ್ತು ತರಲು ಇಬ್ಬರು ಕೂಲಿಗಳನ್ನು ಕೊಟ್ಟರು. ಶಾಂತಿ ಅಲ್ಲಿಯೇ ಪಕ್ಕದಲ್ಲಿ ಕುಳಿತಳು.

ಸಾಮಾನೆಲ್ಲವನ್ನೂ ಡಾಕ್ಟರರ ಮನೆಗೇ ಸಾಗಿಸಲಾಯಿತು ; ಆ ಕಾಡು ಕೊಂಪೆಯಲ್ಲಿ ಒಬ್ಬಂಟಿಗರಾಗಿದ್ದ ಡಾಕ್ಟರರಿಗೆ ರಾಮರಾಯರ ಆಗಮನದಿಂದ ತುಂಬಾ ಸಂತೋಷವಾಗಿತ್ತು.

ಅವರಿಗೆ ಪ್ರಾಯವೇನೂ ಮೂವತ್ತಕ್ಕೆ ಮಿಕ್ಕಿರಲಾರದು. ಇನ್ನೂ ಅವಿವಾಹಿತರಾಗಿಯೇ ಇದ್ದರು ; ತಾರುಣ್ಯದ ಹುಮ್ಮಸ್ಸಿನಲ್ಲಿ ಹಳ್ಳಿಕೊಂಪೆಯಾದ ಪಂಜಕ್ಕೆ ಬಂದಿದ್ದರು. ಡಾಕ್ಟರಿಯ ಉತ್ಪನ್ನದಿಂದ ಅವರ ಜೀವನ ಸಾಗಬೇಕಾಗಿರಲಿಲ್ಲ ; ಅವರ ತಂದೆ ಪುತ್ತೂರಿನ ಆಗರ್ಭ ಶ್ರೀಮಂತರು. ದುಡಿದು ತಿನ್ನುವ ಆವಶ್ಯಕತೆಯೇ ಅವರಿಗಿದ್ದಿಲ್ಲ; ಡಾ| ಮಾಧವರಾಯರು ಒಬ್ಬನೇ ಮಗ. ಅಪ್ಪನೆಷ್ಟು ವಿರೋಧ ಮಾಡಿದರೂ ಕೇಳದೆ ಪಂಜದಲ್ಲಿ ಬಂದು ನಿಂತು ತಮ್ಮ ಔಷಧಾಲಯವನ್ನು ತೆರೆದಿದ್ದರು. ಅಲ್ಲಿಯ ವರಮಾನ ತಮ್ಮ ಜೀವನಕ್ಕೇ ಸಾಲದಿದ್ದರೂ ತಾನು ಬಡಹಳ್ಳಿಗರ ಸೇವೆ ಮಾಡುತ್ತಿರುವೆನಲ್ಲಾ ಎಂಬ ಹೆಮ್ಮೆ ಇತ್ತು ಅವರಿಗೆ.

ಆದರೆ ಪಂಜಕ್ಕೆ ಬರುವಾಗ ಇದ್ದ ಉತ್ಸಾಹ ಅವರಲ್ಲಿ ಈಗ ಇರಲಿಲ್ಲ. ತಮಗೆ ಬೇಕಾದ ಗೆಳೆಯರು ಆ ಹಳ್ಳಿಕೊಂಪೆಯಲ್ಲಿ ದೊರೆಯುವುದು ಕಷ್ಟವಾಗಿತ್ತು.

ಏಕಾಂತ ವಾಸ ಅವರಿಗೆ ಅಸಹನೀಯವಾಗಿತ್ತು; ಅಂತಹದರಲ್ಲಿ ಕಂಪೌಂಡರರಾಗಿ ರಾಮರಾಯರು ತಮ್ಮ ಪರಿವಾರಸಮೇತ ಬಂದುದನ್ನು ಕಂಡು ಅವರಲ್ಲಿ ಹೊಸ ಚೈತನ್ಯ ಬಂದಂತಾಯಿತು.

ಆದರದಿಂದ, ಉತ್ಸಾಹದಿಂದ ಅವರನ್ನು ಸ್ವಾಗತಿಸಿದರು. ಬಂದ ಒಂದೆರಡು ದಿನ ಅವರನ್ನು ತಮ್ಮಲ್ಲಿಯೇ ಇಟ್ಟುಕೊಂಡರು. ಆದರೆ ಕೊನೆಯ ವರೆಗೆ ಹಾಗೆಯೇ ಇಟ್ಟುಕೊಳ್ಳಲು ಸಾಧ್ಯವಿರಲಿಲ್ಲ; ಹಾಗೆಂದು ಆ ಹಳ್ಳಿಯಲ್ಲಿ ಬಿಡಾರಕ್ಕೆ ಮನೆ ಸಿಗುವುದೂ ಅಸಾಧ್ಯವಾಗಿತ್ತು.

ಹೇಗೂ ತಮ್ಮ ಮನೆಯ ಪಕ್ಕದಲ್ಲಿಯೇ ಇದ್ದ ಚಿಕ್ಕ ಮನೆಯೊಂದನ್ನು ಅವರಿಗೆ ತೆರವು ಮಾಡಿ ಕೊಟ್ಟರು. ಮನೆ ಹಳೆಯ ಕಾಲದ್ದು; ಗೋಡೆಗಳಿಗೆ ಸುಣ್ಣ ಬಳಿದು ಎಷ್ಟು ವರುಷಗಳಾಗಿತ್ತೋ? ನೆಲವೂ ಅಷ್ಟು ಚೆನ್ನಾಗಿರಲಿಲ್ಲ; ಸದ್ಯಕ್ಕೆ ಅದನ್ನೇ ಬಳಸಿಕೊಳ್ಳಬೇಕಾಯಿತು.

" ಸದ್ಯಕ್ಕೆ ಹೇಗಾದರೂ ಸುಧಾರಿಸಿ, ಆಮೇಲೆ ಹೇಗಾದರೂ ಸರಿ ಮಾಡಿಕೊಂಡರಾಯಿತು " ಎಂದರು ಮಾಧವರಾಯರು.

ಸರಿ, ರಾಮರಾಯರು ತಮ್ಮ-ತಂಗಿಯರನ್ನು ಕೂಡಿಕೊಂಡು ಪಂಜದಲ್ಲಿ ಹೊಸ ಬಿಡಾರವನ್ನು ಹೂಡಿದರು.

ಮರುದಿನದಿಂದಲೇ ರಾಮರಾಯರ ಹೊಸ ಜೀವನಕ್ಕಾರಂಭವಾಯಿತು. ಡಾಕ್ಟರರ ಹೊಸ ಕಂಪೌಂಡರರಾಗಿ ಅವರ ನೇಮಕವಾಯಿತು.

ರಾಮರಾಯರ ಆಗಮನ ಡಾ| ಮಾಧವರಾಯರ ಜೀವನದಲ್ಲಿ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿಬಿಟ್ಟಿತು; ಅವರು ಬಂದ ದಿನವೇ ಶಾಂತಾ ಅವರ ಕಣ್ಣಿಗೆ ಬಿದ್ದಳು.

ಮೊದಲ ನೋಟದಲ್ಲಿಯೇ ಅವರ ಹೃದಯ ಆಕೆಯ ಕಡೆಗೆ ಒಲಿಯಿತು. ಅವಳು ಅವಿವಾಹಿತೆಯೆಂದು ತಿಳಿದ ಮೇಲಂತೂ ಅವರ ಸಂತಸಕ್ಕೆ ಕೊನೆಯೇ ಇಲ್ಲದಾಯಿತು.

ಆದರೆ ಅವಳನ್ನು ಮಾತನಾಡಿಸುವುದು ಹೇಗೆ? ತಾನಾಗಿ ಆಕೆಯ

ಪರಿಚಯವನ್ನು ಮಾಡಿಕೊಳ್ಳುವುದು ಸಾಧ್ಯವೇ? ಛಿ, ರಾಮರಾಯರಿಗೆ ತಿಳಿದರೆ ಏನೆಂದುಕೊಂಡಾರು? ಅದೆಲ್ಲ ಸಾಧ್ಯವಿಲ್ಲ.

ಆದರೂ ಅವರ ಹೃದಯ ಆಕೆಯ ಪರಿಚಯ ಮಾಡಿಕೊಳ್ಳಲು ಬಯಸುತ್ತಿತ್ತು; ಆದರೆ ಅದಕ್ಕೆ ದಾರಿಯೇ ಇದ್ದಿಲ್ಲ.

ಅವಳಿಗೆ ಕಾಯಿಲೆಯಾದರೆ? ವಿಪರೀತ ಕಾಯಿಲೆಯಾದರೆ, ನಾನವಳನ್ನು ನೋಡುವುದಕ್ಕೆ ಹೋಗಬಹುದು; ಆಗ ಮಾತನಾಡಬಹುದು. ಪರಿಚಯ ಮಾಡಿಕೊಳ್ಳಲು ಅನುಕೂಲ.

ಅದಲ್ಲದೆ ಅವರಿಗೆ ಶಾಂತಿಯ ಪರಿಚಯ ಮಾಡಿಕೊಳ್ಳಲು ಬೇರೆ ದಾರಿಯೇ ಇದ್ದಿಲ್ಲ. ತಮ್ಮ ಬಯಕೆಯನ್ನು ಯಾರೊಡನೆಯೂ ಹೇಳಿಕೊಳ್ಳುವಂತಿರಲಿಲ್ಲ; ತಮ್ಮ ಗೌರವಕ್ಕೆ ಕುಂದು.

ಆದರೂ ಒಮ್ಮೊಮ್ಮೆ ಅವಳಿಲ್ಲಿಯಾದರೂ ಹೊರಗೆ ಬರುವಳೋ ಎಂದು ಆವರ ಮನೆಯ ಕಡೆಗೆ ನೋಡುತ್ತಿದ್ದರು. ಆದರೆ ಅವಳು ಮನೆಬಿಟ್ಟು ಹೊರಗೆ ಹೊರಡುತ್ತಲೇ ಇರಲಿಲ್ಲ.

ಕೆಲವು ದಿನ ಕಳೆದು ಅವರ ಆಸೆಯ ಗತಿ ಮಂದವಾದರೂ ಅದು ತೀರಾ ಅವರನ್ನು ಬಿಟ್ಟು ಹೋಗಲಿಲ್ಲ. ಶಾಂತಾ ಇದಾವುದರ ಪರಿವೆಯೂ ಇಲ್ಲದೆ ತನ್ನ ಅಣ್ಣ ಹಾಗೂ ತಮ್ಮಂದಿರ ಆರೈಕೆಯಲ್ಲಿ ಸಮಯವನ್ನು ಕಳೆಯುತ್ತಿದ್ದಳು.

ಯಾರಾದರೂ ಗೆಳತಿಯರು ದೊರೆಯಬಹುದೆಂದರೆ ಹತ್ತಿರದಲ್ಲೆಲ್ಲೂ ಮನೆಗಳೇ ಇದ್ದಿಲ್ಲ. ಹಾಗಾಗಿ ಮನೆಬಿಟ್ಟು ಹೊರಡುವ ಅವಕಾಶವೇ ಆಕೆಗೆ ದೊರೆಯುತ್ತಿರಲಿಲ್ಲ.

ರಾಮರಾಯರು ಕಂಪೌಂಡರರಾಗಿ ಕೆಲಸಕ್ಕೆ ಬಂದ ಗಳಿಗೆ ಒಳ್ಳೆಯದು. ಅವರು ಬಂದು ಕೆಲವು ದಿನಗಳಲ್ಲಿ ಡಾ। ಮಾಧವರಾಯರ ಪ್ರ್ಯಾಕ್ಟೀಸು ಬೆಳೆಯತೊಡಗಿತು.

ಜನರು ಹೆಚ್ಚುಹೆಚ್ಚಾಗಿ ಮದ್ದಿಗೆ ಬರತೊಡಗಿದರು. ಅಕ್ಕಪಕ್ಕದ ಹಳ್ಳಿಗಳ ಶ್ರೀಮಂತರೂ ಬರತೊಡಗಿದರು. ಹಾಗಾಗಿ ಅವರ ಉತ್ಪನ್ನವೂ ಹೆಚ್ಚಾಯಿತು.

"ನೀವು ಬಂದ ಗಳಿಗೆ ತುಂಬಾ ಒಳ್ಳೆಯದು ರಾಮರಾಯರೇ?" ಎಂದು ಡಾಕ್ಟರರು ಹೇಳಿಯೂ ಬಿಟ್ಟಿದ್ದರು.

ಅವರ ಮಾತಿಗೆ ರಾಮರಾಯರು ಉತ್ತರವೇನೂ ಕೊಟ್ಟಿರಲಿಲ್ಲ. ಬದಲು

ಒಣ ನಗೆಯೊಂದನ್ನು ಬೀರಿದ್ದರು; ಅವರ ಆ ನಗುವಿನಲ್ಲಿ ವಿಷಾದದ ಕಳೆ ತುಂಬಿತ್ತು.

ಜನ ಬರುವುದು ಹೆಚ್ಚಾದಂತೆ ಡಾಕ್ಟರರೂ ತಮ್ಮ ಪ್ರ್ಯಾಕ್ಟೀಸಿನ ಕಡೆಗೆ ಗಮನ ಕೊಡಬೇಕಾಯಿತು. ಅದರಿಂದಾಗಿ ಶಾಂತಿಯ ಕಡೆಯ ಅವರ ಗಮನ ಬೇರೆ ಕಡೆಗೆ ತಿರುಗಿಸಲು ಸಾಧ್ಯವಾದರೂ ಪೂರ್ತಿಯಾಗಿ ಅವರಿಂದ ಅದು ಸಾಧ್ಯವಾಗಲಿಲ್ಲ.

ಕೆಲಸದ ನಡುವೆ ಬೇರೆಲ್ಲಾ ವಿಚಾರಗಳ ಜೊತೆಯಲ್ಲಿ ಶಾಂತಿಯ ನೆನವೂ ಒಂದಾಗಿ ಅವರ ಹೃದಯದಲ್ಲಿ ಉಳಿಯುವಂತಾಯಿತು.

೪

ತಮ್ಮ ಹೊಸ ಬಿಡಾರದಲ್ಲಿ ಶಾಂತಿಯ ಜೀವನವೂ ಒಂದು ರೀತಿಯಲ್ಲಿ ಸಾಗುತ್ತಲೇ ಇತ್ತು. ಬೆಳಗ್ಗೆ ನಸುಕಿನಲ್ಲೇ ಎದ್ದು ಮನೆಯ ಕೆಲಸಕ್ಕೆ ಪ್ರಾರಂಭಿಸುವಳು. ಕೆಲಸವೇನೂ ಹೆಚ್ಚಿಗೆ ಇರುತ್ತಿರಲಿಲ್ಲ; ಸಮಯ ದೊರೆತಾಗಲೆಲ್ಲ ಸುಮ್ಮನೆ ಒಂದು ಮೂಲೆಯಲ್ಲಿ ವಿಚಾರ ಮಾಡುತ್ತ ಕುಳಿತುಕೊಳ್ಳುವಳು.

ತಾರುಣ್ಯದ ಬಯಕೆಗಳು ನಾಲ್ಕು ದಿಕ್ಕಿನಿಂದಲೂ ಬಂದು ಆಕೆಯನ್ನು ಸುತ್ತುವರಿಯುತ್ತಿದ್ದವು. ಶಕ್ತಿಯಿದ್ದಷ್ಟು ವಿಚಾರ ಮಾಡುವಳು; ಕೊನೆಗೆ ಯಾವ ದಾರಿಯೂ ಕಾಣದೆ ತೀರ ಅಸಹಾಯ ಸ್ಥಿತಿಯಲ್ಲಿ ಮೌನವಾಗಿ ಕಣ್ಣೀರು ಸುರಿಸುವಳು.

ಎಷ್ಟು ಕಷ್ಟವಾದರೂ ಒಂದು ದಿನವಾದರೂ ತನ್ನ ನೋವನ್ನು ಅಣ್ಣನೆದುರು ಆಡಿ ತೋರಿಸಲಿಲ್ಲ. ತನ್ನ ಭಾಗ್ಯದಲ್ಲಿ ಬರೆದುದನ್ನು ಬದಲಾಯಿಸಲು ಅಣ್ಣನಿಂದ ಸಾಧ್ಯವೇ? ಸುಮ್ಮನೆ ಮಾತನಾಡಿ ಅವರನ್ನೇಕೆ ನೋಯಿಸಬೇಕು, ಎಂದುಕೊಂಡು ಸುಮ್ಮನಾಗುವಳು.

ಗೋಪಾಲನಿಗೆ ಏನೂ ಕೆಲಸವಿದ್ದಿಲ್ಲ. ಒಂದೊಂದು ದಿನ ಅಣ್ಣನ ಜೊತೆಯಲ್ಲಿ ಆಸ್ಪತ್ರೆಯ ವರೆಗೆ ಹೋಗುತ್ತಿದ್ದ; ಉಳಿದ ಸಮಯವನ್ನು ಮನೆಯಲ್ಲಿಯೇ ಕಳೆಯುತ್ತಿದ್ದ; ಬೇಸರವಾದರೆ ಸುಮ್ಮನೆ ಮಲಗಿಬಿಡುತ್ತಿದ್ದ. ಈ

ಕಾಡುಕೊಂಪೆಗೆ ಬಂದು ಅವನ ಉತ್ಸಾಹವೆಲ್ಲ ಹಾರಿಹೋಗಿತ್ತು. ದಿನವಿಡೀ ಗೆಳೆಯರ ಜೊತೆಯಲ್ಲಿ ಆಟವಾಡುತ್ತಾ ಕಳೆಯುತ್ತಿದ್ದವನಿಗೆ ಜೇಲಿಗೆ ಹಾಕಿದಂತಾಗಿತ್ತು. ಜನವಸತಿಯಿಲ್ಲ ಊರು ; ಇದ್ದರೂ ಅವರಿಂದ ಆತನಿಗೆ ಯಾವ ಪ್ರಯೋಜನವೂ ದೊರೆಯುವಂತಿರಲಿಲ್ಲ.

ಬೇರೆ ಯಾರ ಕೆಲಸವನ್ನೂ ಅವನು ಮಾಡುವಂತಿರಲಿಲ್ಲ. ಫೋರ್ತ್ ಫಾರ್ಮಿನಲ್ಲಿ ಮೂರು ಮೂರು ಬಾರಿ ಫೇಲಾಗಿ ಇನ್ನು ಓದು ಸಾಕೆಂದು ಮನೆಯಲ್ಲಿಯೇ ಕುಳಿತುಬಿಟ್ಟಿದ್ದ ; ಒಮ್ಮೊಮ್ಮೆ ಸಿಟ್ಟು ಬಂದಾಗ ಅಕ್ಕನೊಡನೆ ಜಗಳ ಕಾಯುತ್ತಿದ್ದ. "ಆಸ್ಪತ್ರೆಗೆ ಬಂದು ಕಂಪೌಂಡರನ ಕೆಲಸದನ್ನಾದರೂ ಅಭ್ಯಾಸ ಮಾಡು" ಎಂದು ರಾಮರಾಯರು ಒತ್ತಾಯಿಸುತ್ತಿದ್ದರು. ಬೇಸರ ಕಳೆಯಲು ಕೆಲಸಮಯವನ್ನು ಅಲ್ಲಿ ಕಳೆಯುತ್ತಿದ್ದ. ಆದರೆ ಅವನ ಹುಡುಗ ಬುದ್ಧಿ ಅವನನ್ನು ದಿನವಿಡೀ ಅಲ್ಲಿರಲು ಬಿಡುತ್ತಿರಲಿಲ್ಲ.

ರಾಮರಾಯರು ಮನೆಯಲ್ಲಿರುತ್ತಿದ್ದುದು ರಾತ್ರಿಯ ಹೊತ್ತಿನಲ್ಲಿ ಮಾತ್ರ. ಬೆಳಿಗ್ಗೆ ಎಂಟು ಗಂಟೆಗೆ ಎದ್ದು ಗಂಜಿಯೂಟ ಮಾಡಿ ಆಸ್ಪತ್ರೆಗೆ ಹೊರಟರೆ ಮತ್ತೆ ಬರುವುದು ಕತ್ತಲಾದ ಮೇಲೆ. ಮಧ್ಯಾಹ್ನದ ಊಟವನ್ನು ಆಸ್ಪತ್ರೆಯಲ್ಲಿಯೇ ಮಾಡುತ್ತಿದ್ದರು. ನಿಜ ಹೇಳಬೇಕೆಂದರೆ ಮನೆಯಲ್ಲಿ ಬೆಳಗಿನಿಂದ ಸಂಜೆಯ ವರೆಗೆ ಶಾಂತಿ ಒಬ್ಬಳೇ ಇರಬೇಕು.

ಡಾಕ್ಟರರಲ್ಲಿ ಕೆಲಸಕ್ಕೆ ಸೇರಿದಂದಿನಿಂದ ರಾಮರಾಯರ ಜೀವನದಲ್ಲಿ ಒಂದು ರೀತಿಯ ಮಾರ್ಪಾಟಾಗಿತ್ತು. ಆಸ್ಪತ್ರೆಗೆ ಬರುವ ರೋಗಿಗಳ ಸಂಖ್ಯೆಯೂ ತುಂಬಾ ಜಾಸ್ತಿಯಾಗಿತ್ತು. ಹಳ್ಳಿಯ ಅವಿದ್ಯಾವಂತರೇ ಹೆಚ್ಚು. ಅವರೊಡನೆ ಮಾತಾಡಿ ಕಾಯಿಲೆಯ ವಿಚಾರ ತಿಳಿದುಕೊಳ್ಳಬೇಕಾದರೆ ತುಂಬಾ ಕಷ್ಟವಾಗುತ್ತಿತ್ತು. ಡಾಕ್ಟರರಿಗೆ ಒಮ್ಮೊಮ್ಮೆ ಕೇಳಿ ಕೇಳಿ ಬೇಸರ ಬಂದು ಹೋಗುತ್ತಿತ್ತು. ಏಕೆಂದರೆ ರೋಗಿಗಳಲ್ಲಿ ಹೆಚ್ಚಿನವರು ದೈವದ ಕೋಪಕ್ಕೆ ತುತ್ತಾಗಿ ನರಳುವವರು. ಅಂಥವರಿಗೆ ಔಷಧಿ ಕೊಟ್ಟು ಕಳುಹಿಸಬೇಕಾದರೆ ಸಾಕು ಸಾಕಾಗಿ ಹೋಗುತ್ತಿತ್ತು.

ಬಂದ ರೋಗಿಗಳೊಡನೆ ಕಾಯಿಲೆಯ ಮೂಲವನ್ನು ಕೇಳಿದರೆ ವಿಚಿತ್ರವಾದ ದಂತಕತೆಗಳ ಮಾಲೆಯೇ ಹೊರಡುತ್ತಿತ್ತು. ಒಮ್ಮೆ ಮುದುಕಿಯೊಬ್ಬಳು ಆಸ್ಪತ್ರೆಗೆ ಬಂದಳು. ಪ್ರಾಯ ಎಪ್ಪತ್ತಕ್ಕೂ ಮಿಕ್ಕಿರಬಹುದು. ಆದರೂ ಒಳ್ಳೇ

ಗಟ್ಟಿಮುಟ್ಟಾದ ದೇಹ.

" ಏನೇ ಮುದುಕಿ, ಏನಾಗಬೇಕು ನಿನಗೆ ? " ಎಂದು ಡಾಕ್ಟರರು ಕೇಳಿದರು.

" ಮದ್ದು ಬೇಕು ಸ್ವಾಮೀ. "

" ಏನಾಗಿದೆ ನಿನಗೆ, ಚೆನ್ನಾಗಿದ್ದೀಯಲ್ಲ ? "

" ನನ್ನ ಕಾಯಿಲೆಯ ಕತೆ ಏನು ಹೇಳಲಿ ಸ್ವಾಮೀ, ನೀವು ಹೇಳಿದರೆ ನಂಬಲಿಕ್ಕಿಲ್ಲ. "

ಇವರು ಮಾತನಾಡದೆ ಮುದುಕಿಯನ್ನೇ ನೋಡಿದರು. ನಂಬಲು ಸಾಧ್ಯವಿಲ್ಲದ ಕಾಯಿಲೆಯ ವಿಷಯ ಅವರೇನು ಹೇಳಲು ಸಾಧ್ಯ ?

" ಸುಮಾರು ಒಂದು ತಿಂಗಳಾಗಬಹುದು ಸ್ವಾಮೀ, ನಾನು ನನ್ನ ಮಗಳ ಮನೆಗೆ ಹೋಗಿದ್ದೆ. ಒಳ್ಳೆಯ ಹರಿವೆ ದಂಟಿನ ಪಲ್ಯ ಮಾಡಿದ್ದರು. ನಾನು ಒಂದಿಷ್ಟು ಹೆಚ್ಚಾಗಿಯೇ ತಿಂದೆ ; ಒಂದು ತಿಂಗಳ ಹಿಂದೆ ತಿಂದ ಹರಿವೆಯ ದಂಟು ಇಂದು ಮಲದಲ್ಲಿ ಹೋಯಿತು. ನಾನು ಹೆದರಿ ನೆಟ್ಟಗೆ ಇಲ್ಲಿಯ ವರೆಗೆ ಓಡಿಬಂದೆ. "

ಡಾಕ್ಟರರಿಂದ ನಗು ತಡೆಯಲಾಗಲಿಲ್ಲ. ರಾಮರಾಯರೂ ಒಳಗಡೆ ನಗುತ್ತಿದ್ದರು. ಇಂತಹ ಕತೆಗಳೆಷ್ಟೋ, ಇಂತಹರಿಂದ ಮನೋರಂಜನೆ ಅಷ್ಟೇ; ಕಾಸಿನ ಪ್ರಯೋಜನವಿಲ್ಲ.

ಅಂಥವರನ್ನೆಲ್ಲ ಸಮಾಧಾನಪಡಿಸಿ ಕಳುಹಿಸುವ ಜವಾಬ್ದಾರಿ ರಾಮ ರಾಯರದು. ಅವರು ಯಾರ ಮೇಲೂ ಕೋಪಿಸಿಕೊಳ್ಳುತ್ತಿರಲಿಲ್ಲ. ರೋಗಿ ಗಳು ಹೇಳುವುವೆಲ್ಲವನ್ನೂ ಸಮಾಧಾನದಿಂದಲೇ ಕೇಳುತ್ತಿದ್ದರು. ಅವರಿಗೆ ಬೇಕಾದಂತೆ ಮಾತನಾಡಿ ಕಾಯಿಲೆಯ ಲಕ್ಷಣಗಳನ್ನು ತಿಳಿದುಕೊಳ್ಳುತ್ತಿದ್ದರು. ಇದರಿಂದಾಗಿ ಡಾಕ್ಟರರಿಗೆ ತುಂಬಾ ಪ್ರಯೋಜನವಾಗುತ್ತಿತ್ತು.

" ನೀವು ಬಂದುದರಿಂದ ನನಗೆ ತುಂಬಾ ಉಪಯೋಗವಾಯಿತು, ರಾಮ ರಾಯರೇ. ಇಲ್ಲವಾದರೆ ಈ ರೋಗಿಗಳೊಡನೆ ಮಾತನಾಡುವುದೆಂದರೆ ನನಗೆ ಪ್ರಾಣಕ್ಕೆ ಬರುತ್ತಿತ್ತು. " ಎನ್ನುತ್ತಿದ್ದರು.

ಅವರೇನೆಂದರೂ ರಾಮರಾಯರು ಉತ್ತರಿಸುತ್ತಲೇ ಇರಲಿಲ್ಲ. ಮೃದು ವಾಗಿ ನಗುತ್ತಿದ್ದರು. ಅವರ ಆ ನಗು-ನೋಟಗಳಲ್ಲಿ ಕೃತಜ್ಞತೆಯ ಭಾವ

ತುಂಬಿರುತ್ತಿತ್ತು.

"ಈ ಕಾಡುಕೊಂಪೆಗೆ ಬರಲು ನಿಮಗೆ ಬೇಸರವೆನಿಸಲಿಲ್ಲವೇ ರಾಮು ರಾಯರೇ ? ನಿಮ್ಮ ತಮ್ಮ-ತಂಗಿಯವರು ಇದಕ್ಕೆ ಸಮ್ಮತಿಸಿದರೇ ?"

"ನನಗೂ ಪಟ್ಟಣದ ವಾಸ ಬೇಸರ ಬಂದು ಹೋಗಿತ್ತು ಸ್ವಾಮೀ. ಹಳ್ಳಿಯ ಕಡೆಗಾದರೂ ಹೋಗೋಣವೆಂದು ಹೊರಟೆವು."

ಸರಿ ಮುಂದೆ ಮಾತನಾಡಲು ಅವಕಾಶ ದೊರೆಯುತ್ತಿರಲಿಲ್ಲ. ಯಾರಾದರೂ ರೋಗಿಗಳು ಬಂದು ಉಪದ್ರ ಕೊಡುವುದಕ್ಕಾರಂಭಿಸುತ್ತಿದ್ದರು. ಅಲ್ಲಿಗೆ ಅವರ ಸಂಭಾಷಣೆ ಮುಗಿಯುತ್ತಿತ್ತು.

ರಾಮುರಾಯರು ಬಂದಾಗಿನಿಂದ ಜನರು ಹೆಚ್ಚಾಗಿ ಅವರ ಬಳಿಗೇ ಹೋಗುತ್ತಿದ್ದರು. ಡಾಕ್ಟರರ ಬಳಿ ಹೋಗಲು ಅವರಿಗೆಲ್ಲ ಒಂದು ರೀತಿಯ ಭಯ. ಡಾಕ್ಟರರ ಪ್ರಸಿದ್ಧಿ ಊರೆಲ್ಲಾ ಹಬ್ಬಿತ್ತು. ಆದರೆ ಈಗ ಕಂಪೌಂಡರರು ತುಂಬಾ ಒಳ್ಳೆಯವರು ಎಂದು ಪ್ರಸಿದ್ಧಿಯಾಯಿತು. ಅದಕ್ಕೆ ತಕ್ಕಂತೆ ಅವರೂ ವರ್ತಿಸುತ್ತಿದ್ದರು. ಒಂದು ಕ್ಷಣವೂ ವಿಶ್ರಾಂತಿಯಿಲ್ಲದೆ ದುಡಿಯುತ್ತಿದ್ದರು; ಸ್ವಲ್ಪ ಸಮಯವೇನಾದರೂ ದೊರೆಯಿತೆಂದರೆ ಡಾಕ್ಟರರೊಡನೆ ಕಾಯಿಲೆಗಳ ಸಂಬಂಧವಾಗಿ ಏನಾದರೂ ಚರ್ಚಿಸುತ್ತಿದ್ದರು.

ತಮ್ಮ ನೋವನ್ನು ಮರೆಯಲು ಅವರು ಸರ್ವವಿಧವಾಗಿಯೂ ಪ್ರಯತ್ನಿಸುತ್ತಿದ್ದರು. ವಿಚಾರ ಮಾಡಲು ಅವಕಾಶ ದೊರೆಯದ ರೀತಿಯಲ್ಲಿ ತಮ್ಮ ಕೆಲಸಗಳಲ್ಲಿಯೇ ಮಗ್ನರಾಗಿರುತ್ತಿದ್ದರು; ಎಷ್ಟಾದರೂ ಅವರ ಮುಖದ ಮೇಲೆ ಒಮ್ಮೆಯೂ ನಗು ಮೂಡುತ್ತಿರಲಿಲ್ಲ. ಹೃದಯದಲ್ಲಡಗಿದ ನೋವಿನ ಕಳೆ ಮುಖದ ಮೇಲೆ ಎದ್ದು ಕಾಣಿಸುತ್ತಿತ್ತು. ಯಾವಾಗಲೂ ಅವರು ಬಿಡುತ್ತಿರುವ ನಿಟ್ಟುಸಿರುಗಳು ಡಾಕ್ಟರರ ಗಮನಕ್ಕೆ ಬಾರದಿರುತ್ತಿರಲಿಲ್ಲ.

ತಮ್ಮ ಕಂಪೌಂಡರರ ಮನಸ್ಸಿನಲ್ಲಿ ಯಾವುದೋ ಅವ್ಯಕ್ತ ವೇದನೆಯೊಂದು ಮನೆಮಾಡಿಕೊಂಡಿದೆಯೆಂದು ತಿಳಿದುಕೊಳ್ಳಲು ಅವರಿಗೆ ಕಷ್ಟವಾಗಲಿಲ್ಲ. ಆದರೂ ಅವರದನ್ನು ವಿಚಾರಿಸುವ ಗೋಜಿಗೆ ಹೋಗಲಿಲ್ಲ.

ದಿನವಿಡೀ ಕೆಲಸ ಮಾಡಿ ದಣಿದಿದ್ದರೂ ರಾತ್ರೆ ತುಂಬಾ ಹೊತ್ತಿನ ವರೆಗೂ ಅವರಿಗೆ ನಿದ್ರೆ ಬರುತ್ತಿರಲಿಲ್ಲ. ಮಧ್ಯರಾತ್ರೆ ಕಳೆಯುವ ವರೆಗೂ ಹಾಸಿಗೆಯ ಮೇಲೆ ಹೊರಳಾಡುತ್ತಲೇ ಸಮಯ ಕಳೆಯಬೇಕಾಗುತ್ತಿತ್ತು.

ತಮ್ಮ ನೋವಿನ ಜೊತೆಯಲ್ಲಿ ತಂಗಿಯ ಬದುಕಿನ ನೆನಪಾದೊಡನೆ ಸಹಿಸಲಾರದಷ್ಟು ವೇದನೆಯಾಗುತ್ತಿತ್ತು ; ಮೌನವಾಗಿ ಕಣ್ಣೀರು ಸುರಿಸುತ್ತಿದ್ದರು.

ಇಂದು ಅವರಿದ್ದ ಪರಿಸ್ಥಿತಿಯಲ್ಲಿ ವರಶೋಧನೆಯ ಕೆಲಸ ತೀರ ಅಸಾಧ್ಯವಾಗಿತ್ತು; ಆದರೂ ಸುಮ್ಮನಿರುವಂತಿರಲಿಲ್ಲ. ಹೀಗೆಯೇ ವಿಚಾರಮಗ್ನರಾದ ಅವರಿಗೆ ಬೆಳಗಿನ ಜಾವಕ್ಕೆ ನಿದ್ದೆ ಹತ್ತುತ್ತಿತ್ತು ; ಮತ್ತೆ ಬೆಳಗಾಗಬೇಕಾದರೆ ಎದ್ದು ಕೆಲಸಕ್ಕೆ ಹೊರಡುತ್ತಿದ್ದರು.

ನೆಮ್ಮದಿಯನ್ನರಸಿಕೊಂಡು ಇಷ್ಟು ದೂರಕ್ಕೆ ಬಂದರೂ ಅವರಿಗದು ದೊರೆತಿರಲಿಲ್ಲ. ಬಂದ ಕೆಲವೇ ದಿನಗಳಲ್ಲಿ ಹಳ್ಳಿಗರ ವಿಶ್ವಾಸವನ್ನೇನೋ ಗಳಿಸಿದ್ದರು ; ಆದರೆ ಆದರಿಂದ ಅವರ ಮನಸ್ಸಿಗೆ ಯಾವ ಪ್ರಯೋಜನವೂ ಆಗುವಂತಿರಲಿಲ್ಲ.

ಈ ರೀತಿ ಯಾಂತ್ರಿಕವಾಗಿ ಹಲವು ದಿನಗಳು ಕಳೆದುವು. ಶಾಂತಿಯ ದೇಹದ ಮೇಲೆ ಪಂಜದ ವಾತಾವರಣ ಪರಿಣಾಮವನ್ನು ಬೀರಿತು; ಆಕೆ ಕಾಯಿಲೆ ಬಿದ್ದಳು. ಮೆಲ್ಲನೆ ಜ್ವರ ಬರುವುದಕ್ಕಾರಂಭವಾಯಿತು. ಒಂದೆರಡು ದಿನ ಅವಳು ಯಾರೊಡನೆಯೂ ಹೇಳದೆ ಕಳೆದಳು. ಆದರೆ ಮತ್ತೆ ಸಾಧ್ಯವಾಗಲಿಲ್ಲ.

ಅಂದು ಸಂಜೆ ರಾಮರಾಯರು ಮನೆಗೆ ಬರುವಾಗ ಆಕೆಯ ಸ್ಥಿತಿ ವಿಪರೀತವಾಗಿತ್ತು ; ತುಂಬಾ ಜ್ವರವಿತ್ತು. ತಲೆಯ ಸಿಡಿತವನ್ನು ತಡೆಯಲಾರದೆ ಮಲಗಿಬಿಟ್ಟಿದ್ದಳು. ಅವರಿಗೆ ಕೊಂಚ ಗಾಬರಿಯಾಯಿತು. ತಂಗಿಯ ಹಣೆ ಮುಟ್ಟಿ ನೋಡಿದರು ; ಕಾದು ಕೆಂಡವಾಗಿತ್ತು.

" ಏನಾಯಿತು ಶಾಂತಿ, ಎಂದಿನಿಂದ ಜ್ವರ ಬರುತ್ತಿದೆ ? "

" ಎರಡು ದಿನವಾಯಿತಣ್ಣ. ಸಾಧಾರಣ ಜ್ವರ, ಹಾಗೆಯೇ ಹೋಗಬಹುದೆಂದು ಸುಮ್ಮನಿದ್ದೆ. "

ಅವರು ಮಾತನಾಡದೆ ಎದ್ದು ಆಸ್ಪತ್ರೆಗೆ ಓಡಿದರು. ಇವರು ಹೋಗುವಾಗ ಡಾಕ್ಟರರು ಊಟಕ್ಕೆ ಕುಳಿತಿದ್ದರು. ಶಾಂತಿಯ ಕಾಯಿಲೆಯ ಸುದ್ದಿ ಕೇಳಿದೊಡನೆ ಊಟವನ್ನು ಅರ್ಧದಲ್ಲಿಯೇ ಬಿಟ್ಟು ಸ್ಟೆಥೋಸ್ಕೋಪನ್ನು ಹಿಡಿದುಕೊಂಡು ಹೊರಟೇಬಿಟ್ಟರು. ಎಷ್ಟೋ ದಿನಗಳ ಅವರ ಬಯಕೆ ಇಂದು

ಫಲಿಸಿತ್ತು.

ಶಾಂತಿ ತಲೆನೋವಿನಿಂದ ನರಳುತ್ತಿದ್ದಳು; ಡಾಕ್ಟರರು ಪರೀಕ್ಷೆ ಮಾಡಿದರು. ಜ್ವರ ತುಂಬಾ ಇತ್ತು; ಅವಳು ಕಣ್ಣು ಮುಚ್ಚಿಕೊಂಡೇ ಇದ್ದಳು. ತುಂಬಾ ಹೊತ್ತಿನ ವರೆಗೆ ಅವಳನ್ನೇ ನೋಡುತ್ತ ಕುಳಿತರು. ತಮ್ಮ ವರ್ತನೆಯನ್ನು ಕಂಡು ಅವರಿಗೇ ನಾಚಿಕೆ ಎನಿಸಿರಬೇಕು. ಮರುಕ್ಷಣದಲ್ಲಿಯೇ ಸಾವರಿಸಿಕೊಂಡರು.

ಮೃದುವಾಗಿ ಆಕೆಯ ಹಣೆಯ ಮೇಲೆ ಕೈಯಾಡಿಸಿದರು. ಅವರ ಕೈಯ ಸ್ಪರ್ಶ ಶಾಂತಿಗೆ ತುಂಬಾ ಹಿತಕರವಾಗಿ ಕಂಡಿತು. ಮೆಲ್ಲನೆ ಕಣ್ಣು ತೆರೆದಳು. ತನ್ನ ತೀರ ಹತ್ತಿರದಲ್ಲಿ ಕುಳಿತು ಅವರು ಪರೀಕ್ಷೆ ಮಾಡುತ್ತಿರುವುದನ್ನು ಕಂಡು ಅವಳಿಗೆ ತುಂಬಾ ನಾಚಿಕೆ ಎನಿಸಿತು. ಅದನ್ನು ಮರೆಸಿಕೊಳ್ಳಲೆಂದು ಕಣ್ಣು ಮುಚ್ಚಿದಳು. ಆದರೆ ಅವಳ ಬಯಕೆ ಈಡೇರಲಿಲ್ಲ. ಆ ಜ್ವರದ ಗುಂಗಿನಲ್ಲಿಯೂ ಆಕೆಯ ಮುಖದ ಮೇಲೆ ಮೃದು ಮಂದಹಾಸ ಮಿನುಗಿತು.

ಅವರ ಪರೀಕ್ಷೆ ಮುಗಿದಿತ್ತು; ಶಾಂತಿಯ ಕಾಯಿಲೆ ಅವರ ಹೃದಯವನ್ನು ಅರಳಿಸಿತ್ತು.

ತೀವ್ರ ಗುಣವಾಗಲೆಂದು ಇಂಜೆಕ್ಶನ್ ಚುಚ್ಚಿದರು; ಮದ್ದು ಕುಡಿಸಿದರು. ಇನ್ನು ಹೆಚ್ಚು ಹೊತ್ತು ಅವರು ಅಲ್ಲಿಯೇ ನಿಲ್ಲುವಂತಿರಲಿಲ್ಲ; ಹೋಗಲು ಮನಸ್ಸಿಲ್ಲದವರಂತೆ ಎದ್ದು ಹೊರಟರು. ಬಾಗಿಲ ವರೆಗೆ ಹೋಗಿ ಒಮ್ಮೆ ಹಿಂತಿರುಗಿ ನೋಡಿದರು. ಒಮ್ಮೆಯಾದರೂ ಅವಳನ್ನು ನೋಡಬೇಕೆನ್ನುವ ಆತುರ.

ಅವಳು ಕಣ್ಣು ತೆರೆದಿದ್ದಳು; ಇವರನ್ನೇ ನೋಡುತ್ತಿದ್ದಳು. ಇವರು ತಿರುಗಿದ್ದನ್ನು ಕಂಡೊಡನೆ ಕಣ್ಣುಗಳು ಪುನಃ ಮುಚ್ಚಿದುವು; ಆಕೆಗೆ ತುಂಬಾ ನಾಚಿಕೆಯಾಗಿರಬೇಕು.

" ಗಾಬರಿಯೇನೂ ಇಲ್ಲ, ಇನ್ನೆರಡು ದಿನಗಳಲ್ಲಿ ನೆಟ್ಟಗಾಗುವುದು " ಎಂದು ಹೇಳಿ ಡಾಕ್ಟರರು ಹೊರಟರು.

" ತಲೆ ನೋಯುತ್ತಿದೆಯೇ ಶಾಂತೂ ? "

" ಇಲ್ಲಣ್ಣಾ, ಈಗ ಸ್ವಲ್ಪ ಕಡಿಮೆಯಾಗಿದೆ; ಊಟವಾಗಿದೆಯೇ ನಿಮ್ಮದು? ಗೋಪು ಎಲ್ಲಿ? "

" ಊಟ ಮಾಡಿದರಾಯಿತು, ನೀನು ಸುಮ್ಮನೆ ಮಲಗು."

" ಅಡುಗೆ ಎಲ್ಲವನ್ನೂ ಮಾಡಿಟ್ಟಿರುವೆ. ಊಟಕ್ಕೇಳು, ಇಬ್ಬರಿಗೂ ಬಡಿಸುವೆ." ಎಂದು ಎದ್ದು ಕೂಡುವ ಪ್ರಯತ್ನ ಮಾಡಿದಳು; ಆದರೆ ರಾಮರಾಯರು ಅದಕ್ಕವಕಾಶ ಕೊಡಲಿಲ್ಲ.

" ಬೇಡ ಶಾಂತಿ.... " ಅವರ ಕಣ್ಣುಗಳಲ್ಲಿ ನೀರು ತುಂಬಿತ್ತು; ಮುಂದೆ ಮಾತನಾಡಲು ಅವರಿಂದ ಸಾಧ್ಯವಾಗಲಿಲ್ಲ.

" ಅಳುವುದೇಕಣ್ಣ, ನಾಳೆಯೊಳಗೆ ನಾನು ಸೌಖ್ಯವಾಗುವುದಿಲ್ಲವೇ ? "

" ಹಾಗೆಯೇ ಮಲಗಮ್ಮ, ಈಗ ಸುಮ್ಮನೆ ಮಲಗು. "

ಅಣ್ಣನ ಮಾತನ್ನು ಆಕೆ ವಿರೋಧಿಸಲಿಲ್ಲ ; ಆಕೆಯನ್ನು ಮಲಗಿಸಿ ತಮ್ಮನನ್ನು ಕರೆದು ತಾವೇ ಬಡಿಸಿಕೊಂಡು ಊಟ ಮಾಡಿದರು.

೫

ರಾತ್ರಿ ಕಳೆದು ಹೇಗೋ ಬೆಳಗಾಯಿತು. ಅಂದಿನ ಅಡುಗೆಯ ಜವಾಬ್ದಾರಿ ಗೋಪುವಿನ ತಲೆಯ ಮೇಲೆ. ಎಂಟು ಗಂಟೆಯ ಹೊತ್ತಿಗೆ ಶಾಂತಿ ಕಣ್ತೆರೆದಳು. ಹಿಂದಿನ ದಿನಕ್ಕಿಂತ ತುಂಬಾ ಗೆಲುವಾಗಿದ್ದಳು.

ಜ್ವರವಿನ್ನೂ ಪೂರ್ತಿಯಾಗಿ ಬಿಟ್ಟಿರಲಿಲ್ಲವಾದರೂ ಎದ್ದು ತಿರುಗಾಡುವ ಮಟ್ಟಿಗಾಗಿದ್ದಳು.

ರಾಮರಾಯರು ಆಸ್ಪತ್ರೆಗೆ ಹೋದರು. ಅವರು ಹೋಗಿ ಕೆಲವೇ ನಿಮಿಷಗಳಲ್ಲಿ ಡಾಕ್ಟರರು ರೋಗಿಯನ್ನು ನೋಡುವುದಕ್ಕೆ ಬಂದರು.

ಲವಳು ಆಗಲೇ ಎದ್ದು ಹಾಸಿಗೆಯ ಮೇಲೆ ಕುಳಿತಿದ್ದಳು.

" ಮುಖ ತೊಳೆದಾಯಿತೇ ? " ಡಾಕ್ಟರು ಮಾತಾಡಿಸಿದರು.

ಡಾಕ್ಟರರನ್ನು ಕಂಡು ಅವಳಿಗೆ ತುಂಬಾ ನಾಚಿಕೆಯಾಗಿತ್ತು. ಈ ರೀತಿ ಪುರುಷರೊಡನೆ ಮಾತನಾಡುವ ಅವಕಾಶ ಅವಳಿಗೆ ಈವರೆಗೆ ದೊರೆತಿರಲಿಲ್ಲ—, ಅದೂ ಏಕಾಂತದಲ್ಲಿ.

" ಹೂಂ " ಎಂದಳು ಮೆಲ್ಲನೆ.

" ಗಂಜಿಯೂಟ ಮಾಡಿದಿರಾ ? "

" ಹೂಂ " ಅವರು ಮೆಲ್ಲನೆ ಆಕೆಯ ಪಕ್ಕದಲ್ಲಿ ಕುಳಿತು ಹಣೆ ಮುಟ್ಟಿ ನೋಡಿದರು. ಆಕೆಯ ಮೈ ನವಿರೆದ್ದಿತು. ತುಂಬಾ ಮಧುರವಾದ ಸ್ಪರ್ಶ ; ಜೀವನದಲ್ಲಿ ಮೊದಲ ಬಾರಿಗೆ ಅವಳಿದನ್ನು ಅನುಭವಿಸುತ್ತಿರುವುದು. ತಲೆಯೆತ್ತಿ ಅವರನ್ನು ನೋಡುವ ಸಾಹಸವಾಗಲಿಲ್ಲ ಆಕೆಗೆ.

" ಜ್ವರ ಇನ್ನೂ ಇದೆ; ಸುಮ್ಮನೆ ಮಲಗಿಕೊಳ್ಳಿ! ಮತ್ತೆ ಕಷ್ಟವಾದೀತು." ಆಕೆಯ ಉತ್ತರ ಬರುವ ಮೊದಲೇ ಆಕೆಯನ್ನು ಹಾಸಿಗೆಯ ಮೇಲೆ ಮಲ ಗಿಸಿದರು.

ಇಬ್ಬರೂ ತುಂಬಾ ಹೊತ್ತಿನ ವರೆಗೆ ಮೌನವಾಗಿಯೇ ಇದ್ದರು. ಇಬ್ಬರ ಹೃದಯಗಳಲ್ಲಿಯೂ ಎಂಥಾ ಭಾವತರಂಗಗಳು ಎದ್ದು ಹೊಯ್ದಾಡುತ್ತಿದ್ದುವೋ ಅವರಿಗೇ ಗೊತ್ತು. ಅಂತೂ ಇಬ್ಬರೂ ಅವ್ಯಕ್ತ ಆನಂದಲಹರಿಯಲ್ಲಿ ತೇಲಾ ಡುತ್ತಿದ್ದರು. ಇನ್ನೂ ತುಂಬಾ ಹೊತ್ತಿನ ವರೆಗೆ ಮೌನವಾಗಿರುವುದು ಡಾಕ್ಟರ ರಿಗೆ ಸಾಧ್ಯವಾಗಲಿಲ್ಲ.

" ಈ ಹೊತ್ತೂ ಒಂದು ಇಂಜೆಕ್ಶನ್ ಕೊಡಲೇ ? "

ಶಾಂತಿ ಮಾತನಾಡಲಿಲ್ಲ ; ನಾಚಿಕೆಯಿಂದ ಮುಖವೆತ್ತುವುದೂ ಆಕೆಗೆ ಸಾಧ್ಯವಿರಲಿಲ್ಲ. ಅಂತಹುದರಲ್ಲಿ ಏನೆಂದು ಉತ್ತರಿಸಿಯಾಳು ?

ಅವರು ನಿನ್ನೆ ಇಂಜೆಕ್ಶನ್ ಕೊಟ್ಟಲ್ಲಿ ಮೆಲ್ಲನೆ ಕೈಯಾಡಿಸಿದರು.

" ತುಂಬಾ ನೋಯುತ್ತಿದೆಯೇ ? "

" ಇಲ್ಲ. "

" ಹಾಗಾದರೆ ಇಂದೂ ಒಂದು ಇಂಜೆಕ್ಶನ್ ಕೊಡುವೆ, ಬೇಗನೇ ಗುಣ ವಾಗುವುದು."

ಆಕೆಯ ಉತ್ತರಕ್ಕಾಗಿ ಕಾಯದೇ ಇಂಜೆಕ್ಶನ್ ಚುಚ್ಚಿದರು ಆಕೆ ವಿರೋಧಿಸಲಿಲ್ಲ ; ಅವರೇನು ಮಾಡಿದರೂ ವಿರೋಧಿಸಲು ಆಕೆಯಿಂದ ಸಾಧ್ಯ ವಿರಲಿಲ್ಲ.

" ತುಂಬಾ ಆಯಾಸವಾಗಿದೆಯೇ ? "

" ಇಲ್ಲ. "

" ಸುಮ್ಮನೆ ಮಲಗಿ. ಎದ್ದು ಅತ್ತಿತ್ತ ತಿರುಗಾಡಬೇಡಿ; ಮತ್ತೆ ವಿಪರೀತಕ್ಕೆ ಹೋದೀತು."

ಆಕೆ ಮೌನವಾಗಿ ಮಲಗಿದ್ದಳು; ಅವರ ಸಾಮೀಪ್ಯ ಅವಳಲ್ಲಿ ತುಂಬಾ ಸಂತೋಷವನ್ನು ಹುಟ್ಟಿಸಿತ್ತು. ಅವರೊಡನೆ ಸರಿಯಾಗಿ ಮಾತನಾಡಬೇಕೆಂದು ಹೃದಯ ಬಯಸುತ್ತಿತ್ತು; ಆದರೆ ನಾಚಿಕೆ ತಡೆಯಾಗುತ್ತಿತ್ತು.

" ಸುಮ್ಮನೆ ಮಲಗಿಕೊಳ್ಳಿ, ಸಂಜೆಗೆ ಪುನಃ ಬರುವೆ."

ಅವರು ಎದ್ದು ಹೊರಟರು; ಹೊರಡಲು ಅವರಿಗೆ ಸ್ವಲ್ಪವೂ ಮನಸ್ಸಿರಲಿಲ್ಲ. ಆದರೆ ಅಲ್ಲಿ ಹೆಚ್ಚು ಹೊತ್ತು ಕುಳಿತಿರಲು ಸಾಧ್ಯವಿರಲಿಲ್ಲ; ಆಕೆ ಸರಿಯಾಗಿ ಮಾತನಾಡುವಂತಿದ್ದರೆ ಸ್ವಲ್ಪ ಹೊತ್ತಿನ ವರೆಗಾದರೂ ಕುಳಿತುಕೊಳ್ಳಬಹುದಿತ್ತು. ಆದರೆ ಇವರ ಹತ್ತು ಮಾತಿಗೆ ಆಕೆಯ ಒಂದು ಮಾತು; ಅದೂ ತೀರಾ ಚುಟುಕು.

ಅವರು ಹೊರಟು ಹೋದರು. ಶಾಂತಿ ಎದ್ದಳು; ಓಡಿ ಹೋಗಿ ಅವರನ್ನು ತಡೆಯಬೇಕೆನ್ನಿಸಿತು. ಆದರದು ಸಾಧ್ಯವಿರಲಿಲ್ಲ.

ಅವರು ಹೊರಟು ಹೋದೊಡನೆ ಆಕೆಯ ಹೃದಯ ತುಂಬಾ ಭಾರವಾದಂತೆನಿಸಿತು; ಅವರು ಕಣ್ಮರೆಯಾಗುವ ವರೆಗೆ ನೋಡಿದಳು. ತನಗರಿಯದಂತೆ ದೀರ್ಘವಾದ ನಿಟ್ಟುಸಿರೊಂದು ಆಕೆಯ ಹೃದಯದಾಳದಿಂದ ಹೊರಟು ಗಾಳಿಯಲ್ಲಡಗಿತು. ಕಣ್ಣಲ್ಲಿ ನೀರು ತುಂಬಿತ್ತು; ತನ್ನ ಆತ್ಮೀಯರೊಬ್ಬರು ಬಳಿಯಿಂದ ಹೊರಟು ಹೋದಂತೆನಿಸಿತು.

ಅವರೊಡನೆ ತಾನು ಸರಿಯಾಗಿ ಮಾತನಾಡಲಿಲ್ಲ; ಅವರಿಗೆ ತುಂಬಾ ಬೇಸರವಾಗಿರಬಹುದು. ಎಷ್ಟು ಸ್ನೇಹದಿಂದ ಮಾತನಾಡಿಸಿದರು! ಛಿ, ನನ್ನ ನಾಚಿಕೆಗೆ ಬೆಂಕಿ ಹಾಕಿತು. ಅವರಿಗೆ ಅದೆಷ್ಟು ಬೇಸರವಾಯಿತೋ ಏನೋ? ಸಂಜೆಗೆ ಬಂದಾಗಲಾದರೂ ಸರಿಯಾಗಿ ಮಾತನಾಡುವೆ.

ಪುನಃ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡು ಕಣ್ಣು ಮುಚ್ಚಿದಳು, ಅವರು ತನ್ನ ಹಣೆಯ ಮೇಲೆ ಕೈಯಿರಿಸಿದುದನ್ನು ಎಣಿಸಿದೊಡನೆ ಆಕೆಗೆ ತುಂಬಾ ನಾಚಿಕೆಯೆನಿಸಿತು; ಆದರೆ ಹೃದಯ ಅವ್ಯಕ್ತ ಆನಂದದಿಂದ ಅರಳಿತ್ತು. ಪ್ರತಿಕ್ಷಣವೂ ಆ ಸ್ಪರ್ಶಸುಖ ತನಗೆ ದೊರೆಯುತ್ತಿದ್ದರೆ? ಛೀ, ಎಂಥಾ ನಾಚಿಕೆಗೆಟ್ಟವಳು ನಾನು.

ಮುಂದೆ ವಿಚಾರ ಮಾಡುವ ಸಾಹಸವಾಗಲಿಲ್ಲ ; ಆದರೆ ವಿಚಾರಗಳಿಂದ ಮುಕ್ತಳಾಗುವುದೂ ಆಕೆಯ ಪಾಲಿಗೆ ಸಾಧ್ಯವಿರಲಿಲ್ಲ. ಡಾಕ್ಟರರ ಮೂರ್ತಿ ಕಣ್ಣಿಗೆ ಕಟ್ಟಿದಂತಾಗಿತ್ತು.

ಸಂಜೆಗೆ ಬಂದಾಗಲಾದರೂ ಸರಿಯಾಗಿ ಮಾತನಾಡುವೆ ; ಇಲ್ಲವಾದರೆ ಅವರಿಗೆ ಬೇಸರವಾಗುವುದು.

ಗಂಟೆಗಳು ಒಂದೊಂದಾಗಿ ಕಳೆಯತೊಡಗಿದುವು. ಸಂಜೆಯಾಯಿತು; ಶಾಂತಿಯ ಹೃದಯದಲ್ಲಿ ಹೊಸ ಹುರುಪು ಮೂಡಿತು; ಅವರು ಬರಬಹುದು—ಗಳಿಗೆಗೊಮ್ಮೆ ಆಕೆಯ ಕಣ್ಣುಗಳು ಬಾಗಿಲಬಳಿಗೋಡುತ್ತಿದ್ದವು. ಒಂದೊಂದು ಕ್ಷಣ ಒಂದೊಂದು ಯುಗದಂತೆ ಭಾಸವಾಗುತ್ತಿತ್ತು. ಬೂಟ್ಸಿನ ಸದ್ದು ಕೇಳಿಸಿತು; ಆಕೆಯ ಎದೆಬಡಿತ ಜೋರಾಯಿತು; ಕಣ್ಣೆತ್ತಿ ಬಾಗಿಲ ಕಡೆಗೆ ನೋಡುವ ಸಾಹಸವಾಗಲಿಲ್ಲ. ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಳು.

ಅವರು ಬಂದು ಪಕ್ಕದಲ್ಲಿ ಕುಳಿತರು, ಹಣೆಯ ಮೇಲೆ ಕೈಯಿರಿಸಿದರು ; ಆಕೆಗೆ ಒಮ್ಮೆಲೇ ಏನು ಮಾಡಬೇಕೋ ತಿಳಿಯದಾಯಿತು.

ಕೈ ಸರಿಯಿತು ; ಇನ್ನೂ ಒಂದಿಷ್ಟು ಹೊತ್ತು ಹಾಗೆಯೇ ಇಡಬಾರದಾಗಿತ್ತೇ ?— ಮೆಲ್ಲನೆ ಕಣ್ಣು ತೆರೆದಳು. ಅವರ ಮುಖವನ್ನು ನೋಡುವ ಪ್ರಯತ್ನ ಮಾಡಿದಳು. ಆದರೆ ಸಾಧ್ಯವಾಗಲಿಲ್ಲ ; ಮುಖ ನಾಚಿಕೆಯಿಂದ ಕೆಂಪಾಗಿತ್ತು.

" ಈಗ ಹೇಗಿದೆ, ಸ್ವಲ್ಪವಾದರೂ ಚೆನ್ನಾಗಿದ್ದೀರಾ ? "

ಅವರಿಗೆ ಸಂತೋಷವಾಗುವ ರೀತಿಯ ಉತ್ತರ ಕೊಡಬೇಕೆಂದು ಆಕೆಗೆ ಆಶೆ. ಆದರೆ ಎಷ್ಟು ಪ್ರಯತ್ನಿಸಿದರೂ ಬಾಯಿಯಿಂದ ಮಾತುಗಳೇ ಹೊರಡುತ್ತಿರಲಿಲ್ಲ.

" ನಿನ್ನೆಗಿಂತ ಸುಧಾರಿಸಿಲ್ಲವೇ ? "

" ಹೂಂ " ಎಂದಳು ಮೆಲ್ಲನೆ.

" ಜ್ವರ ಕಡಿಮೆಯಾಗಿದೆ. ಇನ್ನೆರಡು ದಿನಗಳಲ್ಲಿ ಮೊದಲಿನಂತಾಗುವಿರಿ; ಆದರೆ ಎರಡು ದಿನ ವಿಶ್ರಾಂತಿ ತೆಗೆದುಕೊಳ್ಳಬೇಕು. "

ಆಕೆ ಮಾತನಾಡಲಿಲ್ಲ ; ಅವಳ ಮೌನವನ್ನು ಕಂಡು ಅವರಿಗೆ ಬೇಸರವಾಯಿತು. ಆಕೆ ನಗುತ್ತ ಮಾತನಾಡುತ್ತಿದ್ದರೆ ಸಂತೋಷವಾಗುತ್ತಿತ್ತು.

"ನೀವು ಮಾತೇ ಆಡುವುದಿಲ್ಲವೇಕೆ ? ನನ್ನನ್ನು ಕಂಡರೆ ಭಯವಾಗುತ್ತಿದೆಯೇ ? "

ಅವಳು ಒಮ್ಮೆಲೇ ಅವರ ಕಡೆಗೆ ಹೊರಳಿ ನೋಡಿದಳು. ಇಬ್ಬರ ದೃಷ್ಟಿಗಳೂ ಕೂಡಿದುವು; ಮತ್ತೆ ತಲೆತಗ್ಗಿಸಿದಳು. ಮಾತನಾಡಬೇಕೆಂದು ಪ್ರಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ—ಡಾಕ್ಟರರಿಗೂ ತುಂಬಾ ಸಂಕೋಚವೆನಿಸಿತು. ಆ ರೀತಿ ಪ್ರಶ್ನೆ ಕೇಳಬಾರದಿತ್ತು. ಅವಳು ಏನೆಂದುಕೊಂಡಳೋ ಏನೋ ? ಎಂದಾಯಿತು.

"ಹಾಗಾದರೆ ಹೋಗಿ ಬರಲೇ ? " ಅವರ ದನಿಯಲ್ಲಿ ನಿರಾಶೆಯ ಛಾಯೆ ಇತ್ತು. ಶಾಂತಿಗದು ತಿಳಿಯದಿರಲಿಲ್ಲ.

ತಾನು ಮಾತನಾಡದಿರುವುದರಿಂದ ಅವರಿಗೆ ಬೇಸರವಾಗಿದೆ. ಅವರು ಎದ್ದು ನಿಂತಿದ್ದರು.

ಅವರನ್ನು ತಡೆದು ಕುಳ್ಳಿರಿಸಬೇಕೆಂದು ಬಯಕೆಯಾಯಿತು. ಆದರೆ ಸಾಧ್ಯವಾಗಲಿಲ್ಲ; ಅವರು ಹೊರಟುಹೋದರು.

ಅವಳಿಂದ ಮಲಗಿರಲು ಸಾಧ್ಯವಾಗಲಿಲ್ಲ; ಎದ್ದು ಬಾಗಿಲ ಬಳಿ ಓಡಿ ಬಂದಳು. ಅವರನ್ನು ತಡೆದು ನಿಲ್ಲಿಸಲು ಸಾಧ್ಯವಾಗುತ್ತಿದ್ದರೆ ?....

ಅವರು ತುಂಬಾ ದೂರಕ್ಕೆ ಹೋಗಿಯಾಗಿತ್ತು.

ಇನ್ನು ವಿಚಾರ ಮಾಡಿ ಪ್ರಯೋಜನವಿರಲಿಲ್ಲ; ಅವರು ಹೊರಟುಹೋಗಿಯಾಗಿತ್ತು.

ನಾನೇಕೆ ಹಾಗೆ ಮಾಡಿದೆ ? ಅಷ್ಟು ಸ್ನೇಹದಿಂದ ನನ್ನನ್ನು ಮಾತನಾಡಿಸುವವರಿಗೆ ನಾನು ಋಣಿಯಾಗಿರಬೇಡವೇ ? ಸಂತೋಷವಾಗಿ ಅವರೊಡನೆ ಮಾತನ್ನಾದರೂ ಆಡಬೇಡವೇ ?

ದಿನಕ್ಕೆರಡು ಬಾರಿ ನನ್ನನ್ನು ನೋಡಿಕೊಂಡು ಹೋಗಲು ಅವರೇಕೆ ಬರಬೇಕು ? ಆದರೂ ಬರುತ್ತಿದ್ದಾರೆ ; ಅವರು ಬಳಿಯಲ್ಲಿದ್ದಾಗ ನಾನೇಕೆ ಹಾಗೆ ಮಾಡಿದೆ ?

ಅವರಿಗೆ ತುಂಬಾ ಬೇಸರವಾಗದೆ? ಹೌದು, ಅವರ ದನಿಯಿಂದಲೇ ಅದು ತಿಳಿಯುಬಹುದು. ನಾನು ತಪ್ಪು ಮಾಡಿದೆ. ಅವರನ್ನು ಆ ರೀತಿ ನೋಯಿಸಬಾರದಿತ್ತು.

ಇನ್ನೆಂದೂ ಹಾಗೆ ಮಾಡುವುದಿಲ್ಲ; ಏನು ಬೇಕಾದರೂ ಆಗಲಿ; ನಗುತ್ತ ಅವರೊಡನೆ ಮಾತನಾಡುವೆ; ಅವರಿಗೆ ಸಂತೋಷವಾಗುವುದು; ಅವರೂ ನಗುನಗುತ್ತ ನನ್ನೊಡನೆ ಮಾತನಾಡುವರು.

ಅವ್ಯಕ್ತ ಆನಂದದ ತೆರೆಯೊಂದು ಹರಿದು ಬಂದು ಆಕೆಯ ಹೃದಯವನ್ನು ಅರಳಿಸಿತು; ತಾನು ಗಾಳಿಯಲ್ಲಿ ಹಾರಿ ಹೋಗುತ್ತಿರುವಂತೆ ಅನಿಸಿತವಳಿಗೆ.

ಇಂಥಾ ಮಧುರ ಆನಂದವನ್ನು ಬದುಕಿನಲ್ಲಿ ಆಕೆಯೆಂದೂ ಅನುಭವಿಸಿರಲಿಲ್ಲ.

ಮೆಲ್ಲನೆ ಕತ್ತಲೆಯಾಗತೊಡಗಿತು; ಆಕೆ ಇನ್ನೂ ಬಾಗಿಲಲ್ಲಿಯೇ ನಿಂತಿದ್ದಳು. ಮೈಮೇಲಿನ ಎಚ್ಚರವೇ ಇದ್ದಂತಿರಲಿಲ್ಲ.

ಅಣ್ಣ ಬಂದು ಕರೆದಾಗಲೇ ಆಕೆಗೆ ಎಚ್ಚರ— ಕಣ್ಣುಜ್ಜಿಕೊಂಡು ನೋಡಿದಳು. ತುಂಬಾ ನಾಚಿಕೆಯಾಯಿತು-- ನಾಚಿಕೆಯಿಂದ ಸತ್ತುಬಿಡೋಣವೆನಿಸಿತು. ತನ್ನ ವಿಚಾರಗಳು ಅಣ್ಣನಿಗೆ ತಿಳಿದರೆ ?....

" ಹೀಗೆ ಗಾಳಿಗೇಕೆ ನಿಂತಿರುವಿ ಶಾಂತೂ, ಹೋಗಿ ಮಲಗಬಾರದೇ ? "

ಆಕೆ ಮಾತನಾಡಲಿಲ್ಲ. ನೆಟ್ಟಗೆ ದೇವರ ಕೋಣೆಗೆ ಹೋಗಿ ದೇವರಿಗೆ ದೀಪಹಚ್ಚಿದಳು; ಎರಡೂ ಕೈಮುಗಿದು ನಮಸ್ಕಾರ ಮಾಡಿದಳು. ಮತ್ತೇನೆಲ್ಲಾ ಬೇಡಿಕೊಂಡಳೋ ಆಕೆಗೇ ಗೊತ್ತು.

" ಈಗ ಹೇಗಿದೆ ಶಾಂತೂ ? "

" ತುಂಬಾ ಚೆನ್ನಾಗಿದ್ದೇನಣ್ಣ. ನಾಳೆಯೊಳಗೆ ಜ್ವರ ಪೂರ್ತಿ ಬಿಡುವುದೆಂದು ಡಾಕ್ಟರರು ಹೇಳಿದ್ದಾರೆ. "

ಡಾಕ್ಟರರ ವಿಚಾರ ಹೇಳುವಾಗ ಆಕೆಗೆ ತುಂಬಾ ಸಂಕೋಚವೆನಿಸಿತು. ಆದರೆ ಅದನ್ನು ತೋರಗೊಡಲಿಲ್ಲ.

" ಆದರೂ ಗಾಳಿಗೆ ಹಾಗೆ ತಿರುಗಾಡಬೇಡಮ್ಮ. ಹೋಗು, ಸುಮ್ಮನೆ ಮಲಗು. ಗುಣವಾಗಿ ಮೊದಲಿನಂತಾದ ಮೇಲೆ ಮತ್ತೆ ಓಡಾಡುವಿಯಂತೆ " ಅವರ ದನಿಯಲ್ಲಿ ವಾತ್ಸಲ್ಯ ತುಂಬಿತ್ತು.

ಅವಳು ಹಾಸಿಗೆಯ ಮೇಲೆ ಒರಗಿದಳು. ಸ್ವಲ್ಪ ಹೊತ್ತು ಕಳೆಯಬೇಕಾದರೆ, ಸ್ವತಃ ರಾಮರಾಯರೇ ಒಂದಿಷ್ಟು ಬಿಸಿ ಗಂಜಿಯನ್ನು ತೆಗೆದುಕೊಂಡು ತಂಗಿಯ ಬಳಿಗೆ ಬಂದರು. ಶಾಂತಾ ಕಣ್ಣು ಮುಚ್ಚಿಕೊಂಡೇ ಇದ್ದಳು. ಮುಖದ ಮೇಲೆ ಮಂದಹಾಸವಿತ್ತು; ಎರಡು ದಿನಗಳ ಬಳಲಿಕೆ ಮುಖದ ಮೇಲೆ ಎದ್ದು ಕಾಣುತ್ತಿದ್ದರೂ ತುಂಬಾ ಗೆಲುವಾಗಿದ್ದಳು. ಅಣ್ಣ ಬಂದುದನ್ನು ತಿಳಿದರೂ ಕಣ್ಣು ತೆರೆಯಲಿಲ್ಲ.

“ ಶಾಂತೂ ” ಎಂದರು ಮೆಲ್ಲನೆ.

ರಾಮರಾಯರು ನೆಟ್ಟದೃಷ್ಟಿಯಿಂದ ತಂಗಿಯ ಮುಖವನ್ನೇ ನೋಡಿದರು.

“ ನನ್ನನ್ನೇ ನೋಡುತ್ತಿರುವುದೇಕಣ್ಣಾ, ದೃಷ್ಟಿ ತೆಗೆಯುತ್ತಿರುವಿರೇನು ? ” ನಗುತ್ತ ನುಡಿದಳು.

ತಂಗಿಯ ಸಂತಸದ ನಗು ಅವರ ಹೃದಯವನ್ನು ಅರಳಿಸಿತು. ಆದರೆ ಮರುಕ್ಷಣದಲ್ಲಿಯೇ ಮುಖ ಕಪ್ಪಿಟ್ಟಿತು ; ನಿಟ್ಟುಸಿರು ಹೊರಟಿತು.

ಹೆಣ್ಣನ್ನು ಸ್ವೀಕರಿಸುವವರು ಬರೀ ಗುಣ ಮತ್ತು ರೂಪಗಳಿಗೆ ಮಹತ್ವ ಕೊಡುವಂತಿದ್ದರೆ ಶಾಂತಾ ಇಷ್ಟು ದಿನಗಳ ವರೆಗೆ ಅಣ್ಣನ ಆಶ್ರಯದಲ್ಲಿ ಉಳಿಯುವ ಅವಶ್ಯಕತೆಯೇ ಇದ್ದಿರಲಿಲ್ಲ.

ಅವಳ ಊಟವಾದೊಡನೆ ಅಣ್ಣ ಹೊರಟುಹೋದರು.

ಅಣ್ಣ ಹೋದೊಡನೆ ಅವಳ ಮನಸ್ಸಿನಲ್ಲಿ ಎಷ್ಟೋ ವಿಚಾರಗಳು ಬಂದು ಹೋದುವು. ಹೆಚ್ಚಿನವು ಡಾ| ಮಾಧವರಾಯರಿಗೆ ಸಂಬಂಧಪಟ್ಟವುಗಳು.

“ ಎಷ್ಟೊಂದು ಸುಂದರವಾದ ಮೈಕಟ್ಟು ಅವರದು. ದಿನವೂ ನನ್ನನ್ನು ನೋಡಲು ಬರುವರು. ತುಂಬಾ ಸ್ನೇಹದಿಂದ ನನ್ನ ಚಿಕಿತ್ಸೆ ಮಾಡುವರು. ನನಗಾಗಿ ಎಷ್ಟು ಕಾತರ ಅವರಿಗೆ ? ಅವರು....ಅವರು....ನನ್ನನ್ನು ಪ್ರೀತಿಸುತ್ತಿರಬಹುದೇ ?

ಛೀ, ಎಂತಹ ಹುಚ್ಚಿ ನಾನು. ಇದು ಎಂದಾದರೂ ಸಾಧ್ಯವಿರುವ ವಿಚಾರವೇ ? ರೋಗಿಯ ಚಿಕಿತ್ಸೆ ಮಾಡುವುದು ವೈದ್ಯರ ಕೆಲಸ. ಅದರಲ್ಲಿ ವಿಶೇಷವೇನೂ ಇರಲಾರದು.

ಅದರಲ್ಲೂ ಆಗರ್ಭ ಶ್ರೀಮಂತರು. ಸಾವಿರಾರು ರೂಪಾಯಿ ವರ ದಕ್ಷಿಣೆಯೊಂದಿಗೆ ಅವರಿಗೆ ಹೆಣ್ಣು ಕೊಡುವ ಪುಣ್ಯಾತ್ಮರು ಬೇಕಷ್ಟು ಮಂದಿ ಇರಬಹುದು.

ಆದರೆ ಅವರು ನನ್ನೊಡನೆ ಹಾಗೆಲ್ಲಾ ಮಾತನಾಡಿದರೇಕೆ? ರೋಗಿಯೊಡನೆ ಅಷ್ಟೆಲ್ಲಾ ಮಾತನಾಡುವ ಅವಶ್ಯಕತೆ ವೈದ್ಯರಿಗಿರುವುದೇ? ವೈದ್ಯರು ರೋಗಿಯನ್ನು ಮಾತನಾಡಿಸುವಂತೆ ಅವರು ನನ್ನನ್ನು ಮಾತನಾಡಿಸಲಿಲ್ಲ. ಅವರ ದನಿಯಲ್ಲಿ ಸ್ನೇಹವಿತ್ತು, ಕಾತರವಿತ್ತು, ಯಾಚನೆಯ ಭಾವವಿತ್ತು.

ಅಷ್ಟು ತಿಳಿಯದ ಮೂರ್ಖಳೇ ನಾನು? ಅವರು........ ನನ್ನನ್ನು ಪ್ರೀತಿಸುವಂತಾದರೆ ........ ನಾನು ಅವರ ಪ್ರಿಯತಮೆಯಾಗಲು ಸಾಧ್ಯವಾದರೆ?........ "

ಆಕೆಯ ಹೃದಯ ಜೋರಾಗಿ ಹೊಡೆದುಕೊಳ್ಳಲಾರಂಭಿಸಿತು. ಮೈ ಬೆವತು ಉಟ್ಟ ಬಟ್ಟೆಯೆಲ್ಲವೂ ಒದ್ದೆಯಾಯಿತು. ಆದರೂ ಆಕೆ ಮುಖದ ಮೇಲಿನ ಮುಸುಕನ್ನು ಸರಿಸಲಿಲ್ಲ. ಮುಖದ ಮೇಲಿನ ಬಟ್ಟೆಯನ್ನು ಸರಿಸಿ ಉರಿಯುತ್ತಿರುವ ದೀಪವನ್ನು ನೋಡುವುದಕ್ಕೂ ಆಕೆಯಿಂದ ಸಾಧ್ಯವಿರಲಿಲ್ಲ; ಅಷ್ಟು ನಾಚಿಕೆ.

ಆ ಕಲ್ಪನೆಯೇ ಅಷ್ಟು ಮಧುರವಾದರೆ, ಅವರ ಸಾನ್ನಿಧ್ಯ ದೊರೆತರೆ ಹೇಗಾಗಬಹುದು? ಅಂತೂ ಅವಳ ಪಾಲಿಗೆ ಆ ಕಲ್ಪನೆ ತೀರಾ ಮಧುರತಮವಾದುದು. ಜೀವನದ ಮೊದಲ ಮಧುರ ಕಲ್ಪನೆ; ಆ ಕಲ್ಪನೆಯ ಸುಖ ಎಂತಹುದೆಂದು ಆಕೆಗೇ ಗೊತ್ತು. ಅಣ್ಣ ಎಂದಿನಂತೆ ಮಲಗುವಾಗ ತಂಗಿಯನ್ನು ನೋಡಿಕೊಂಡು ಹೋಗಲು ಬಂದರು. ಆಗಲೂ ಶಾಂತಿ ಮುಸುಕು ಎಳೆದುಕೊಂಡು ಮಲಗಿದ್ದಳು. ನಿದ್ದೆ ಬಂದಿರಬಹುದೇನೋ ಎಂದುಕೊಂಡು ದೀಪ ಸಣ್ಣದು ಮಾಡಿ ಅವರು ಹೋದರು. ಅದು ಆಕೆಗೆ ತಿಳಿಯದಿರಲಿಲ್ಲ. ತನ್ನ ಸೋಗಿನ ನಿದ್ದೆಯನ್ನು ಎಣಿಸಿ ಆಕೆಗೆ ನಗು ಬಂದಿತು.

೬

ರಾಮರಾಯರು ದಿನವಿಡೀ ತನ್ನ ಜೀವನದ ಕಹಿನೆನಪುಗಳನ್ನು ಮರೆಯಲೆಂದು ಒಂದು ನಿಮಿಷವೂ ವಿಶ್ರಾಂತಿಯಿಲ್ಲದೆ ದುಡಿಯುತ್ತಿದ್ದರು. ಆದರೆ ರಾತ್ರಿಯ ಹೊತ್ತಿಗೇನು ಮಾಡುವುದು? ತುಂಬಾ ಆಯಾಸವಾಗಿದ್ದರೂ ಬೇಡದ ನೆನಹುಗಳು ತಲೆಯನ್ನು ಹೊಕ್ಕು ನೆಮ್ಮದಿಯನ್ನು ಕೆಡಿಸುತ್ತಿದ್ದುವು.

ರಾತ್ರೆ ಕಳೆದು ಬೆಳಗಾಯಿತು. ಗೋಪು ಆಗಲೇ ಎದ್ದು ಅಡುಗೆಯ ಮನೆಯಲ್ಲಿ ಓಡಾಡುತ್ತಿದ್ದ. ತಮ್ಮನಿಗೆ ನೆರವಾಗಲೆಂದು ರಾಮರಾಯರೂ ಬೇಗನೇ ಎದ್ದಿದ್ದರು. ಶಾಂತಿಗೆ ಮಾತ್ರ ಸುಖವಾದ ನಿದ್ರೆ; ಗಂಟೆ ಎಂಟಾಗುವುದಕ್ಕಾದರೂ ಅವಳಿಗಿನ್ನೂ ಎಚ್ಚರವಾಗಿರಲಿಲ್ಲ. ಅಣ್ಣ ಆಕೆಯನ್ನು ಎಚ್ಚರಿಸಲಿಲ್ಲ. "ತುಂಬಾ ಬಳಲಿದ್ದಾಳೆ ಮಲಗಲಿ" ಎಂದು ತಮ್ಮ ಊಟವನ್ನು ಮುಗಿಸಿ ಆಸ್ಪತ್ರೆಯ ಕಡೆಗೆ ಹೊರಟರು.

ಸ್ವಲ್ಪ ಹೊತ್ತು ಕಳೆದು ಶಾಂತಿಗೆ ಎಚ್ಚರವಾಯಿತು; ಕಣ್ಣು ತೆರೆದುಕೊಂಡು ಮಲಗಿದಲ್ಲಿಯೇ ಸುತ್ತಲೂ ನೋಡಿದಳು. ಮನಸ್ಸು ತುಂಬಾ ಉಲ್ಲಸಿತವಾಗಿತ್ತು; ಹಾಸಿಗೆಯಲ್ಲಿಯೇ ಎದ್ದು ಕುಳಿತಳು.

"ಇನ್ನೂ ಎದ್ದಿಲ್ಲವೇ ಶಾಂತಕ್ಕಾ?" ಶಾಂತಿ ತಲೆಯೆತ್ತಿದಳು. ಗೋಪು ಬಾಗಿಲಲ್ಲಿ ನಿಂತಿದ್ದ.

"ಅಣ್ಣ ಹೋದರೇ ಗೋಪೂ?"

"ಹೂಂ ಅಕ್ಕ, ಆಗಲೇ ಹೋದರು. ನೀನು ಎದ್ದು ಊಟ ಮಾಡುವದಿಲ್ಲವೇ?"

"ನಿನ್ನ ಊಟವಾಯಿತೇ ಗೋಪೂ?"

"ಆಗಲೇ ಆಯಿತು."

ಶಾಂತಿ ಹಾಸಿಗೆ ಬಿಟ್ಟಿದ್ದಳು. ಜ್ವರ ನಿನ್ನೆಯೇ ಬಿಟ್ಟಿತ್ತು. ಸ್ವಲ್ಪ ನಿತ್ರಾಣವಿದ್ದರೂ ಅವಳಿಗದು ದೊಡ್ಡ ವಿಚಾರವಾಗಿ ಕಾಣಿಸಲಿಲ್ಲ. ಎದ್ದು ಹೊರಡಬೇಕೆನ್ನುವಷ್ಟರಲ್ಲಿ ಯಾವುದೋ ನೆನಪು ಅವಳನ್ನು ಹಿಂದಕ್ಕೆಳೆಯಿತು. ಗಂಟೆ ಎಂಟೊವರೆಯಾಗಬಹುದು ಅವರು ಬರುವ ಹೊತ್ತಾಯಿತು; ತಾನು ಮಲಗಿದಲ್ಲಿಯೇ ಇದ್ದರೆ ಅವರು ಹಣೆ ಮುಟ್ಟಿ ನೋಡುವರು, ಎನಿಸಿತು. ಏನು

ಮಾಡಲೆಂದು ಒಂದು ಕ್ಷಣ ವಿಚಾರ ಮಾಡಿದಳು. ಮುಖ ತೊಳೆದುಕೊಂಡು ಬಂದು ಮಲಗಬೇಕೆಂದು ಎದ್ದು ಬಚ್ಚಲು ಮನೆಯ ಕಡೆಗೆ ನಡೆದಳು. ಅವಸರ ವಾಗಿಯೆ ಪ್ರಾತರ್ವಿಧಿಗಳನ್ನು ತೀರಿಸಿ ಬಂದು ಮಲಗುವಷ್ಟರಲ್ಲಿ ಬೂಟ್ಸಿನ ಸದ್ದು ಕೇಳಿಸಿತು. ಡಾಕ್ಟರರು ಬಂದುದನ್ನು ತಿಳಿದೊಡನೆ ಶಾಂತಿ ಕಣ್ಣು ಮುಚ್ಚಿ ದಳು. ಮುಖ ನಾಚಿಕೆಯಿಂದ ಕೆಂಪಾಯಿತು. ಅವ್ಯಕ್ತ ಆನಂದದ ತೆರೆ ಯೊಂದು ಹರಿದು ಬಂದು ಅವಳ ಹೃದಯವನ್ನು ಅರಳಿಸಿತು. ತೀರ ಸಮೀಪ ದಲ್ಲಿ ಕಾಲ ಸಪ್ಪಳವಾಯಿತು. ಕಣ್ದೆರೆದು ನೋಡಬೇಕೆಂಬ ಆತುರ ಆಕೆಗೆ. ಆದರೆ ನಾಚಿಕೆ ಅಡ್ಡವಾಗಿತ್ತು. ಒಂದೇ ಕ್ಷಣದೊಳಗೆ ಮೈ ಬೆವರಿ ನೀರಾಗಿತ್ತು, ಬಟ್ಟೆ ತೊಯ್ದು ಹೋಗಿತ್ತು. ಆದರೂ ಕಣ್ಣು ತೆರೆಯುವ ಧೈರ್ಯವಿಲ್ಲ.

ಡಾಕ್ಟರರ ಕೈ ಮೆಲ್ಲನೆ ಶಾಂತಿಯ ಹಣೆಯ ಮೇಲಾಡಿತು. ಅವಳು ಮತ್ತೂ ಗಟ್ಟಿಯಾಗಿ ಕಣ್ಣು ಮುಚ್ಚಿದಳು. ಆದರೆ ಮುಖ ಮಾತ್ರ ಹಣ್ಣು ತೊಂಡೆಯ ಹಾಗಾಗಿತ್ತು. ಅವರ ಕಣ್ಣಿಗದು ಗೋಚರವಾಗದೆ ಹೋಗ ಲಿಲ್ಲ. ಎಷ್ಟೋ ಹೊತ್ತಿನ ವರೆಗೆ ಅವರ ಕೈ ಆಕೆಯ ಹಣೆಯ ಮೇಲೆ ಆಡು ತ್ತಲೇ ಇತ್ತು. ಶಾಂತಿಯ ಹೃದಯದಲ್ಲಿ ಏನೇನೋ ಭಾವನೆಗಳು ಬಂದು ಹೋದುವು. ಆ ಕೈಯನ್ನು ಹಾಗೆಯೇ ಎತ್ತಿ ಕಣ್ಣಿಗೊತ್ತಿಕೊಳ್ಳಬೇಕೆಂದು ಮನಸ್ಸಾಯಿತು. ಆದರೆ ಅಷ್ಟು ಧೈರ್ಯವಿಲ್ಲ.

ಡಾಕ್ಟರರು ಹಣೆಯ ಮೇಲಿನ ಕೈಯನ್ನು ಇನ್ನೂ ಸರಿಸಿರಲಿಲ್ಲ. ಎಷ್ಟು ಹೊತ್ತಾಯಿತು, ಹಣೆಯ ಮೇಲೆ ಕೈಯಿರಿಸಿ; ಇನ್ನೂ ತೆಗೆಯುವುದಿಲ್ಲವೇ? ಇದೆಂಥ ಪರೀಕ್ಷೆ? ಅವರು ಆಕೆಯು ಕಣ್ಣು ತೆರೆಯುವುದನ್ನೇ ನಿರೀಕ್ಷಿಸು ತ್ತಿದ್ದರು. ಆಕೆಯ ಮುಖಭಾವ ಆಕೆ ಎಚ್ಚತ್ತಿರುವುದನ್ನು ಸಾರಿ ಹೇಳು ತ್ತಿತ್ತು. ಆದರೂ ಈ ಕಳ್ಳತನವೇಕೆ? ಅವರ ಮುಖದ ಮೇಲೆ ಸಂತಸದ ನಗುವೊಂದು ಮಿಂಚಿ ಮಾಯವಾಯಿತು. "ಶಾಂತೂ" ಎಂದು ಮೆಲ್ಲನೆ ಕರೆದು ಎಬ್ಬಿಸುವ ಮನಸ್ಸಾಯಿತು; ಆದರೆ ಬಾಯಿಯಿಂದ ಮಾತುಗಳು ಹೊರಡಲಿಲ್ಲ. ಅವಳೇನಾದರೂ ಅಪಾರ್ಥ ಕಲ್ಪಿಸಿಕೊಂಡರೆ? ಆದರೆ ಹಣೆಯ ಮೇಲಿನ ಕೈ ಮಾತ್ರ ಹಾಗೆಯೆ ಇತ್ತು.

ಶಾಂತಿಯ ಮನಸ್ಸಿನಲ್ಲಿ ದೊಡ್ಡ ಹೋರಾಟವೆದ್ದಿತು. ಹೇಗಾದರೂ

ಧೈರ್ಯ ಮಾಡಿಕೊಳ್ಳಬೇಕು; ಕಣ್ತೆರೆದು ಅವರೊಡನೆ ಮಾತಾಡಬೇಕು. ಬಹು ಪ್ರಯಾಸದಿಂದ ಹೇಗೋ ಕಣ್ತೆರೆದಳು; ಅವರನ್ನು ನೋಡುವ ಪ್ರಯತ್ನ ಮಾಡಿದಳು; ನೋಟಗಳು ಕೂಡಿದುವು; ಅವರ ನೋಟವನ್ನು ಎದುರಿಸುವ ಶಕ್ತಿ ಆಕೆಯಲ್ಲಿ ಇದ್ದಿಲ್ಲ. ಮತ್ತೆ ದೃಷ್ಟಿಯನ್ನು ಪಕ್ಕಕ್ಕೆ ಹೊರಳಿಸಿದಳು. ಮಾತನಾಡಬೇಕೆಂದು ಎಷ್ಟು ಪ್ರಯತ್ನ ಪಟ್ಟರೂ ಸಾಧ್ಯವಾಗಲಿಲ್ಲ.

"ಇನ್ನೇನೂ ಭಯಲಿಲ್ಲ, ಜ್ವರ ಬಿಟ್ಟಿದೆ; ಒಂದೆರಡು ದಿನ ವಿಶ್ರಾಂತಿ ತೆಗೆದುಕೊಳ್ಳಿ. ಸಂಜೆಗೆ ಬರುವಾಗ ಟಾನಿಕ್ಕು ತರುವೆ, ತೆಗೆದುಕೊಳ್ಳಿ. ಎಂಟೇ ದಿನಗಳಲ್ಲಿ ಮೊದಲಿನಂತಾಗುವಿರಿ."

ಅವರು ಆಕೆಯಿಂದ ಎಷ್ಟೋ ಮಾತುಗಳನ್ನು ನಿರೀಕ್ಷಿಸಿದ್ದರು. ಅವುಗಳಿಗೆ ಉತ್ತರವನ್ನೂ ಸಿದ್ಧಮಾಡಿಕೊಂಡೇ ಬಂದಿದ್ದರು. ಆದರೆ ಅವಳ ಮೌನವನ್ನು ಕಂಡು ತುಂಬಾ ನಿರಾಶೆಯಾಯಿತು.

ಅವಳು 'ನಿಮ್ಮ ಉಪಕಾರ ದೊಡ್ಡದು, ಅದನ್ನು ತೀರಿಸಲಾರೆ' ಎನ್ನಬಹುದು. ತಾನು ಸ್ನೇಹದಿಂದ ಅವಳ ತುಟಿಗಳ ಮೇಲೆ ಕೈಯಿರಿಸಿ— 'ಇಲ್ಲ, ನನ್ನದೇನು ದೊಡ್ಡ ಕೆಲಸವಲ್ಲ. ನಿಮಗಾಗಿ ಏನು ಮಾಡಲೂ ನಾನು ಸಿದ್ಧ' ಎಂದಾಗ ಆಕೆ ಒಲವಿನ ನೋಟವನ್ನು ತನ್ನೆಡೆಗೆ ಬೀರಬಹುದು; ಮುಗುಳು ನಗಬಹುದು. ಆಗ ತಾನು........ಹೀಗೆ ಎಷ್ಟೋ ಮಧುರ ಕಲ್ಪನೆಗಳನ್ನು ಮಾಡಿಕೊಂಡು ಅವರು ಬಂದಿದ್ದರು. ಆದರೆ ಶಾಂತಿ ಮೌನ. ತನ್ನ ಕಡೆ ನೋಡುತ್ತಲೂ ಇಲ್ಲ. ನನ್ನ ವರ್ತನೆ ಆಕೆಗೆ ಬೇಸರವಾಗಿರಬಹುದೇ ?

"ಹಾಗಾದರೆ ಹೋಗಲೇ ನಾನು ?" ತೀರಾ ನಿರಾಶೆಯ ದನಿಯಲ್ಲಿ ಕೇಳಿದರು.

ಶಾಂತಿಗೆ ಗಾಬರಿಯಾಯಿತು. ಇಷ್ಟು ಬೇಗನೆ ಅವರು ಹೋಗಬಾರದು ಎಂದು ಬಯಸಿತು ಅವಳ ಹೃದಯ. ಇನ್ನು ತಾನು ಸುಮ್ಮನಿದ್ದರೆ ಅವರು ಹೋಗಿಬಿಡುವರು. "ಅಷ್ಟೇನು ಅವಸರ ಸ್ವಲ್ಪ ನಿಲ್ಲಿ" ಎನ್ನುವ ಮನಸ್ಸಾಯಿತು. ಆದರೆ ಹೇಗೆ ಹೇಳುವುದು ? ನನ್ನ ಮನಸ್ಸಿನ ಭಾವನೆಗಳನ್ನು ಅವರು ತಿಳಿದಿದ್ದರೆ ?

ಅವರು ಎದ್ದು ನಿಂತರು. ಶಾಂತಿಯ ವರ್ತನೆಯಿಂದ ಅವರು ತೀರಾ ನಿರಾಶರಾಗಿದ್ದರು ; ಮತ್ತೆ ಅಲ್ಲಿ ನಿಲ್ಲುವುದು ಅವರಿಗೆ ಸರಿಯೆನಿಸಲಿಲ್ಲ.

"ಸ್ವಲ್ಪ ನಿಲ್ಲಿ." ಹೇಗೋ ಬಹು ಪ್ರಯಾಸದಿಂದ ಈ ಮಾತು ಅವಳ ಬಾಯಿಯಿಂದ ಹೊರಟಿತ್ತು.

ಮೋಡ ಕವಿದ ಅವರ ಮುಖ ಪ್ರಸನ್ನವಾಯಿತು. ಹೃದಯ ಆನಂದ ದಿಂದ ಅರಳಿತು. ಆ ಮಾತನ್ನೇ ಬಯಸಿ ಅವರು ನಿಂತಿದ್ದರು. ಅಲ್ಲಿಯೇ ಆಕೆಯ ಪಕ್ಕದಲ್ಲಿ ಕುಳಿತರು.

ಆದರೆ ಶಾಂತಿಯ ಅವಸ್ಥೆ ತೀರ ಕಷ್ಟಕ್ಕಿಟ್ಟಿತು. ಬಾಯಿಯಿಂದ "ನಿಲ್ಲಿ" ಎಂದೇನೋ ಹೇಳಿದ್ದಳು. ಆದರೆ ಮರುಕ್ಷಣದಲ್ಲಿ ತನ್ನ ಧೈರ್ಯವನ್ನು ನೆನೆದು ತುಂಬಾ ನಾಚಿಕೆಯಾಯಿತು. ಹೊರಡಲು ಎದ್ದು ನಿಂತವರು ಪುನಃ ಕುಳಿತಿದ್ದರು. "ಯಾಕೆ? ಏನು?" ಎಂದು ಕೇಳಿದರೆ ಏನು ಹೇಳಲಿ? ಛೀ, ನಾನೆಂತಹ ತಪ್ಪು ಮಾಡಿದೆ. ಸುಮ್ಮನಿರಬೇಕಿತ್ತು; ಈಗೇನು ಮಾಡಲಿ?....

ಡಾಕ್ಟರರು ಸ್ವಲ್ಪ ಹೊತ್ತು ಮೌನವಾಗಿ ಕುಳಿತಿದ್ದರು. ಮುಂದೇನು ಮಾಡುವುದೆಂದು ಅವರಿಗೂ ತೋಚದಾಯಿತು. "ನಿಲ್ಲಿ" ಎಂದವಳು ಮುಂದೇನಾದರೂ ಕೇಳಬಹುದೆಂದು ಸ್ವಲ್ಪ ಸಮಯದ ವರೆಗೆ ನಿರೀಕ್ಷಿಸಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ.

"ತುಂಬಾ ಆಯಾಸವಾಗಿದೆಯೇ? ಬೆಳಿಗ್ಗೆ ಗಂಜೀ ಊಟ ಮಾಡಿದಿರಾ?" ಎಂದರು.

"ಇಲ್ಲ."

"ಏಕೆ, ತುಂಬಾ ಹೊತ್ತಾಯಿತಲ್ಲ? ದಣಿದ ದೇಹ, ಹಾಗೆ ನಿಯಮ ತಪ್ಪಿ ಆಹಾರ ತೆಗೆದುಕೊಳ್ಳಬೇಡಿ."

ಹೌದು, ತುಂಬಾ ಹೊತ್ತಾಯಿತು. ಅದಕ್ಕೆ ಕಾರಣವೂ ನೀವೇ ಎಂದು ಹೇಳಬೇಕೆನಿಸಿತು. ತಾನು ಇನ್ನೂ ಊಟ ಮಾಡದಿರುವ ಕಾರಣ ಅವರಿಗೆ ತಿಳಿದರೆ? ಛೀ, ಎಂತಹ ನಾಚಿಕೆಗೇಡು—ಅವಳ ಮುಖದ ಬಣ್ಣ ಕೆಂಪಾಯಿತು—ಅವರ ಪ್ರಶ್ನೆಗೆ ಉತ್ತರವೀಯಲಿಲ್ಲ.

ಆಕೆ ತಮ್ಮ ಮುಖ ನೋಡಿ ಮಾತನಾಡಬೇಕು ಎನ್ನುವ ಆಶೆಯಿತ್ತು ಡಾಕ್ಟರರಿಗೆ. "ನನ್ನ ಮೇಲೆ ಸಿಟ್ಟೇ ನಿಮಗೆ?" ಕೇಳಬಾರದ ಪ್ರಶ್ನೆ. ಅದನ್ನವರು ಕೇಳಬಾರದಿತ್ತು. ಅದರಲ್ಲೂ ಶಾಂತಿಯಂತಹ ಮೃದು ಮನಸ್ಸಿನವಳೊಡನೆ ಕೇಳಬಾರದಿತ್ತು, ಕೇಳಿಬಿಟ್ಟರು.

ನಾಚಿಕೆ ಬಿಟ್ಟು ಮಲಗಿದಲ್ಲಿಯೇ ಅವರ ಕಡೆಗೆ ತಿರುಗಿದಳು. ತಾನು ಅವರ ಮೇಲೆ ಸಿಟ್ಟಾಗುವೆನೇ ? ಆದರೆ ಇಲ್ಲ ಎನ್ನಲಾಗಲಿಲ್ಲ. ಮೌನವಾಗಿ ನೋಡುತ್ತಿದ್ದಳು.

" ಅಷ್ಟೂ ತಿಳಿಯದೆ ನಿಮಗೆ ? " ಎನ್ನುವಂತಿತ್ತು ಅವಳ ನೋಟ.

" ನನ್ನ ಮಾತು ನಿಮ್ಮನ್ನು ನೋಯಿಸಿದ್ದರೆ ಕ್ಷಮಿಸಿ, ನಿಮ್ಮನ್ನು ನೋಯಿಸಬೇಕೆಂದು ನಾನು ಹಾಗೆ ಕೇಳಿರಲಿಲ್ಲ. "

ಮತ್ತೂ ದೊಡ್ಡ ಆಘಾತ. ಅದನ್ನವರು ಹೇಳಬೇಕೇ ? ಅಷ್ಟೂ ಆಕೆಗೆ ತಿಳಿಯುವುದಿಲ್ಲವೇ ? ಶಾಂತಿಯ ಕಣ್ಣಲ್ಲಿ ನೀರು ಹರಿಯಿತು. ಧೈರ್ಯದಿಂದ ಅವರನ್ನೇ ನೋಡಿದಳು. ಒಂದು ಕ್ಷಣದ ಹಿಂದೆ ಇದ್ದ ನಾಚಿಕೆ ಅಲ್ಲಿರಲಿಲ್ಲ. ಬದಲು ಕ್ಷಮಾಯಾಚನೆಯ ಭಾವವಿತ್ತು. ಹೃದಯದ ದನಿಯನ್ನು ಆಲಿಸುವ ಶಕ್ತಿ ಅವರಿಗಿದ್ದರೆ ಆಕೆಯ ಸಮಸ್ಯೆ ಬಗೆಹರಿಯುತ್ತಿತ್ತು.

" ನಾನು ತಪ್ಪಿತಸ್ಥೆ, ಅಷ್ಟು ಸ್ನೇಹದಿಂದ ನನ್ನನ್ನು ನೋಡಿಕೊಳ್ಳಲು ಬಂದವರ ಜೊತೆಯಲ್ಲಿ ನಾನು ನಗುನಗುತ್ತ ಮಾತನಾಡಬೇಕಿತ್ತು. ನನ್ನನ್ನು ಕ್ಷಮಿಸಿ" ಎಂದು ಪುನಃ ಪುನಃ ಅನ್ನುತ್ತಿರುವ ಅವಳ ಹೃದಯದ ನುಡಿ ಅವರಿಗೆ ಕೇಳಿಸುತ್ತಿತ್ತು.

ಡಾಕ್ಟರರ ಮಾತಿಗೆ ಏನು ಹೇಳಬೇಕೆಂಬುದೇ ಆಕೆಗೆ ತಿಳಿಯದಾಯಿತು. ತುಂಬು ಕಣ್ಣುಗಳಿಂದ ಅವರನ್ನೇ ನೋಡಿದಳು. " ನಾನು ನಿಮ್ಮವಳು ಅಷ್ಟೂ ತಿಳಿಯುವುದಿಲ್ಲವೇ ನಿಮಗೆ ? " ಎನ್ನುವ ಹಾಗೆ.

ಆದರೆ ಅದನ್ನು ತಿಳಿದುಕೊಳ್ಳುವ ಶಕ್ತಿ ಅವರಲ್ಲಿ ಇದ್ದಿಲ್ಲ. ಅವರು ಎದ್ದು ನಿಂತರು. ಅವಳ ಕಣ್ಣೀರನ್ನು ಅವರು ಬೇರೆ ರೀತಿಯಲ್ಲಿ ಅರ್ಥ ಮಾಡಿಕೊಂಡರು. " ನಾನಿಲ್ಲಿರುವುದೇ ಅವಳಿಗೆ ಮನಸ್ಸಿಲ್ಲ, ಹಾಗಾದರೆ ನಿಲ್ಲಿ ಎಂದು ಹೇಳಿದಳೇಕೆ ? " ಅಷ್ಟೆಲ್ಲ ವಿಚಾರ ಮಾಡುವ ಗೋಜಿಗೆ ಅವರು ಹೋಗಲಿಲ್ಲ. ಅವರು ವೈದ್ಯರು ; ನೂರಾರು ಜನರ ಎದೆಯನ್ನು ಸೀಳಿ ಅವರೊಳಗಿದ್ದ ಎದೆಗುಂಡಿಗೆಯ ಅಳತೆ, ತೂಕ ಹೆಚ್ಚು-ಕಡಿಮೆಗಳನ್ನು ತಿಳಿದುಕೊಳ್ಳುವ ಪಾಠ ಅವರಿಗೆ ದೊರೆತಿತ್ತು. ಆದರೆ ಅಲ್ಲಿ ಎಂಥಾ ಭಾವನೆ ಮೂಡುವುದಕ್ಕೆ ಸಾಧ್ಯ ಎನ್ನುವ ವಿಚಾರ ಅವರಿಗೆ ತಿಳಿದಿರಲಿಲ್ಲ.

" ನಾನಿನ್ನು ಹೊರಡುವೆ. ಸಾಧ್ಯವಾದರೆ ಸಂಜೆಗೆ ಬಂದು ನೋಡುವೆ. ಕ್ಷಮಿಸಿ. "

ಅವರು ಹೊರಟು ಹೋದರು. ಶಾಂತಿ ಬಿರುಗಾಳಿಯಂತೆ ಎದ್ದು ಕುಳಿತಳು.

" ಕ್ಷಮಿಸಿ " ಎಂಥಾ ಮಾತು. ಯಾರು ಯಾರನ್ನು ಕ್ಷಮಿಸಬೇಕು ? ಎದ್ದು ಬಾಗಿಲ ಬಳಿ ಬಂದಳು. ಅವರು ತುಂಬಾ ದೂರ ಹೋಗಿದ್ದರು. ಆಕೆಗೆ ತುಂಬಾ ದುಃಖವಾಯಿತು—ಅತ್ತಳು. ಈಗಲೇ ಓಡಿ ಅವರ ಕಾಲ ಮೇಲೆ ಬಿದ್ದು ಕ್ಷಮೆ ಕೇಳಲು ಸಾಧ್ಯವಾಗಿದ್ದರೆ ?

" ಅಕ್ಕಾ ಊಟ ಮಾಡುವುದಿಲ್ಲವೇ, ಆಗಲೇ ಗಂಜಿ ಆರಿತು. "

ಆಕೆ ಅವಸರವಾಗಿ ಕಣ್ಣೀರನ್ನು ಒರೆಸಿಕೊಂಡು ಒಳಗೆ ಹೋದಳು.

ಡಾಕ್ಟರರು ಹೊರಟು ಹೋದೊಡನೆ ಆಕೆಯ ಹೃದಯ ತುಂಬಾ ಭಾರವಾಗಿತ್ತು. ಅವರು ಹೊರಟು ಹೋದರೆಂದಲ್ಲ. ಆದರೆ ಹೋಗುವಾಗ ತನ್ನೊಡನೆ ಕ್ಷಮೆ ಕೇಳಿದರಲ್ಲ.

ನನ್ನ ವರ್ತನೆಯಿಂದ ಅವರಿಗೆ ಎಷ್ಟು ಬೇಸರವಾಗಿರಬೇಕು. ನಾನೊಬ್ಬಳು ಹುಚ್ಚಿ. ಸರಿಯಾಗಿ ಮಾತನಾಡಬೇಕಾದರೆ ನನಗೆ ಸಂಕೋಚವೇಕೆ? ಅವರು ತುಂಬಾ ಒಳ್ಳೆಯವರು. ಮಾತನಾಡಿದರೆ ನನ್ನನ್ನೇನು ತಿನ್ನುವುದಿಲ್ಲ.

ತನ್ನ ವಿಚಾರವನ್ನೆಣಿಸಿ ಅವಳಿಗೆ ನಗು ಬಂದಿತು. ಹೇಗೂ ಸಂಜೆಗೆ ಬಂದೇ ಬರುವರು. ಆಗ ಪ್ರಯತ್ನ ಪಟ್ಟು ಸರಿಯಾಗಿ ಮಾತನಾಡುವೆ.

ಎಂದಿನಂತೆ ಅಂದು ಮಲಗಿಕೊಂಡೇ ಸಮಯ ಕಳೆಯಲಿಲ್ಲ. ಸ್ನಾನಕ್ಕೆ ನೀರು ಕಾಯಿಸಿದಳು. ಮಿಂದು ಬಟ್ಟೆ ಬದಲಿಸಿ ಅಡುಗೆ ಮನೆಗೆ ನಡೆದಳು.

" ಇನ್ನೂ ಎರಡು ದಿನ ವಿಶ್ರಾಂತಿ ಬೇಕೆಂದು ಡಾಕ್ಟರರು ಹೇಳಿಲ್ಲವೇ ಅಕ್ಕಾ ? "

" ಅವರ ಮಾತೆಲ್ಲವನ್ನೂ ಕೇಳಿದೆಯಾ ಗೋಪು ನೀನು ? "

" ಹೌದಕ್ಕ, ನಾನು ಪಕ್ಕದ ಕೋಣೆಯಲ್ಲಿಯೇ ಇದ್ದೆ. ಎಷ್ಟು ಒಳ್ಳೆಯವರಕ್ಕ ಅವರು. ಎಷ್ಟು ಪ್ರೀತಿಯಿಂದ ನಿನ್ನನ್ನು ಮಾತನಾಡಿಸುತ್ತಿದ್ದರು. ಆದರೆ ನೀನು ಒಂದೇ ಒಂದು ಮಾತನ್ನೂ ಆಡಲಿಲ್ಲ.

ತಮ್ಮನ ಮಾತನ್ನು ಕೇಳಿ ಅವಳಿಗೆ ತುಂಬಾ ನಾಚಿಕೆಯಾಯಿತು. ಸ್ನೇಹ

ದಿಂದ ಅವನ ಗಲ್ಲ ತಟ್ಟಿದಳು. ಆದರೆ ಮಾತೇನೂ ಆಡಲಿಲ್ಲ. ಅವನ ಗಮನ ವನ್ನು ಬೇರೆ ಕಡೆಗೆ ತಿರುಗಿಸಿದಳು.

" ಇನ್ನು ನಾನು ಅಡುಗೆ ಮಾಡಬಹುದು ಗೋಪು. ನೀನು ಸ್ವಲ್ಪ ಸಹಾಯ ಮಾಡಿದರೆ ಸಾಕು. "

" ನಿನಗೆ ಆಯಾಸವಾಗುವುದಿಲ್ಲವೇ ಶಾಂತಕ್ಕ ? "

" ಇಲ್ಲ ಗೋಪೂ. ನೀವೆಲ್ಲ ಇರುವಾಗ ನನಗೆ ಎಲ್ಲಿಯ ಆಯಾಸ? " ಅವಳ ಆಂದಿನ ' ನೀವೆಲ್ಲ 'ದಲ್ಲಿ ಮೊದಲಸ್ಥಾನ ಡಾಕ್ಟರರದು. ಆದರೆ ಅದು ಆಕೆಗೆ ಮಾತ್ರ ಗೊತ್ತು.

೬

ಡಾಕ್ಟರರು ಆಸ್ಪತ್ರೆಗೆ ಮುಟ್ಟುವಾಗ ಅಲ್ಲಿ ತುಂಬಾ ಜನರು ನೆರೆದಿದ್ದರು.

ಶಾಂತಿಯನ್ನು ಅಗಲಿ ಬಂದ ಅವರ ಮನಸ್ಸು ತುಂಬಾ ಅಸ್ವಸ್ಥವಾಗಿತ್ತು. ಬೇಸರದ ಜೊತೆಯಲ್ಲಿ ತುಂಬಾ ಸಿಟ್ಟೂ ಬಂದಿತ್ತು.

ಆಸ್ಪತ್ರೆಗೆ ಬಂದು ಕುರ್ಚಿಯ ಮೇಲೆ ಕುಳಿತೊಡನೆ ರೋಗಿಗಳ ಆಕ್ರಮಣಕ್ಕೆ ಆರಂಭವಾಯಿತು. " ಎಲ್ಲರೂ ಹೊರಗೆ ನಡೆಯಿರಿ. ಒಬ್ಬೊಬ್ಬರಾಗಿ ಬಂದರೆ ಮಾತ್ರ ಮದ್ದು ಕೊಡುವೆ ! "

ಅವರ ಗರ್ಜನೆಗೆ ಹೆದರಿ ಎಲ್ಲರೂ ಹಿಂದಕ್ಕೆ ಸರಿದರು. ಯಾವಾಗಲೂ ಡಾಕ್ಟರು ಬಂದವರ ಮೇಲೆ ಈ ರೀತಿ ಸಿಟ್ಟಾದುದಿಲ್ಲ. ಅವರ ಸಿಡುಕಿನ ದನಿ ಕೇಳಿ ರಾಮರಾಯರು ಗಾಬರಿಯಾಗಿ ಹೊರಗೆ ಬಂದರು. ಡಾಕ್ಟರರ ಮುಖ ನೋಡಿದರು. ಇವರಿಗೆ ಸಿಟ್ಟು ಬಂದಿದೆ; ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲಿ ಎಂದುಕೊಂಡರು.

" ಡಾಕ್ಟರ್ ನಿಮಗೆ ಬೇಸರವಾಗದಿದ್ದರೆ ಒಂದು ಮಾತು ಕೇಳಲೇ ? "

" ಏನು ? " ಹುಬ್ಬು ಮೇಲಕ್ಕೇರಿಸಿ ಕೇಳಿದರವರು.

" ನಿಮ್ಮ ಮನಸ್ಸಿಗೆ ನೆಮ್ಮದಿಯಿಲ್ಲ. ನಿಮ್ಮ ಮುಖವೇ ಅದನ್ನು ಹೇಳುತ್ತದೆ. ನೀವು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ರೋಗಿಗಳನ್ನು ನಾನೇ

ವಿಚಾರಿಸಿಕೊಳ್ಳುವೆ. ”

ಅವರು ಒಂದು ಕ್ಷಣ ವಿಚಾರ ಮಾಡಿದರು. ನಿಜವಾಗಿಯೂ ಅವರಿಗೆ ವಿಶ್ರಾಂತಿ ಬೇಕಿತ್ತು.

“ ಸರಿ ರಾಮರಾಯರೇ, ನಾನು ನನ್ನ ಕೋಣೆಯಲ್ಲಿ ಹೋಗಿ ಕುಳಿತು ಕೊಳ್ಳುವೆ; ಅವಶ್ಯ ಬಿದ್ದರೆ ಕರೆಯಿರಿ ” ಎಂದು ಒಳಗೆ ಹೋದರು.

ರಾಮರಾಯರ ಮುಖದಲ್ಲಿ ಒಂದು ರೀತಿಯ ಕಳೆ ಮೂಡಿತು. ನೆರ ದಿದ್ದ ರೋಗಿಗಳನ್ನು ದಿಟ್ಟಿಸಿ ನೋಡಿದರು. ತೀರ ಬಡವರು; ಜೀವಂತ ಅಸ್ಥಿ ಪಂಜರಗಳು. ಒಬ್ಬರು ಕೆಮ್ಮುತ್ತಿದ್ದರೆ ಇನ್ನೊಬ್ಬರು ನೋವಿಗೆ ನರಳುತ್ತಿ ದ್ದರು. ಮತ್ತೊಬ್ಬರಿಗೆ ನಡೆಯುವ ತ್ರಾಣವಿರಲಿಲ್ಲ. ಆದರೆ ಎಲ್ಲರಿಗೂ ಇದ್ದ ಸಾಮಾನ್ಯ ರೋಗವೆಂದರೆ ಬಡತನ. ಒಬ್ಬರ ಮೈಮೇಲೂ ಸರಿಯಾದ ಬಟ್ಟೆ ಇರಲಿಲ್ಲ; ಇದ್ದರೂ ಹರಕು ಮಾಸಿದ ಬಟ್ಟೆ.

ಡಾಕ್ಟರರಿಗೆ ಸಿಟ್ಟು ಬಂದುದರಲ್ಲಿ ಅವರಿಗೆ ಆಶ್ಚರ್ಯವೇನೂ ಕಾಣಿಸ ಲಿಲ್ಲ. ಎಲ್ಲರನ್ನೂ ಸರಿಯಾಗಿ ವಿಚಾರಿಸಿ ಮದ್ದು ಕೊಡುವುದು ಸುಲಭದ ಕೆಲಸವಾಗಿರಲಿಲ್ಲ. ಆದರೆ ರಾಮರಾಯರ ಪಾಲಿಗದು ಕಷ್ಟದ ವಿಚಾರವಾಗಿ ರಲಿಲ್ಲ. ಅವರು ಹೆಚ್ಚು ವಿಚಾರ ಮಾಡದೆ ಬಂದವರನ್ನೆಲ್ಲಾ ಸಾಲಾಗಿ ಹೊರ ಜಗುಲಿಯ ಮೇಲೆ ಕುಳ್ಳಿರಿಸಿದರು. ಒಬ್ಬೊಬ್ಬರ ವರದಿಯನ್ನು ಕೇಳಿ ಅವರಿಗೆ ಮದ್ದು ಕೊಟ್ಟು ಕಳುಹಿಸತೊಡಗಿದರು. ಒಬ್ಬರನ್ನು ವಿಚಾರಿಸಿ ಚೀಟಿ ಬರೆದು ಕೊಡುವುದು, ಮತ್ತೆ ಅದೇ ಚೀಟಿಯನ್ನೂ, ಬಾಟ್ಲಿಯನ್ನೂ ತೆಗೆದುಕೊಂಡು ಒಳಕೋಣೆಗೆ ಹೋಗಿ ಮದ್ದು ಕೊಡುವುದು. ಅಲ್ಲಿಗಿಲ್ಲಿಗೆ ಓಡಾಡಿ ಎಷ್ಟು ಆಯಾಸವಾದರೂ ಅವರು ಕೆಲಸ ನಿಲ್ಲಿಸಲಿಲ್ಲ. ಮಧ್ಯಾಹ್ನವಾಯಿತು; ಊಟದ ಪಾತ್ರೆ ಬಂದು ಕೋಣೆಯ ಮೂಲೆ ಸೇರಿತು.

ಇನ್ನೂ ಕೆಲವು ಮಂದಿಯಿದ್ದಾರೆ. ಅವರನ್ನು ಕಳುಹಿಸಿ ಕೊಟ್ಟೇ ಊಟ ಮಾಡುವೆ ಎಂದುಕೊಂಡರು. ಗಂಟೆ ಎರಡಾಯಿತು, ಮೂರಾಯಿತು. ಇನ್ನು ಊಟ ಮಾಡೋಣವೆಂದು ಏಳುವುದರೊಳಗಾಗಿ ಇನ್ನೂ ಮೂರು-ನಾಲ್ಕು ರೋಗಿಗಳು ಬಂದರು. ಸರಿ, ಊಟದ ಪ್ರಶ್ನೆ ಹಿಂದಾಯಿತು. ಸಂಜೆ ನಾಲ್ಕು ಗಂಟೆ ಆಗುವಾಗ ಡಾಕ್ಟರರು ಬಂದರು.

“ ಎಲ್ಲರೂ ಹೋದರೇ? ಎಲ್ಲರಿಗೂ ಮದ್ದು ಕೊಟ್ಟು ಕಳುಹಿಸಿದಿರಾ? ”

" ಹೌದು ಸ್ವಾಮಿ. "

" ಊಟವಾಯಿತೇ ನಿಮ್ಮದು ? "

" ಇನ್ನೂ ಆಗಿಲ್ಲ ; ಬಂದವರನ್ನೆಲ್ಲ ಒಮ್ಮೆಗೆ ಕಳುಹಿಸಿ ಕೊಟ್ಟೇ ಊಟ ಮಾಡೋಣವೆಂದು ತಡೆದೆ. "

ಅವರಿಗೆ ಆಶ್ಚರ್ಯವಾಯಿತು. ಉಣ್ಣದೆ ದುಡಿಯುವ ಪ್ರಾಣಿ ಎಂಥಾ ದಪ್ಪಾ, ಎಂದಾಯಿತವರಿಗೆ. ಆದರೆ ರಾಮರಾಯರ ಮುಖದ ಮೇಲೆ ಬೇಸರದ ಕಳೆಯಿರಲಿಲ್ಲ. ತೃಪ್ತಿಯಿಂದ ನಗುತ್ತಿದ್ದರು. ಆ ದಣಿವಿನೆಡೆಯಲ್ಲಿಯೂ ನಗು. " ಈಗಲಾದರೂ ಹೋಗಿ ಊಟ ಮಾಡಿ ಕಂಪೌಂಡರರೇ. "

ರಾಮರಾಯರು ಊಟಕ್ಕೆ ಹೊರಟರು. ಎಲ್ಲವೂ ಆರಿ ತಣ್ಣಗಾಗಿತ್ತು. ಉಣ್ಣುವ ಮನಸ್ಸಾಗಲಿಲ್ಲ. ಅದನ್ನು ಹಾಗೆಯೇ ಮುಚ್ಚಿಟ್ಟು ಮುಖ ತೊಳೆದುಕೊಂಡರು. ಅವರ ಪಾಲಿಗೆ ಅಂದು ಉಪವಾಸವೇ ಗತಿಯಾಯಿತು. ಆದರೆ ಆದರಿಂದ ಅವರಿಗೆ ಬೇಸರವೇನೂ ಆಗಿರಲಿಲ್ಲ.

ಅಂದಿನ ಘಟನೆಯಿಂದಾಗಿ ಬಂದ ಜನರಿಗೆ ರಾಮರಾಯರ ಮೇಲೆ ಒಂದು ರೀತಿಯ ಗೌರವ ಹುಟ್ಟಿತ್ತು. ಅವರು ರೋಗಿಗಳನ್ನು ವಿಚಾರಿಸಿಕೊಳ್ಳುವ ನಯ ರೀತಿ, ತೋರುವ ಸ್ನೇಹ, ಇದೆಲ್ಲವನ್ನೂ ಕಂಡು ' ಇವರೊಬ್ಬರು ಮಹಾನುಭಾವರು ' ಎಂದು ಮನಸ್ಸಿನಲ್ಲಿಯೇ ಅವರನ್ನು ಹೊಗಳುತ್ತಾ ಮನೆಗೆ ಹಿಂತಿರುಗುತ್ತಿದ್ದರು.

ಗಂಟೆ ಐದಕ್ಕೆ ಹತ್ತಿರವಾಯಿತು. ಕುರ್ಚಿಯ ಮೇಲೆ ಕುಳಿತಿದ್ದ ಡಾಕ್ಟರರಿಗೆ ಒಮ್ಮೆಲೇ ಶಾಂತಿಯ ನೆನಪಾಯಿತು. ಸ್ಟೆತೋಸ್ಕೋಪನ್ನು ಕೈಯಲ್ಲಿ ಹಿಡಿದುಕೊಂಡು ಎದ್ದು ನಿಂತರು.

" ನಿಮ್ಮ ತಂಗಿಯನ್ನೊಮ್ಮೆ ನೋಡಿಕೊಂಡು ಬರುವೆ ರಾಮರಾಯರೇ ? "

" ಇನ್ನೂ ಜ್ವರವಿದೆಯೇ ಅವಳಿಗೆ ? "

" ಬೆಳಿಗ್ಗೆ ಇದ್ದಿಲ್ಲ. ಈಗ ಹೇಗಿದೆಯೋ ನೋಡಬೇಕು. "

ರೋಗಿಯ ಪರೀಕ್ಷೆಗೆ ಹೊರಟ ಡಾಕ್ಟರರನ್ನು ತಡೆಯುವುದಿದೆಯೆ ? ಡಾಕ್ಟರರು ಮತ್ತೆ ಹೆಚ್ಚಿಗೆ ಮಾತಾಡದೆ ಹೊರಹೊರಟರು.

ಮನಸ್ಸು ಅವಳನ್ನು ನೋಡಲು ಆತುರವಾಗಿದ್ದರೂ ಕಾಲುಗಳು ಹಿಂದಕ್ಕೆ

ಎಳೆಯುತ್ತಿದ್ದುವು. ಅವಳು ಮಾತನಾಡದಿದ್ದರೆ ? ನನ್ನ ಬರುವಿಕೆಗೆ ವಿಪರೀತ ಅರ್ಥ ಕಲ್ಪಿಸಿಕೊಂಡರೆ ?

ಆಕೆಯ ಅರ್ಥ-ಅನರ್ಥಗಳಿಂದ ಡಾಕ್ಟರರಿಗೆ ಆಗಬೇಕಾದುದೇನೂ ಇರಲಿಲ್ಲ. ಆದರೆ ಅವಳನ್ನವರು ಪ್ರೀತಿಸುತ್ತಿದ್ದರು, ಅದಕ್ಕಾಗಿಯೇ ಯೋಚನೆ. ಆಕೆಯ ದೃಷ್ಟಿಯಲ್ಲಿ ಕೆಟ್ಟವನೆನಿಸಿಕೊಳ್ಳಲು ಅವರು ಸಿದ್ಧರಿರಲಿಲ್ಲ. ಅವಳ ಮನೆ ಬಂದಿತು. ಮನಸ್ಸು ಅಳುಕಿದರೂ ಧೈರ್ಯಮಾಡಿ ಒಳಪ್ರವೇಶಿಸಿದರು.

ತಮ್ಮ ಕಣ್ಣುಗಳನ್ನು ನಂಬಲಾಗಲಿಲ್ಲ ಅವರಿಂದ. ಬೆಳಗಿನಂತೆ ಈಗಲೂ ಮಲಗಿಯೇ ಇದ್ದಳು. ಮುಖದ ಮೇಲೆ ಮಂದಹಾಸ ಲಾಸ್ಯವಾಡುತ್ತಿತ್ತು. ಗಲ್ಲಗಳು ನಾಚಿಕೆಯಿಂದ ಕೆಂಪಾಗಿದ್ದುವು. ತನ್ನ ಸ್ವಾಗತಕ್ಕಾಗಿ ಈ ಸಿದ್ಧತೆ ಇರಬಹುದೇ ? ಒದ್ದೆಯಾದ ಕೂದಲುಗಳನ್ನು ಹರಡಿಕೊಂಡು ಮಲಗಿದ್ದಳು. ಹೊಸ ಸೀರೆಯನ್ನು ತನಗಾಗಿಯೇ ಉಟ್ಟಂತಿತ್ತು. ಮನಸ್ಸು ಆನಂದದಿಂದ ಉಬ್ಬಿಹೋದರೂ ಹೇಗೋ ಸಾವರಿಸಿಕೊಂಡರು.

ಕಾಲ ಸಪ್ಪಳವನ್ನು ಕೇಳಿ ಶಾಂತಿ ಕೊಂಚ ಅಳುಕಿದರೂ ಮುಖದ ಮೇಲಿದ ನಗು ಮಾಸಲಿಲ್ಲ; ಡಾಕ್ಟರರು ಮೆಲ್ಲನೆ ಆಕೆಯ ಮೇಲೆ ಕೈಯಿರಿಸಿದರು. ಹಿಂದಿನಂತೆ ಅವರು ನಿರಾಶರಾಗಬೇಕಾದ ಅವಶ್ಯಕತೆಯಿದ್ದಿಲ್ಲ. ಇವರ ಕೈಯ ಸ್ಪರ್ಶವಾದ ಒಂದೆರಡು ನಿಮಿಷಗಳಲ್ಲಿ ಆಕೆ ಕಣ್ದೆರೆದಳು. ನಾಚಿಕೆ ಆವರಿಸಿದರೂ ಮುಖ ತಿರುಗಿಸಲಿಲ್ಲ. ಅವರನ್ನು ಕಂಡು ನಗುವ ಪ್ರಯತ್ನ ಮಾಡಿದಳು.

ಡಾಕ್ಟರರೇ ಕಣ್ಣು ಮುಚ್ಚಿಕೊಳ್ಳಬೇಕಾಯಿತು. ಬಿಡಿಬಿಡಿಯಾಗಿ ಹರಡಿಸಿದ ಆಕೆಯ ನೀಳವಾದ ಕಲೆಗೂದಲು, ನಾಚುವ ಚಂಚಲ ಕಣ್ಣುಗಳ ಮಧುರ ನೋಟ, ಎಲ್ಲವೂ ಕನಸಿನಂತೆ ಕಂಡಿತು. ಶಾಂತಿ ಆ ಗಳಿಗೆಯ ಮಟ್ಟಿಗೆ ಅವರ ಪಾಲಿಗೆ ಸ್ವರ್ಗದ ಅಪ್ಸರೆಯಾಗಿ ಕಂಡಳು. ಇನ್ನೂ ಮಧುರವಾಗಿ ನಗುತ್ತಿರುವ ಆಕೆಯ ತುಟಿಗಳಿಗೆ ಮುತ್ತಿಡುವ ಬಯಕೆಯಾಯಿತು; ಆದರೆ ಧೈರ್ಯವಾಗಲಿಲ್ಲ.

"ಸ್ನಾನ ಮಾಡಿದಿರಾ ?" ಮೌನವನ್ನು ಸಹಿಸಲಾರದೆ ಅವರು ಪ್ರಶ್ನಿಸಿದರು. ಆಕೆಯ ಇರುವಿಕೆಯೇ ಅದಕ್ಕುತ್ತರ ಕೊಡುವಂತಿತ್ತು, ಅದರೂ ಪ್ರಶ್ನೆ.

" ಹೂಂ " ಅದಕ್ಕಿಂತ ಹೆಚ್ಚಿಗೆ ಹೇಳುವ ಸಾಮರ್ಥ್ಯ ಆಕೆಯಲ್ಲಿದ್ದಿಲ್ಲ.

" ಇನ್ನು ಒಂದು ದಿನ ಬಿಟ್ಟರೆ ಚೆನ್ನಾಗಿತ್ತು. ಇರಲಿ, ಗಾಳಿಗೆ ಹೆಚ್ಚು ತಿರುಗಾಡಬೇಡಿ. ನಿಮಗಾಗಿ ಟಾನಿಕ್ಕು ತಂದಿದ್ದೇನೆ."

ಕಿಸೆಯಿಂದ ಸಾಧಾರಣ ಬಾಟ್ಲಿಯೊಂದನ್ನು ತೆಗೆದು ಪಕ್ಕದಲ್ಲಿರಿಸಿದರು.

ಆಕೆ ಏನೂ ಹೇಳುವಂತಿರಲಿಲ್ಲ. ಕಣ್ಣುಗಳಿಂದಲೇ ಕೃತಜ್ಞತೆಯನ್ನು ಸೂಚಿಸಿದಳು. ಪುನಃ ಮೌನ ಆವರಿಸಿತು. ಡಾಕ್ಟರರಿಗೆ ತುಂಬಾ ಮಾತ ನಾಡಬೇಕೆಂದು ಆಶೆ. ಆದರೆ ಏನು ಮಾತನಾಡುವುದು ?

" ನೀವು ಮಾತನಾಡುವುದಿಲ್ಲವೇಕೆ ? ನನ್ನನ್ನು ಕಂಡರೆ ಭಯವಾಗು ತ್ತಿದೆಯೇ ? "

ಇದು ಅವಳು ಉತ್ತರಿಸಬೇಕಾದ ಪ್ರಶ್ನೆಯಲ್ಲ; ಉತ್ತರಿಸುವಂತೆಯೂ ಇಲ್ಲ. ಸುಮ್ಮನೆ ಅವರ ಮುಖವನ್ನು ನೋಡಿ ನಕ್ಕಳು. ಅವರಿಗೆ ಉತ್ತರ ದೊರೆಯಿತು.

"ಎರಡೇ ದಿನಗಳಲ್ಲಿ ಎಷ್ಟೊಂದು ಕ್ಷೀಣವಾಗಿದ್ದೀರಿ." ಇದೂ ಆ ಸಾಲಿನ ಇನ್ನೊಂದು ಪ್ರಶ್ನೆ; ಉತ್ತರಿಸಬೇಕಾದ ಪ್ರಶ್ನೆ.

" ನೋಡಿ, ನಿಮ್ಮ ಈ ರೀತಿಯ ವರ್ತನೆಯನ್ನು ನಾನು ಏನೆಂದು ತಿಳಿಯಲಿ ? ನಿಮಗೆ ಮಾತನಾಡಲು ಬರುವುದಿಲ್ಲವೇ ? ಇಲ್ಲವೆ ನನ್ನ ಮೇಲೆ ಬೇಸರವೇ ? "

" ಎರಡೂ ಅಲ್ಲ. "

ಆಕೆ ಈವರೆಗೆ ಸರಿಯಾಗಿ ಮಾತನಾಡಿದ ಮಾತೆಂದರೆ ಇದೊಂದೇ. ತುಂಬಾ ಮಾತನಾಡಬೇಕೆಂಬ ಬಯಕೆ ಇದ್ದರೂ ಮಾತನಾಡಲಿಲ್ಲ.

ಅವರ ಮುಖ ಪ್ರಸನ್ನವಾಯಿತು; ಆಕೆಯ ಉತ್ತರವನ್ನು ಕೇಳಿ ಅವರಿಗೆ ತುಂಬಾ ಸಂತೋಷವಾಗಿತ್ತು.

" ಹಾಗಾದರೆ ಮಾತನಾಡುವುದಿಲ್ಲವೇಕೆ ? "

ಆ ಪ್ರಶ್ನೆಗೆ ಆಕೆಯೇನೂ ಉತ್ತರವೀಯಲಿಲ್ಲ.

" ನಿಮಗೆ ನಾನಿಲ್ಲಿರುವುದೇ ಇಷ್ಟವಿಲ್ಲ; ಸುಮ್ಮನೆ ಏಕೆ ತೊಂದರೆ— "

ಶಾಂತಿ ಅವಸರವಾಗಿ ಅವರ ಕೈ ಹಿಡಿದುಬಿಟ್ಟಳು. ಅವರು ಹೊರಟು ಹೋಗುವರೇನೋ ಎಂದು ನಿಜವಾಗಿಯೂ ಹೆದರಿಬಿಟ್ಟಿದ್ದಳು. ಅವರು ಕುಳಿತ

ಲ್ಲಿಯೇ ನಗುತ್ತಿದ್ದರು. ಆಕೆಗೆ ನಾಚಿಕೆಯಾಯಿತು; ಕೈಯನ್ನು ಹಿಂದಕ್ಕೆ ಸರಿಸಿಕೊಂಡಳು.

"ನೀವು ಬೇಡವೆಂದರೂ ಹೊರಟು ಹೋಗುವಷ್ಟು ಕಟುಕನೇ ನಾನು?"

ಇನ್ನೂ ಅವರ ಕಡೆಗೆ ನೋಡುವುದು ಆಕೆಯಿಂದ ಸಾಧ್ಯವಿರಲಿಲ್ಲ. ತನ್ನ ಗುಟ್ಟು ಬಯಲಾಯಿತಲ್ಲ? ಇಂದಲ್ಲ ನಾಳೆ ಅದು ಆಗುವಂಥಾದ್ದೇ. ಅದಕ್ಕಾಗಿ ಸಂಕೋಚ ಪಡುವ ಆಗತ್ಯವೇನೂ ಇರಲಿಲ್ಲ; ಆದರೂ ಕಣ್ಣನು ಪಕ್ಕಕ್ಕೆ ಹೊರಳಿಸಿದಳು.

"ನೀವು ಮಾತನಾಡದಿದ್ದರೆ ನಿಜವಾಗಿಯೂ ಹೊರಟುಹೋಗುವೆ."

ಆಕೆ ಮತ್ತೆ ಕಣ್ಣನ್ನು ಅವರ ಕಡೆಗೆ ತಿರುಗಿಸಲೇಬೇಕಾಯಿತು. "ಏನು ಮಾತನಾಡಲಿ?" ಎಂದು ಕೇಳುವಂತಿತ್ತು ಆಕೆಯ ನೋಟ.

"ನೀವು ಶಾಲೆಗೆ ಹೋಗಿದ್ದಿರಾ?"

"ಹೂಂ."

"ಎಷ್ಟನೇ ಕ್ಲಾಸಿನ ವರೆಗೆ ಕಲಿತಿರುವಿರಿ?"

"ಫಿಫ್ತ್ ಫಾರ್ಮಿನ ವರೆಗೆ."

"ಅಲ್ಲಿಗೇ ಏಕೆ ನಿಲ್ಲಿಸಿದಿರಿ? ಮೆಟ್ರಿಕ್ ವರೆಗಾದರೂ ಕಲಿಯಬಹುದಿತ್ತಲ್ಲ?"

"ಅಮ್ಮ ತೀರಿಹೋದರು. ಮನೆಯಲ್ಲಿ ಅಡುಗೆ ಮಾಡುವವರಿದ್ದಿಲ್ಲ. ನಾನು ಶಾಲೆ ಬಿಡಬೇಕಾಯಿತು."

ಅಮ್ಮನ ನೆನಪಾಗಿ ಆಕೆಯ ಕಣ್ಣಂಚಿನಲ್ಲಿ ಹನಿಗೂಡಿದ್ದುವು. ಅವರಿಗೂ ಬೇಸರವಾಯಿತು; ತಾನು ಆ ಪ್ರಶ್ನೆಯನ್ನು ಕೇಳಿ ಆಕೆಯನ್ನು ನೋಯಿಸಬಾರದಿತ್ತು ಎಂದೆನಿಸಿತು.

"ಅಣ್ಣ ಇನ್ನೂ ಮದುವೆಯಾಗಿಲ್ಲವೇಕೆ?"

ಈ ಪ್ರಶ್ನೆಗೆ ಉತ್ತರ ಅವಳಿಗೇ ತಿಳಿದಿರಲಿಲ್ಲ. ತಂಗಿಯ ಮದುವೆಗಾಗಿ ಕಾದಿರಬಹುದು ಎಂದು ಯಾರಾದರೂ ಸಹಜವಾಗಿಯೆ ಊಹಿಸಬಹುದಾಗಿತ್ತಾದರೂ ಅದೊಂದೇ ಕಾರಣ ಅಲ್ಲವೆನ್ನುವುದು ಆಕೆಗೆ ಚೆನ್ನಾಗಿ ತಿಳಿದಿತ್ತು. ಆದರೆ ನಿಜ ಸಂಗತಿ ಆಕೆಗೂ ತಿಳಿದಿರಲಿಲ್ಲ.

"ನನಗೆ ಗೊತ್ತಿಲ್ಲ."

"ನಿನ್ನ ಮದುವೆಯೇಕೆ ಆಗಿಲ್ಲ?" ಎಂದು ಕೇಳಬೇಕೆಂದು ಬಯಸಿದ ಡಾಕ್ಟರರು ಬಾಯಿ ನಡುವಿನಲ್ಲಿಯೇ ತಡೆಯಿತು. ತಾನು ಹಾಗೇನಾದರೂ ಕೇಳಿದರೆ ಆಕೆ ನೊಂದುಕೊಳ್ಳಬಹುದು; ಅವಳ ಅಭಿಮಾನದ ಪ್ರಶ್ನೆ ಅದು.

"ನಿಮ್ಮ ಅಣ್ಣ ಯಾರನ್ನಾದರೂ ಪ್ರೀತಿಸುತ್ತಿದ್ದರೇ?"

"ನನಗೆ ತಿಳಿಯದು."

ಆ ವಿಚಾರವನ್ನು ಆಕೆ ಈವರೆಗೆ ವಿಚಾರ ಮಾಡಿರಲಿಲ್ಲ. ಹಾಗೆ ಅವರು ಯಾರನ್ನಾದರೂ ಪ್ರೀತಿಸಲು ಸಾಧ್ಯವಿದೆಯೆನ್ನುವುದನ್ನು ಕಲ್ಪಿಸಲು ಆಕೆಯಿಂದ ಸಾಧ್ಯವಿರಲಿಲ್ಲ.

ಮತ್ತೆ ಕೇಳುವ ಪ್ರಶ್ನೆ ದೊರೆಯಲಿಲ್ಲ. ಕೇಳಲು ಸಾಧ್ಯವಿರುವುದನ್ನು ಕೇಳಿಯಾಗಿತ್ತು. ಆಕೆ ಸಂಕೋಚ ಬಿಟ್ಟು ಮಾತನಾಡಿದ್ದರೆ ಇನ್ನೂ ಎಷ್ಟೋ ಪ್ರಶ್ನೆಗಳ ಸುರಿಮಳೆಯಾಗುತ್ತಿತ್ತು. ಆದರೆ ಆಕೆಯ ತೂಕವಾದ ಚುಟುಕು ಉತ್ತರ ಕೇಳಿದ ಡಾಕ್ಟರರಿಗೆ ಅವಳ ಜೀವನಕ್ಕೆ ಸಂಬಂಧಿಸಿದ ಯಾವ ವಿಚಾರಗಳನ್ನೂ ಕೇಳುವ ಸಾಹಸವಾಗಲಿಲ್ಲ. ಹಾಗೆ ಅಲ್ಲಿಂದ ಹೊರಟು ಹೋಗೋಣವೆಂದರೆ ಮನಸ್ಸು ಕೇಳುತ್ತಿರಲಿಲ್ಲ; ಸ್ವಲ್ಪ ಸಮಯದ ವರೆಗೆ ಸುಮ್ಮನೆ ಕುಳಿತರು. ಮತ್ತೆ ಹೇಗೋ ಧೈರ್ಯ ಮಾಡಿ ಅವಳ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು. ಅವಳು ವಿರೋಧಿಸಲೂ ಇಲ್ಲ; ಕೈಯನ್ನು ಹಿಂದಕ್ಕೆಳೆದುಕೊಳ್ಳಲೂ ಇಲ್ಲ. "ಶಾಂತೀ" ಎಂದು ಕರೆಯಬೇಕೆನಿಸಿತು. ಆದರೆ ಅಷ್ಟು ಅಧಿಕಾರ ಅವರಿಗಿನ್ನೂ ದೊರೆತಿರಲಿಲ್ಲ; ಮೆಲ್ಲನೆ ಆಕೆಯ ಕೈ ಬೆರಳುಗಳೊಡನೆ ಆಟವಾಡುತ್ತ ಕುಳಿತರು.

ಶಾಂತಿ ಕಣ್ಣನ್ನು ಪಕ್ಕಕ್ಕೆ ಹೊರಳಿಸಿ ಮಲಗಿದ್ದಳು. ಅವರ ಕೈಯ ಸ್ಪರ್ಶ ಆಕೆಯ ಹೃದಯವನ್ನು ಅರಳಿಸಿತ್ತು—ತುಂಬಾ ಸುಖಕರವಾದ ಮಧುರ ಸ್ಪರ್ಶ. ಅನುಗಾಲವೂ ಆ ಸ್ಪರ್ಶಸುಖವನ್ನು ಅನುಭವಿಸುವುದು ಸಾಧ್ಯವಿದ್ದರೆ?

ಕತ್ತಲಾಗುವುದಕ್ಕೆ ಇನ್ನು ಹೆಚ್ಚಿಗೆ ಅವಕಾಶವಿದ್ದಿಲ್ಲ; ಡಾಕ್ಟರರು ಹೊರಡಲನುವಾದರು.

"ಹೋಗಿ ಬರಲೇ?"

ಆಕೆ ಆರೋಗ್ಯವಾಗಿದ್ದಳು; ಇನ್ನು ಆಕೆಯನ್ನು ನೋಡುವ ಉದ್ದೇಶ ದಿಂದ ಅಲ್ಲಿಗೆ ಬರುವಂತಿರಲಿಲ್ಲ. ಅವಳು ಮಲಗಿದಲ್ಲಿಂದಲೇ ಕಣ್ಣು ಹೊರಳಿಸಿ ಅವರನ್ನು ನೋಡಿದಳು. 'ನನ್ನ ಕೈ ಬಿಡಬೇಡಿ' ಎನ್ನುವಂತಿತ್ತು ಅವಳ ನೋಟ. ಅವಳ ದೃಷ್ಟಿಯಲ್ಲಡಗಿದ್ದ ಭಾವ ಅವರಿಗೆ ತಿಳಿಯಿತೇನೋ, ಮೃದುವಾಗಿ ಅವಳ ಕೈಯನ್ನು ಒತ್ತಿ ಎದ್ದು ನಿಂತರು.

ಅವಳ ಹಾಸಿಗೆಯ ಪಕ್ಕದಲ್ಲಿಯೇ ಅವರು ನಿಂತಿದ್ದರು; ಶಾಂತಿಯ ದೇಹ ದಲ್ಲಿ ಏನೋ ಶಕ್ತಿ ಸಂಚಾರವಾದಂತಾಯಿತು—ಎದ್ದು ಕುಳಿತಳು. ಅವರ ಪಾದದ ಮೇಲೆ ಹಣೆಯಿರಿಸಿ 'ನಾನು ನಿಮ್ಮವಳು, ನನ್ನ ಕೈ ಬಿಡಬೇಡಿ' ಎಂದು ಹೇಳುವ ಮನಸ್ಸಾಯಿತು; ಆದರೆ ಅಷ್ಟು ಶಕ್ತಿ ಆಕೆಯಲ್ಲಿದ್ದಿಲ್ಲ. ಅವರು ಹೊರಟು ಹೋದರು. ಒಲವಿನ ಮಧುರತೆ ತುಂಬಿಕೊಂಡಿದ್ದ ತನ್ನ ಕೋಣೆ ಬರಿದಾದಂತೆ ಕಂಡಿತು ಆಕೆಗೆ. ಕುಳಿತಲ್ಲಿಯೇ ನಿಟ್ಟುಸಿರು ಬಿಟ್ಟು ಎದ್ದು ನಿಂತಳು.

ಆಗಲೇ ಕತ್ತಲಾಗತೊಡಗಿತ್ತು; ಇನ್ನೊಂದು ಗಳಿಗೆಯಲ್ಲಿ ಅಣ್ಣ ಬರು ವರು. ಅವಸರವಾಗಿ ದೀಪ ಹಚ್ಚಿ ಅಡುಗೆ ಮನೆಯ ಕಡೆಗೆ ನಡೆದಳು. ಗೋಪು ಅಡಿಗೆಯ ಗಲಾಟೆಯಲ್ಲಿ ಬಿದ್ದಿದ್ದ. ಅಕ್ಕ ಹೋಗಿ ಹಾಸಿಗೆಯ ಮೇಲೆ ಮಲಗಿ ದ್ದುದನ್ನು ಕಂಡೊಡನೆ ಅವನು ಅಡುಗೆಯ ಕೆಲಸಕ್ಕೆ ತೊಡಗಿದ್ದ. ಅಕ್ಕನ ಮೇಲೆ ಅವನಿಗೆ ತುಂಬಾ ಪ್ರೀತಿ; ಅದು ಇಲ್ಲದಿರುತ್ತಿದ್ದರೆ ಅಷ್ಟು ಶಾಂತ ವಾಗಿ ಅಡುಗೆಯ ಕೋಣೆಯಲ್ಲಿರುವುದು ಅವನ ಪಾಲಿಗೆ ಸಾಧ್ಯವಿರುತ್ತಿರಲಿಲ್ಲ.

" ಏನೆಲ್ಲಾ ಮಾಡಿದೆ ಗೋಪೂ ? "

" ಎಲ್ಲವೂ ಮುಗಿಯುವುದಕ್ಕಾಯಿತಕ್ಕ, ನೀನೇಕೆ ಬಂದೆ ? ಸುಮ್ಮನೆ ಮಲಗಬಾರದಿತ್ತೇ ? "

ಅವನ ದನಿಯಲ್ಲಿ ಅಣಕವಿರಲಿಲ್ಲ, ಬದಲು ಸ್ನೇಹವಿತ್ತು. ಆಕೆಗೆ ನಗು ಬಂದಿತು; ಗೋಪಾಲನ ತೀರ ಸಮೀಪಕ್ಕೆ ಹೋಗಿ ಅವನ ಬೆನ್ನ ಮೇಲೆ ಕೈ ಯಾಡಿಸಿದಳು. ಇದು ಅವರ ಬಳಿಯಲ್ಲಿದ್ದಾಗ ಸಾಧ್ಯವಾಗುತ್ತಿದ್ದರೆ— ? ಥೂ, ನಾಚಿಕೆಗೆಟ್ಟವಳು ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು.

" ನಾಳೆಯಿಂದ ನಿನಗೆ ಕಷ್ಟವಿಲ್ಲ ಗೋಪು, ನಾನೇ ಎಲ್ಲವನ್ನೂ ಮಾಡುವೆ. "

" ನಿನಗೆ ಸರಿಯಾಗಿ ಗುಣವಾಯಿತೇ ಶಾಂತಕ್ಕ? ಮತ್ತೆ ಡಾಕ್ಟರರು ತುಂಬಾ ಹೊತ್ತಿನ ವರೆಗೆ ಕೂತಿದ್ದರಲ್ಲ ? "

ಶಾಂತಿ ತನ್ನ ಉದ್ವೇಗವನ್ನು ತಡೆದುಕೊಂಡಳು. ಹೌದು, ಅವರು ತುಂಬಾ ಹೊತ್ತಿನ ವರೆಗೆ ಕೂತಿದ್ದರು. ಏಕೆ ಹಾಗೆ ಕೂತಿದ್ದರೆಂದು ಹೇಳುವುದು ಆಕೆಯಿಂದಲೂ ಸಾಧ್ಯವಿರಲಿಲ್ಲ. ಅವರ ಸಾಮೀಪ್ಯ ಆಕೆಗೆ ಬೇಕಾಗಿತ್ತು; ಅವರಿಗೂ ಇವಳ ಸಾಮೀಪ್ಯ ಬೇಕಾಗಿದ್ದಿರಬಹುದು.

ಹೊರಗೆ ಯಾರೋ ಬಂದ ಸಪ್ಪಳವಾಯಿತು. ಬೇರೆ ಯಾರೂ ಅಲ್ಲ, ರಾಮರಾಯರು ತಮ್ಮ ದಿನದ ಕೆಲಸ ಮುಗಿಸಿ ಹೊರಟು ಬಂದಿದ್ದರು. ಶಾಂತಿ ಅಣ್ಣನ ಸ್ವಾಗತಕ್ಕಾಗಿ ಹೊರಗೋಡಿ ಬಂದಳು. ಕೈಯಲ್ಲಿದ್ದ ಊಟದ ಪಾತ್ರೆಗಳನ್ನು ತೆಗೆದುಕೊಂಡಳು, ಅದು ಭಾರವಾಗಿಯೇ ಇತ್ತು. ಅವಸರವಾಗಿ ಬಿಚ್ಚಿ ನೋಡಿದಳು; ಮಧ್ಯಾಹ್ನದ ಊಟ ಹಾಗೆಯೇ ಇತ್ತು.

" ಇದೇನು ಹೀಗೆ? ಊಟ ಮಾಡಲಿಲ್ಲವೇ ? "

" ಇಲ್ಲಮ್ಮ. ತುಂಬಾ ರೋಗಿಗಳಿದ್ದರು; ಸಮಯವೇ ದೊರೆಯಲಿಲ್ಲ. "

ಅವರ ಮಾತನ್ನು ಕೇಳಿ ತಂಗಿಗೆ ಸಹಿಸಲಾಗಲಿಲ್ಲ. ಅಣ್ಣನ ತೀರ ಸಮೀಪಕ್ಕೆ ಹೋಗಿ ನಿಂತಳು; ಆಗಲೇ ಕಣ್ಣಲ್ಲಿ ನೀರು ತುಂಬಿತ್ತು. ತನ್ನ ಪ್ರೀತಿಯ ಅಣ್ಣನ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ಮುಖ ಬಾಡಿದ್ದಿತು; ಕಣ್ಣುಗಳು ನಿಸ್ತೇಜವಾಗಿದ್ದುವು; ಹೃದಯವನ್ನು ಭೇದಿಸುವ ಅವ್ಯಕ್ತ ಹೊಳಪೊಂದು ಅಲ್ಲಿ ಕಾಣಿಸುತ್ತಿತ್ತು. ಎಷ್ಟೋ ದಿನಗಳಿಂದ ಬಚ್ಚಿಟ್ಟುಕೊಂಡಿದ್ದ ನೋವು ಕಣ್ಣುಗಳಲ್ಲಿ ಎದ್ದು ಕಾಣಿಸುತ್ತಿತ್ತು.

" ಹೀಗೇಕೆ ಮಾಡುವಿರಣ್ಣ ? ನಾನು ಸ್ವಲ್ಪವೂ ನೆಮ್ಮದಿಯಿಂದಿರಬಾರದೆಂದು ನಿಮ್ಮಿಚ್ಛೆಯೇ ? "

ಸ್ನೇಹದಿಂದ ತಂಗಿಯನ್ನಪ್ಪಿ ಮೃದುವಾಗಿ ಬೆನ್ನ ಮೇಲೆ ಕೈಯಾಡಿಸಿದರು; ಮಾತನಾಡುವ ಶಕ್ತಿ ಅವರಲ್ಲಿಯೂ ಇದ್ದಿಲ್ಲ; ಅವರೂ ಅಳುತ್ತಿದ್ದರು. ಕೆಲವು ನಿಮಿಷಗಳು ಹಾಗೆಯೇ ಕಳೆದುವು. ಶಾಂತಾ ಎಚ್ಚೆತ್ತಳು; ಮಾತನಾಡದೆ ನೆಟ್ಟಗೆ ಅಡುಗೆ ಮನೆಗೆ ನಡೆದಳು.

" ನೀರು ಬಿಸಿಯಾಗಿದೆ ಅಣ್ಣಾ, ಬೇಗನೇ ಸ್ನಾನ ಮಾಡಿ ಬನ್ನಿ. ಊಟ ಮಾಡಿ. "

ರಾಮರಾಯರು ಮಲಗುವುದಕ್ಕೆ ಮುಂಚೆ ತಂಗಿಯನ್ನು ನೋಡಿಕೊಂಡು ಹೋಗುವುದಕ್ಕೆ ಬಂದರು.

" ಈಗ ಚೆನ್ನಾಗಿದ್ದೀಯಾ ಶಾಂತೂ ? "

" ನಾನು ಹೇಗಿದ್ದರೆ ನಿಮಗೇನು ? " ಸಿಟ್ಟಿನಿಂದಲೇ ಹೇಳಿದಳು.

ತಂಗಿಯಿಂದ ಈ ರೀತಿಯ ಉತ್ತರವನ್ನು ಅವರೆಂದೂ ನಿರೀಕ್ಷಿಸಲಿಲ್ಲ. ತಲೆಯ ಮೇಲೆ ಕೊಡಲಿಯೇಟು ಬಿದ್ದಂತಾಯಿತು. ಮಾತನಾಡದೆ ತನ್ನ ಕೋಣೆಗೆ ನಡೆದರು. ಅಣ್ಣನಿಗೆ ತನ್ನ ಮಾತಿನಿಂದ ಬೇಸರವಾಯಿತೆಂದು ತಿಳಿದರೂ ಶಾಂತಿ ಅಳುಕಲಿಲ್ಲ. ಅವರ ಉಪವಾಸ ಅವಳನ್ನು ತುಂಬಾ ನೋಯಿಸಿತ್ತು. ಅವರ ಆ ರೀತಿಯ ವರ್ತನೆಗೆ ತಾನೇ ಕಾರಣಳಿರಬಹುದೇ ಎಂಬ ವಿಚಾರ ತಲೆಯಲ್ಲಿ ಸುಳಿದು ಅವಳಿಗೆ ತುಂಬಾ ವೇದನೆಯಾಗಿತ್ತು.

ಅಣ್ಣ ಹೊರಟು ಹೋದೊಡನೆ ಅವಳ ಗಾಂಭೀರ್ಯ ಸಿಟ್ಟುಗಳೆಲ್ಲವೂ ಹಾರಿ ಹೋದುವು. ದುಃಖ ಉಮ್ಮಳಿಸಿ ಬಂತು, ಅತ್ತಳು. ಹೃದಯ ಹಗುರಾಗುವ ವರೆಗೂ ಅತ್ತಳು.

## ೭

ರಾಮರಾಯರ ತಲೆಯಲ್ಲಿ ಯೋಚನೆಗಳ ಬಿರುಗಾಳಿಯೆದ್ದಿತ್ತು—

ನಾಲ್ಕು ವರುಷಗಳ ಹಿಂದೆ, ಆಗ ಅವರ ತಂದೆ ಕೇಶವರಾಯರು ಬದುಕಿದ್ದರು. ಮನೆಯ ಜವಾಬ್ದಾರಿಯನ್ನು ಹೊರಲು ತಾಯಿಯೂ ಗಟ್ಟಿಮುಟ್ಟಾಗಿಯೇ ಇದ್ದಳು. ಇವರಿಗೆ ಆಗ ಬರೇ ಇಪ್ಪತ್ತು ವರುಷ ಪ್ರಾಯ. ಯಾವ ಜವಾಬ್ದಾರಿಯೂ ತಲೆಯ ಮೇಲೆ ಇದ್ದಿಲ್ಲ.

ಮಂಗಳೂರಿನಲ್ಲಿ ಇಂಟರ್‌ಮೀಡಿಯೆಟ್‌ನಲ್ಲಿ ಕಲಿಯುತ್ತಿದ್ದರು. ತಾರುಣ್ಯದ ಉತ್ಸಾಹದಲ್ಲಿ ಎಷ್ಟೋ ಬಯಕೆಗಳನ್ನು ಕಟ್ಟಿಕೊಂಡಿದ್ದರು. ತಾನು ಡಾಕ್ಟರನಾಗಬೇಕು ಎನ್ನುವ ಬಲವಾದ ಆಶೆಯನ್ನು ಹೊತ್ತುಕೊಂಡಿದ್ದರು. ವಿಧಿ ಅದಕ್ಕೆ ಅವಕಾಶ ಕೊಡಲಿಲ್ಲ. ಇಂಟರ್ ಮುಗಿಯುವುದರೊಳಗಾಗಿ ತಂದೆ ತೀರಿಕೊಂಡರು; ಮನೆಯ ಭಾರವೆಲ್ಲವೂ ಅವರ ತಲೆಯ ಮೇಲೆಯೇ

ಬಿದ್ದಿತ್ತು. ಏನೋ ಹಿರಿಯರಿಂದ ಅಲ್ಪ-ಸ್ವಲ್ಪ ಆಸ್ತಿ ಅವರ ಪಾಲಿಗೆ ಬಂದಿತ್ತು. ಆದರೆ ಅದನ್ನೇ ನಂಬಿ ಕುಳಿತುಕೊಳ್ಳುವಂತಿರಲಿಲ್ಲ. ಹಾಗಾಗಿ ಮನೆಯಲ್ಲಿ ಯೋಗ್ಯ ವ್ಯವಸ್ಥೆಯನ್ನು ಮಾಡಿ ಕಂಪೌಂಡರರ ತರಬೇತಿಯನ್ನು ಹೊಂದಿ ಬಂದರು. ಪುತ್ತೂರಿನಲ್ಲಿಯೇ ಕೆಲಸ ದೊರೆಯಿತು. ತಮ್ಮ-ತಂಗಿಯರಿಬ್ಬರೂ ಶಾಲೆಗೆ ಹೋಗುತ್ತಿದ್ದರು. ಬರುವ ವರಮಾನದಲ್ಲಿ ಕೂಡಿಸಿಡುವುದಕ್ಕೆ ಸಾಧ್ಯ ವಿಲ್ಲದೆ ಹೋದರೂ ನೆಮ್ಮದಿಯಿಂದ ಜೀವನ ಸಾಗಿಸುವುದಕ್ಕೆ ಯಾವ ತೊಂದ ರೆಯೂ ಇದ್ದಿಲ್ಲ.

ದಿನಗಳು ಸುಖವಾಗಿಯೇ ಸಾಗುತ್ತಿದ್ದುವು; ಆದರೆ ಕೆಲವೇ ದಿನ ಗಳಲ್ಲಿ ಅವರ ನೆಮ್ಮದಿಯನ್ನು ಕಲಕಿಬಿಡುವಂಥ ಘಟನೆಯೊಂದು ನಡೆಯಿತು. ಅಷ್ಟೇನೂ ವಿಶೇಷದ್ದಲ್ಲ. ಆದರೂ ಅವರ ಪಾಲಿಗೆ ಅದೊಂದು ವಿಶೇಷವಾಗಿಯೇ ಪರಿಣಮಿಸಿತು.

ಎದುರು ಮನೆಯಲ್ಲಿ ಹೊಸ ಬಿಡಾರ ಬಂದಿತ್ತು. ಅದೇ ವಿಶೇಷ. ತಮ್ಮ ಕೋಣೆಯಲ್ಲಿ ಕುಳಿತುಕೊಂಡರೆ ಎದುರು ಮನೆಯಲ್ಲಿ ನಡೆಯುವುದೆ ಲ್ಲವೂ ಚೆನ್ನಾಗಿ ಕಾಣಿಸುತ್ತಿತ್ತು ಅವರೊಬ್ಬರು ಹೈಸ್ಕೂಲಿನ ಮಾಸ್ತರರು. ಅವರಿಗೆ ಬೆಳೆದು ನಿಂತ ಮಗಳೊಬ್ಬಳಿದ್ದಳು. ರಾಮುರಾಯರ ಪಾಲಿಗೆ ಅದೇ ಒಂದು ವಿಶೇಷವಾಗಿ ಪರಿಣಮಿಸಿತು. ಆಕೆ ರಾಮುರಾಯರ ಗಮನವನ್ನು ಸೆಳೆದಳು. ಆಗಲೇ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿದ್ದ ಆಕೆಯ ಮೈ ಮಾಟ ಅವರನ್ನು ಮರುಳುಗೊಳಿಸಿತು. ಮನೆಯಲ್ಲಿದ್ದಾಗಲೆಲ್ಲ ತಮ್ಮ ಕೋಣೆ ಯಲ್ಲಿಯೇ ಕುಳಿತು ಕಿಟಕಿಯ ಮೂಲಕ ಆಕೆಯನ್ನು ನೋಡುವ ಪ್ರಯತ್ನ ಮಾಡುತ್ತಿದ್ದರು.

ಕೆಲವೇ ದಿನಗಳಲ್ಲಿ ಶಾಂತಿಗೂ ಆಕೆಗೂ ಗೆಳೆತನವಾಯಿತು. ಇಬ್ಬರೂ ಓರಗೆಯವರು; ಆದರೆ ರಾಮುರಾಯರ ಬಯಕೆಗಳೆಲ್ಲ ಬರೇ ನೋಟದಲ್ಲಿಯೇ ಕೊನೆಗೊಳ್ಳುತಿದ್ದುವು; ಅದೂ ಯಾರಿಗೂ ತಿಳಿಯದ ರೀತಿಯಲ್ಲಿ. ತೀರಾ ಸಂಕೋಚ ಪ್ರಕೃತಿ ಅವರದು. ಅದಕ್ಕಿಂತ ಹೆಚ್ಚಿಗೆ ಮುಂದುವರಿಯಲು ಅವ ರಿಗೆ ಧೈರ್ಯವು ಇದ್ದಿಲ್ಲ. ಅವರ ಹೃದಯ-ಮನಸ್ಸುಗಳು ಮಾತ್ರ ಕಾಣದ ಹಾದಿಯಲ್ಲಿ ನಿರಾತಂಕ ವೇಗದಿಂದ ಸಾಗುತ್ತಲೇ ಇದ್ದುವು. ದಿನಕಳೆದಂತೆ ಹೆಚ್ಚು ಹೆಚ್ಚಾಗಿ ಅವರ ಕಣ್ಣುಗಳು ನೆರೆಮನೆಯವಳನ್ನು ಅರಸಿಕೊಂಡು

ಹೋಗುತ್ತಿದ್ದುವು.

ಶಾಂತಿಗೆ ಆಗ ಬರೇ ಹದಿನಾಲ್ಕು ವರುಷ ಪ್ರಾಯ. ನೆರೆಮನೆಯ ಹುಡುಗಿಗೂ ಸುಮಾರು ಅಷ್ಟೇ ಆಗಬಹುದು. ಗೆಳತಿಯರೇ ಇಲ್ಲದ ಶಾಂತಿಗೆ ಹೊಸಬಳ ಆಗಮನದಿಂದ ತುಂಬಾ ಸಂತೋಷವಾಯಿತು.

ಆಕೆಯ ಹೆಸರು ಶಾರದಾ. ಹೆಸರಿಗೆ ತಕ್ಕ ರೂಪ ಹಾಗೂ ಗುಣಗಳು ಆಕೆಯಲ್ಲಿದ್ದುವು. ಆಕೆಯೂ ಶಾಂತಿಯ ಜೊತೆಯಲ್ಲಿ ಶಾಲೆಗೆ ಹೋಗುವು ದಕ್ಕೆ ಪ್ರಾರಂಭಿಸಿದ್ದಳು. ಶಾಲೆಯಿಂದ ಮರಳಿದೊಡನೆ ಇಬ್ಬರೂ ಜೊತೆಗೂಡಿ ಆಡುವುದು, ಕುಣಿಯುವುದು ನಡೆಯುತ್ತಲೇ ಇತ್ತು. ಎಲ್ಲದಕ್ಕಿಂತಲೂ ಮಿಗಿ ಲಾದ ವಿಚಾರವೆಂದರೆ ಆಕೆಯ ಕಂಠ ತುಂಬಾ ಮಧುರ; ಬೆಳಗಾಗಬೇಕಾದರೆ ಆಕೆ ಎದ್ದು ಉದಯರಾಗ ಹಾಡುತ್ತಿದ್ದಳು. ಆಕೆಯ ಹಾಡಿನ ದನಿ ಕಿವಿಗೆ ಬಿದ್ದೊಡನೆ ರಾಮರಾಯರಿಗೆ ಎಚ್ಚರವಾಗುತ್ತಿತ್ತು.

ತಡಮಾಡದೆ ಎದ್ದು ಕುಳಿತು ದನಿಯನ್ನು ಆಲೈಸುತ್ತಿದ್ದರು. ಕಣ್ಣಿಗೆ ಗೋಚರಿಸುವಳೇನೋ ಎಂದು ಆಶೆಯ ಕಣ್ಣುಗಳಿಂದ ಕಿಟಕಿಯಿಂದ ಅವರ ಮನೆಯ ಕಡೆಗೆ ನೋಡುತ್ತಿದ್ದರು. ಹಾಡಿನ ದನಿ ನಿಲ್ಲುವ ವರೆಗೆ ಅವರು ಎದ್ದು ಹೊರಗೆ ಬರುತ್ತಿರಲಿಲ್ಲ.

ಹಾಡು ಮುಗಿಯಿತು ಎಂದು ತಿಳಿದೊಡನೆ ಅವಸರವಾಗಿ ಬಂದು ಕಿಟಕಿಯ ಬಳಿ ನಿಲ್ಲುತ್ತಿದ್ದರು. ಈಗ ಅವರು ನಿರಾಶರಾಗಬೇಕಾಗುತ್ತಿರ ಲಿಲ್ಲ. ಕೈಯಲ್ಲಿ ಕಸಬರಿಕೆಯನ್ನು ಹಿಡಿದುಕೊಂಡು ಆಕೆ ಅಂಗಳಕ್ಕೆ ಕಾಲಿರಿ ಸುತ್ತಿದ್ದಳು. ಆಕೆ ಗುಡಿಸಿ ಒಳಗೆ ಹೋಗುವ ವರೆಗೆ ರಾಮರಾಯರು ಅಲ್ಲಿಯೇ. ಬೆಳಗಿನ ತಂಗಾಳಿಗೆ ಆಕೆಯ ಕೂದಲು ಹಾರಾಡುತ್ತಿರುವಾಗ ಅವರ ಕಣ್ಣಿಗೆ ಶಾರದೆ ದೇವತೆಯಂತೆ ಕಾಣಿಸುತ್ತಿದ್ದಳು. ದಿನವೂ ಇದೇ ದಿನಚರಿ.

ಒಂಬತ್ತು ಗಂಟೆಯ ಹೊತ್ತಿಗೆ ಶಾಂತಿ ಚೆನ್ನಾಗಿ ಅಲಂಕಾರ ಮಾಡಿ ಕೊಂಡು ಆಕೆಯ ಮನೆಗೆ ಓಡುತ್ತಿದ್ದಳು. ಅದು ಶಾಲೆಗೆ ಹೋಗುವ ಸಿದ್ಧತೆ.

" ಶಾರೀ ಬರುವುದಿಲ್ಲವೇನೇ ? "

" ಸ್ವಲ್ಪ ನಿಲ್ಲೇ, ಈಗ ಬಂದೆ. "

ಆಕೆ ಬರುವ ವರೆಗೆ ಶಾಂತಿ ಕಾಯಬೇಕು; ಒಂದೈದು ನಿಮಿಷ ಕಳೆ ಯುವುದರೊಳಗಾಗಿ ಕೈಯಲ್ಲಿ ಪುಸ್ತಕ ಹಿಡಿದುಕೊಂಡು ಹೊರಗೆ ಬರುತ್ತಿದ್ದಳು.

ಯಾವಾಗಲೂ ಆಕೆ ಉಡುತ್ತಿದ್ದುದು ನೀಲಿ ಸೀರೆ; ಓರಣವಾಗಿ ತಲೆ ಬಾಚಿಕೊಂಡು ಹೂ ಮುಡಿದುಕೊಳ್ಳುವಳು. ಮೊದಲೇ ಸುಂದರಿ, ಈ ವೇಷದಲ್ಲಿ ಆಕೆಯನ್ನು ಕಂಡರೆ ಎಂಥಾ ಬ್ರಹ್ಮಚಾರಿಯ ಕಣ್ಣುಗಳಾದರೂ ಒಂದು ಕ್ಷಣ ತಮ್ಮ ಸಂಯಮವನ್ನು ಕಳೆದುಕೊಳ್ಳಲೇ ಬೇಕು.

" ಏನೇ ಶಾರೀ, ಗಂಡನ ಮನೆಗೆ ಹೊರಟಿರುವಿಯೇನು ? " ಆಕೆಯ ಅಲಂಕಾರವನ್ನು ಕಂಡು ಶಾಂತಿ ಚೇಷ್ಟೆ ಮಾಡುವಳು.

" ಮತ್ತೆ ನೀನು ಗಂಡನ ಮನೆಗೆ ಹೋಗದೆ ಹಾಗೇ ಇರುವವಳೇನು ? " ಗೆಳತಿಯರಿಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿ ಮುಗುಳು ನಗುವರು.

ಆ ಎರಡು ಸುಂದರ ಕಿಶೋರ ಮುಖಗಳ ಮೇಲೆ ಮಂದಹಾಸ ಮೂಡಿದುದನ್ನು ಕಂಡು ಮುಗ್ಧರಾಗದಿರಲು ಯಾರಿಂದಲೂ ಸಾಧ್ಯವಿಲ್ಲ. ಅವರಿಬ್ಬರೂ ಕಣ್ಮರೆಯಾದೊಡನೆ ರಾಮರಾಯರ ಹೃದಯ ಉದಾಸವಾಗುವುದು. ಆ ಮೇಲೆಯೇ ಅವರು ಆಸ್ಪತ್ರೆಗೆ ಹೋಗುವುದು. ಅಕಸ್ಮಾತ್ತಾಗಿ ನೆರೆಮನೆಗೆ ಬಂದ ಆ ಮುಗ್ಧೆ ಅವರ ನೆಮ್ಮದಿಯನ್ನು ಕಬಳಿಸಿದ್ದಳು. ಆದರೆ ಅದಕ್ಕೆ ಆಕೆ ಹೊಣೆಯಲ್ಲ. ಬ್ರಹ್ಮ ತನ್ನ ಕೈಲಾಗುವಷ್ಟು ಮಾಧುರ್ಯವನ್ನೆಲ್ಲಾ ಅವಳಲ್ಲಿ ತುಂಬಿಸಿದ್ದರೆ ಅವಳಾದರೂ ಏನು ಮಾಡಬೇಕು ? ಅವಳದು ಬರೀ ಆಡಂಬರದ ಸೌಂದರ್ಯವಾಗಿಲ್ಲ; ಬಾಹ್ಯಾವರಣದ ಹೊದಿಕೆಯಲ್ಲಡಗಿದ್ದ ಹೃದಯದ ಸೌಂದರ್ಯವೂ ಅಷ್ಟೇ ಮಧುರತಮವಾದುದು.

ಅದನ್ನು ತಿಳಿಗುಕೊಂಡವರು ತೀರಾ ವಿರಳ. ಶಾಂತಿ ಮಾತ್ರ ತನ್ನ ಗೆಳತಿಯನ್ನು ತೀರಾ ಮೆಚ್ಚಿಬಿಟ್ಟಿದ್ದಳು. ಶಾಲೆಯಿಲ್ಲದಾಗಲೆಲ್ಲ ಅವಳಿರುವುದು ಶಾರದೆಯ ಮನೆಯಲ್ಲಿ.

" ದಿನವಿಡೀ ಇಲ್ಲದಿದ್ದರೆ ಅಣ್ಣ ಗದರಿಸುವುದಿಲ್ಲವೇ ಶಾಂತೀ ? "

" ಇಲ್ಲ ಶಾರಿ, ನನ್ನ ಅಣ್ಣ ತುಂಬಾ ಒಳ್ಳೆಯವರು. ಅವರೆಂದೂ ನನ್ನನ್ನು ಗದರಿಸುವುದೇ ಇಲ್ಲ. ಅವರನ್ನು ಕಂಡಿಲ್ಲವೇ ನೀನು? ಒಮ್ಮೆ ನಮ್ಮಲ್ಲಿಗೆ ಬಾ, ಅವರನ್ನು ತೋರಿಸುತ್ತೇನೆ."

ಅವಳ ಮಾತನ್ನು ಕೇಳಿ ಶಾರದೆಯ ಕಪೋಲಗಳು ರಂಗೇರುವುವು. ಗೆಳತಿಗೆ ತೋರಗೊಡಬಾರದೆಂದು ಮುಖವನ್ನು ಪಕ್ಕಕ್ಕೆ ಹೊರಳಿಸುವಳು. ಆದರೆ ಶಾಂತಿ ಜಾಣೆ—ಅವಳ ಮನಸ್ಸಿನ ಭಾವವನ್ನು ಕೂಡಲೇ ತಿಳಿದುಕೊಳ್ಳುವಳು.

" ಅಣ್ಣ ನಿನ್ನನ್ನು ಮದುವೆಯಾಗುವುದಿಲ್ಲ ಶಾರೀ ! ನೀನೇನು ಹೆದರುವ ಕಾರಣವಿಲ್ಲ. "

" ಹೋಗೆ ನೀನು; ಹಾಗೆಲ್ಲ ಮಾತಾಡಿದರೆ ನಾನು ಸಿಟ್ಟಾಗುವೆ ನೋಡು. "

ಶಾಂತಿ ಗೆಳತಿಯ ತೀರ ಸಮೀಪಕ್ಕೆ ಬಂದು ಅವಳನ್ನು ತಬ್ಬಿಕೊಳ್ಳುವಳು.

" ಇಲ್ಲ ನನ್ನ ರಾಣೀ, ನೀನು ಸಿಟ್ಟಾದರೆ ನಾನು ಸತ್ತೇ ಹೋಗುವೆ. "

ಶಾರದೆಯ ಗಾಂಭೀರ್ಯ ಹಾರಿಹೋಗುವುದು ; ಶಾಂತಿಯನ್ನು ತಬ್ಬಿ ಕೊಳ್ಳುವಳು.

" ಇಲ್ಲ ಶಾಂತೂ, ನಿನ್ನ ಮೇಲೆ ಸಿಟ್ಟಾಗುವುದು ನನಗೆ ಸಾಧ್ಯವೇ ? "

ಅಲ್ಲಿಗೆ ಜಗಳ ತೀರಿ ಗೆಳತಿಯರಿಬ್ಬರೂ ಆಡಲು ಪ್ರಾರಂಭಿಸುವರು. ಶಾರ ದೆಗೆ ಮನೆಕೆಲಸ ಮಾಡುವ ಆವಶ್ಯಕತೆ ಹೆಚ್ಚಾಗಿ ಬೀಳುತ್ತಿರಲಿಲ್ಲ. ಆಕೆ ಮಾಸ್ತರರ ಒಬ್ಬಳೇ ಮಗಳು ; ಹಾಗಾಗಿ ಅವಳನ್ನು ತುಂಬಾ ಪ್ರೀತಿಯಿಂದ ಸಾಕಿದ್ದರು. ತಾಯಿಯೇ ಮನೆಕೆಲಸಗಳೆಲ್ಲವನ್ನೂ ನೋಡಿಕೊಳ್ಳುವರು. ಶಾಂತಿಗಾದರೂ ಅಷ್ಟೇ. ಈವರೆಗೆ ಮನೆಕೆಲಸ ಮಾಡುವ ಅವಶ್ಯಕತೆಯೇನೂ ಬಿದ್ದಿರಲಿಲ್ಲ.

ದಿನವಿಡೀ ಇಬ್ಬರೂ ಜೊತೆಯಾಗಿಯೇ ಕಳೆಯುವರು ; ಓದುವುದೂ ಜೊತೆಯಲ್ಲಿ ಆಡುವುದೂ ಜೊತೆಯಲ್ಲಿ---ಇಬ್ಬರೂ ರಸಿಕರು.

ಜೊತೆಯಾಗಿ ಓದುವಾಗಲೆಲ್ಲ ಒಬ್ಬರನ್ನೊಬ್ಬರು ಗೇಲಿಮಾಡುವುದೊಂದೇ ಕೆಲಸ. ಅಂದು ಬೆಳಿಗ್ಗೆ ಶಾಂತಿ ಪಾಠ ಓದುತ್ತಿದ್ದಳು, ಚರಿತ್ರೆ ಪಾಠ; ಶಾರದೆ ಲೆಕ್ಕ ಮಾಡುತ್ತಿದ್ದಳು. ಶಾಂತಿ ಬೇಕೆಂತಲೇ ಗಟ್ಟಿಯಾಗಿ ಓದುತ್ತಿದ್ದಳು. " ಜಹಾಂಗೀರನ ರಾಜ್ಯಭಾರ— ಪಟ್ಟಕ್ಕೆ ಬಂದೊಡನೆ ಶೇರ ಅಫ್ಗಾನನೆಂಬ ಸರದಾರನನ್ನು ಕೊಂದು ಅವನ ಹೆಂಡತಿಯನ್ನು ತಾನು ಮದುವೆ ಮಾಡಿ ಕೊಂಡನು ; ಅವಳೇ ನೂರಜಹಾನ. "

ಶಾಂತಿ ತುಂಟ ಹುಡುಗಿ; ಬೇಕೆಂತಲೇ ಆ ವಾಕ್ಯವನ್ನು ಪುನಃ ಪುನಃ ಓದಿದಳು. ಲೆಕ್ಕ ಮಾಡುವುದರಲ್ಲೇ ಮಗ್ನಳಾದ ಶಾರದೆಯ ಗಮನ ಶಾಂತಿಯ ಓದಿನ ಕಡೆಗೆ ಹೋಯಿತು. ಓದುವುದನ್ನು ಬಿಟ್ಟು ಶಾಂತಿ ನಗಲು ಪ್ರಾರಂಭಿ ಸಿದಳು.

" ಆ ಜಹಾಂಗೀರ ನಿಜವಾಗಿಯೂ ಹುಚ್ಚ ಅಲ್ಲವೇ ಶಾರಿ ? "

" ಏಕೆ ? " ಅವಳ ಮಾತಿನ ಓಟವನ್ನು ತಿಳಿಯದೆ ಕೇಳಿದಳು ಶಾರದೆ.

" ಮತ್ತು ಭಾಗ್ಯಹೀನ " ಎಂದು ಬಿದ್ದು ಬಿದ್ದು ನಗತೊಡಗಿದಳು. ಅವಳ ವರ್ತನೆಯನ್ನು ಕಂಡು ಶಾರದೆಗೂ ನಗು ಬಾರದಿರಲಿಲ್ಲ.

" ಏನೇ ಅದು ಹುಚ್ಚರ ಹಾಗೆ ನಗುವುದು ? "

" ಜಹಾಂಗೀರ ಈಗ ಬದುಕಿರಬೇಕಿತ್ತು ಶಾರಿ ? "

" ಏಕೆ ? "

" ಖಂಡಿತವಾಗಿಯೂ ಅವನು ನೂರಜಹಾನಳನ್ನು ಮದುವೆಯಾಗುತ್ತಿರಲಿಲ್ಲ. "

" ಏಕೆ ? "

" ನನ್ನ ಮುದ್ದು ಶಾರಿಯಂಥಾ ಮೋಹನಾಂಗಿ ಜಗತ್ತಿನಲ್ಲಿದ್ದಾಳೆನ್ನುವುದು ಆತನಿಗೆ ತಿಳಿದರೆ, ನೂರಜಹಾನಳ ಗೊಡವೆಯನ್ನೇ ಬಿಟ್ಟುಬಿಡುತ್ತಿದ್ದ. "

" ಮತ್ತೇನು ಮಾಡುತ್ತಿದ್ದ ? " ಹುಸಿಮುನಿಸಿನಿಂದ ಕೇಳಿದಳು ಶಾರದೆ.

" ನೂರಜಹಾನಳ ಬದಲು ನನ್ನ ಗೆಳತಿ ಮೊಗಲ್ ಸಾಮ್ರಾಜ್ಞಿಯಾಗುತ್ತಿದ್ದಳು. "

" ಸಾಕೇ ನಿನ್ನ ತಮಾಶೆ; ಸುಮ್ಮನೆ ಓದು. " ಸಿಟ್ಟುಬಂದವಳಂತೆ ನಟಿಸಿದರೂ ಅವಳ ಮಾತನ್ನು ಕೇಳಿ ಶಾರದೆಗೆ ನಾಚಿಕೆಯಾಗಿತ್ತು; ತನ್ನ ಸೌಂದರ್ಯವನ್ನು ನೆನೆದು ಅಭಿಮಾನವೂ ಎನಿಸಿತ್ತು.

ಹೃದಯದ ಉದ್ವೇಗವನ್ನು ತಡೆದುಕೊಳ್ಳಲು ಗೆಳತಿಯನ್ನು ಬಿಗಿಯಾಗಿ ತಬ್ಬಿಕೊಂಡಳು. " ಆ ಮಾತು ನನಗಲ್ಲ, ನಿಜವಾಗಿಯೂ ನಿನಗೇ ಅನ್ವಯಿಸುತ್ತದೆ. "

" ಆಗಲಿ ಮಹಾರಾಯತಿ, ಜಗಳ ಬೇಡ. ಇಬ್ಬರೂ ಅದನ್ನು ಪಾಲು ಮಾಡಿಕೊಳ್ಳೋಣ." ಇಬ್ಬರೂ ಒಬ್ಬರನ್ನೊಬ್ಬರು ನೋಡಿ ನಗುವರು. ಇನ್ನೂ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸುತ್ತಿದ್ದ ಅವರ ಪಾಲಿಗೆ ನಿಜವಾಗಿಯೂ ಅದು ತೀರಾ ಮಧುರತಮವಾದ ಕಲ್ಪನೆಯಾಗಿತ್ತು.

"ಶಾರಿ, ಓದು ಮುಗಿಯಲಿಲ್ಲವೇನೇ ಶಾಲೆಗೆ ಹೊತ್ತಾಯಿತಲ್ಲ" ಎಂದು

ತಾಯಿ ಒಳಗಿನಿಂದ ಕೂಗಿದಾಗಲೇ ಇಬ್ಬರಿಗೂ ಎಚ್ಚರ.

" ನಿನ್ನ ಓದು ಮುಗಿಯಿತೇ ಶಾಂತೂ ? " ಶಾರಿ ಅಣಕವಾಡುವಳು.

" ನನ್ನದು ಆಗಲೇ ಮುಗಿಯಿತು ; ನಿನ್ನದು ಇನ್ನೂ ಆರಂಭವಾಗು ತ್ತಿದೆಯಲ್ಲ. "

ಸರಿ, ಶಾಂತಿ ಮನೆಗೆ ಓಡಿ ಶಾಲೆಗೆ ಹೋಗುವ ಉಡಿಗೆಯನ್ನು ಧರಿಸಿ ಕೊಂಡು ಬರುವಳು.

" ಯಾವ ಸೀರೆ ಉಟ್ಟುಕೊಂಡೆ ಶಾಂತೂ ? "

" ನೀಲಿ. "

" ರವಕೆ ? "

" ಗುಲಾಬಿ. "

ಸರಿ, ಅದೇ ವೇಷದಲ್ಲಿ ಶಾರದೆಯೂ ಹೊರಗೆ ಬರುವಳು. ಇಬ್ಬರೂ ಕೈ ಕೈ ಹಿಡಿದುಕೊಂಡು ಹೊರಡುವರು. ಶಾಲೆಗೆ ಮುಟ್ಟುವ ವರೆಗೆ ರಸ್ತೆಯ ಪಕ್ಕದ ಅಂಗಡಿಗಳಿಂದ ಹಿಡಿದು ಜನರೆಲ್ಲರ ಕಣ್ಣು ಅವರ ಮೇಲೆಯೇ. ಯಾರಿ ಗಾದರೂ ಅವರನ್ನು ನೋಡದಿರುವುದು ಸಾಧ್ಯವೇ ಇರಲಿಲ್ಲ. ಯಾವಾಗಲೂ ಜೊತೆಯಾಗಿಯೇ ಇರುತ್ತಿದ್ದ ಅವರಿಗೆ 'ಸ್ಟ್ರೆಂಜ ಸಿಸ್ಟರ್ಸ' (Strange sisters) ಎಂದು ನಾಮಕರಣವೂ ಆಗಿಬಿಟ್ಟಿತ್ತು

' ಸ್ಟ್ರೆಂಜ ಸಿಸ್ಟರ್ಸ ' ಎಂದು ಯಾರಾದರೂ ಅಣಕ ಮಾಡಿದುದನ್ನು ಕೇಳಿ ದಾಗ ಅವರಿಗೆ ಬೇಸರವಾಗುವ ಬದಲು ಸಂತೋಷವೇ ಆಗುತ್ತಿತ್ತು. ಒಬ್ಬರ ನ್ನೊಬ್ಬರು ನೋಡಿ ಮುಗುಳುನಗುತ್ತಿದ್ದರು.

" ಹೌದೇನೇ ಶಾರದಾ, ನಾವಿಬ್ಬರೂ ವಿಚಿತ್ರ ಸಹೋದರಿಯರು ಅಲ್ಲವೇ ? "

" ಕಳೆದ ಜನ್ಮದಲ್ಲಿ ನಾವಿಬ್ಬರೂ ಸಹೋದರಿಯರಾಗಿದ್ದಿರಬೇಕಮ್ಮಾ, ಅದರಿಂದಲೇ ನಮಗೀ ಬಿರುದು. "

" ಕಳೆದ ಜನ್ಮದಲ್ಲಿ ಮಾತ್ರವೇ ? ಈ ಜನ್ಮದಲ್ಲಿಯೂ ನಾವಿಬ್ಬರೂ ಸಹೋದರಿಯರೇ ಅಲ್ಲವೇನು ? "

೮

ರಾಮರಾಯರದು ವಿಚಿತ್ರ ಪ್ರಕೃತಿ. ದಿನವೂ ಬೇಗ್ಗೆ ಎದ್ದು ತಮ್ಮ ಕೋಣೆಯ ಕಿಟಕಿಯ ಬಳಿಯಲ್ಲಿ ನಿಂತು ನೋಡುತ್ತಿದ್ದರಲ್ಲದೆ ಅದಕ್ಕಿಂತ ಹೆಚ್ಚಿಗೆ ಮುಂದುವರಿಯುವ ಧೈರ್ಯವೇನೂ ಅವರಲ್ಲಿ ಇದ್ದಿದ್ದಿಲ್ಲ. ಕೋಣೆ ಯಿಂದ ಹೊರಗೆ ಬಂದು ಜಗುಲಿಯ ಮೇಲೆ ನಿಂತು ಅವಳ ಕಣ್ಣಿಗೆ ಬೀಳುವು ದಕ್ಕೂ ಅವರು ಸಿದ್ಧರಿರಲಿಲ್ಲ. ತನ್ನ ತಂಗಿ ಶಾಂತಿ ಅವಳ ಜೀವದ ಗೆಳತಿ ಎನ್ನುವುದು ಅವರಿಗೆ ತಿಳಿದಿತ್ತು. ಆದರೆ ಒಮ್ಮೆಯೂ ಶಾರದೆಯ ವಿಚಾರ ವಾಗಿ ತಂಗಿಯೊಡನೆ ಅವರು ಕೇಳಿರಲಿಲ್ಲ.

ರಾಮರಾಯರ ಹೃದಯದ ಕಾಮನೆಗಳು ಗುಪ್ತವಾಗಿಯೇ ಉಳಿದುವು. ಅದನ್ನು ಬಹಿರಂಗ ಪಡಿಸುವ ಅವಕಾಶ ಅವರಿಗೆ ದೊರೆಯಲೇ ಇಲ್ಲ. ಈ ಮಧ್ಯೆ ಮನೆಯ ತಾಪತ್ರಯಗಳು ಕೆಲವು ಬಂದು, ಅವರ ತಲೆಯ ಮೇಲೆ ಬಿದ್ದುವು. ತಂದೆಯವರು ಮಗನ ವಿದ್ಯಾಭ್ಯಾಸಕ್ಕಾಗಿ ಮಾಡಿದ ಒಂದೆರಡು ಸಾವಿರ ರೂಪಾಯಿಗಳ ಸಾಲವನ್ನು ತೀರಿಸಬೇಕಾಗಿ ಬಂತು. ಅವರಲ್ಲಿ ಹಣವಿರಲಿಲ್ಲ; ಇದ್ದ ಅಲ್ಪ ಸ್ವಲ್ಪ ಆಸ್ತಿಯಲ್ಲಿ ಕೆಲವಂಶವನ್ನು ಮಾರಲೇ ಬೇಕಾಯಿತು. ಹಾಗಾಗಿ ಮನೆಯ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಕಷ್ಟಕ್ಕಿಟ್ಟುಕೊಂಡಿತು. ಆದರೂ ಹೆದರಬೇಕಾದ ಅವಶ್ಯಕತೆಯೇನೂ ಇದ್ದಿರಲಿಲ್ಲ. ಮನೆಯ ಖರ್ಚಿಗೆ ಸಾಲು ವಷ್ಟು ಉತ್ಪನ್ನ ಈಗಲೂ ಇತ್ತು.

ಆದರೆ ಮತ್ತೊಂದು ಜವಾಬ್ದಾರಿ ಅವರ ತಲೆಯ ಮೇಲೆ ಬಿದ್ದಿತ್ತು. ಅದು ತನ್ನ ಓರ್ವಳೇ ತಂಗಿಯ ಮದುವೆ. ಮದುವೆಯೆಂದರೆ ಸುಮ್ಮನೆ ಆಗುವುದಿಲ್ಲ. ಐದಾರು ಸಾವಿರ ರೂಪಾಯಿಗಳಾದರೂ ಬೇಕು. ಬರೇ ಹೆಣ್ಣಿನ ರೂಪ-ಗುಣಗಳನ್ನು ಕಂಡು ಮದುವೆಯಾಗುವವರು ಆ ಕಾಲದಲ್ಲಿ ಯಾರೂ ಇದ್ದಿಲ್ಲ. ವಿದ್ಯಾವಂತರು ಕೂಡಾ ಐದು ಸಾವಿರ ಎಂದು ವರದಕ್ಷಿಣೆಯ ಮುಖ ವನ್ನೇ ನೋಡುತ್ತಿದ್ದರು.

ತಾಯಿಯೂ ದಿನಕಳೆದಂತೆ ಕ್ಷೀಣವಾಗುತ್ತಲಿದ್ದಳು!

“ ರಾಮೂ, ಶಾಂತಿಯ ಮದುವೆಯಾಗಬೇಡವೇ ? ಎಲ್ಲಿಯಾದರೂ ಒಳ್ಳೆಯ ಸಂಬಂಧ ನೋಡು ಮಗು. ಅವಳ ತಲೆಯ ಮೇಲೆ ಮಂತ್ರಾಕ್ಷತೆ

ಬಿದ್ದು ಬಿಟ್ಟಿತೆಂದರೆ ನಾನು ನೆಮ್ಮದಿಯಿಂದ ಸಾಯುವೆ " ಎನ್ನುತ್ತಿದ್ದರು.

ತಾಯಿಯ ಬೇಸರ ಅವರಿಗೆ ತಿಳಿದಿತ್ತು. ಆದರೂ ಅವರು ಹಾಗೆಂದಾಗ ಲೆಲ್ಲ ನಗುವಿನಲ್ಲಿಯೇ ಅವರ ಮಾತನ್ನು ತೇಲಿಸಿಬಿಡುತ್ತಿದ್ದರು.

" ಸೊಸೆ ಮತ್ತು ಅಳಿಯ ಬಂದ ಮೇಲೆ ಮೊಮ್ಮಗನನ್ನು ಕಂಡು ಸಾಯಬೇಡವೇನಮ್ಮ ? "

ಮಗನ ಮಾತನ್ನು ಕೇಳಿ ತಾಯಿ ನಗುತ್ತಿದ್ದಳು.

" ಶಾಂತುಗೆ ಎಲ್ಲಾದರೂ ವರ ನೋಡಿದ್ದೀಯಾ ರಾಮೂ ? "

" ಪ್ರಯತ್ನ ಮಾಡುತ್ತಲೇ ಇದ್ದೇನಮ್ಮ. ಅವಳಿಗೇನು ಈಗಾಗಲೇ ಮದುವೆಯ ಪ್ರಾಯ ದಾಟಿ ಹೋಗಿಲ್ಲ. ಇನ್ನೂ ಹದಿನಾಲ್ಕು ವರುಷವಷ್ಟೇ. ಅವಳ ಮೇಟ್ರಿಕ್ಕಾದರೂ ಮುಗಿಯಲಿ." ಮಗನ ಮಾತು ಕೇಳಿ ತಾಯಿ ಮುಖ ಮುದುಡಿಸಿಕೊಳ್ಳುವಳು.

" ಪ್ರಾಯ ದಾಟುವುದೆಂದರೆ ಇನ್ನೂ ಏನಾಗಬೇಕು ರಾಮು ? ಅವಳ ಪ್ರಾಯದಲ್ಲಿ ನಾನು ತಾಯಿಯಾಗಿದ್ದೆ. ಪ್ರಾಯಕ್ಕೆ ಬಂದ ಹುಡುಗಿಯರನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದಪ್ಪ. "

" ನಿಮ್ಮ ಕಾಲ ಬೇರೆ, ಈಗಿನ ಕಾಲ ಬೇರೆ. ಹದಿನಾರು ವರುಷಕ್ಕೆ ಮೊದಲು ಈಗ ಮದುವೆಯಾಗುವುದೇ ಇಲ್ಲವಮ್ಮ. ಸರಕಾರ ಕೂಡ ಹಾಗೊಂದು ಕಾನೂನನ್ನೇ ಮಾಡಿದೆ. "

" ಮತ್ತೆ ಅವರು ಯಾರನ್ನಾದರೂ ಕಟ್ಟಿಕೊಂಡು ಓಡಿಹೋಗಲಿ.

" ನಮ್ಮ ಶಾಂತೂ ಹಾಗೇನೂ ಮಾಡಲಾರಳಮ್ಮ. ಆಗಲಿ ನಾನಾದರೂ ಆದಷ್ಟು ಬೇಗನೆ ಅವಳ ಮದುವೆಯ ವ್ಯವಸ್ಥೆ ಮಾಡುವೆ." ಅದು ಅವರು ಬರೇ ತಾಯಿಯ ಸಮಾಧಾನಕ್ಕಾಗಿ ಆಡುವ ಮಾತು

ಅಷ್ಟು ಹೊತ್ತಿಗೆ ಶಾಂತಿ ಶಾಲೆಯಿಂದ ಬಂದವಳು, "ಅಮ್ಮಾ ಅಮ್ಮಾ" ಎಂದು ಕೂಗುತ್ತಾ ಮನೆಯನ್ನು ಪ್ರವೇಶಿಸುವಳು. ಅಲ್ಲಿ ಅವಳ ಮದುವೆಯ ಪ್ರಸ್ತಾಪ ಮುಗಿಯುತ್ತಿತ್ತು.

ಆದರೂ ರಾಮರಾಯರು ಕುಣಿಯುತ್ತಾ ಬಂದ ತಂಗಿಯನ್ನು ಮೂದಲಿಸುವರು.

" ಅಮ್ಮನಿಗೆ ಬಹಳ ಚಿಂತೆ ಶಾಂತೂ ? "

" ಏನಮ್ಮ ಅಂಥ ಚಿಂತೆ? " ಎಂದು ಅಚ್ಚರಿಯಿಂದ ತನ್ನ ಬಾಹು ಗಳನ್ನು ಅಮ್ಮನ ಕೊರಳ ಸುತ್ತ ಬಳಸುವಳು.

" ಮತ್ತೇನು, ಆಕೆಗೊಬ್ಬ ಅಳಿಯನನ್ನು ಅರ್ಜೆಂಟ್ ತಂದು ಕೊಡ ಬೇಕಂತೆ ? "

" ಹೋಗಣ್ಣ, ನಾನು ಮದುವೆಯಾಗುವುದೇ ಇಲ್ಲಮ್ಮ, ಯಾವಾ ಗಲೂ ನಿನ್ನ ಹತ್ತಿರವೇ ಇದ್ದುಬಿಡುವೆ. "

ತಾಯಿ ಸ್ನೇಹದಿಂದ ಮಗಳನ್ನು ಮುದ್ದಿಡುವರು.

" ಹುಚ್ಚಿ, ಹಾಗೆಲ್ಲ ಇರುವುದಕ್ಕಾಗುತ್ತದೆಯೇ ಮಗು? ಹೆಣ್ಣಾಗಿ ಹುಟ್ಟಿದ ಮೇಲೆ ಮದುವೆಯಾಗದಿರುವುದಕ್ಕೆ ಸಾಧ್ಯವಿದೆಯೇ ? "

" ಇಲ್ಲಮ್ಮ, ನಾನು ನಿನ್ನನ್ನು ಬಿಟ್ಟು ಹೋಗುವುದೇ ಇಲ್ಲ. "

ತಾಯಿಯ ಹೃದಯ ಅಭಿಮಾನದಿಂದ ಉಬ್ಬಿ ಹೋಗುವುದು. ಸ್ನೇಹ ದಿಂದ ಆಕೆಯ ಕೂದಲನ್ನು ನೇವರಿಸುವರು.

" ಹಾಗೆನ್ನಬಾರದು ಕಂದ. " ಈ ಸಂದರ್ಭವನ್ನು ಉಪಯೋಗಿಸಿ ರಾಮ ರಾಯರು ಮೆಲ್ಲನೆ ಅಲ್ಲಿಂದ ಜಾರುವರು.

ತಾಯಿ ಎದ್ದು ಮಗಳಿಗೆ ಕಾಫಿ-ತಿಂಡಿ ಕೊಡುವಳು ; ಅದಾದ ಮೇಲೆ ಆಕೆ ಅಲ್ಲಿ ನಿಲ್ಲುವಂತಿಲ್ಲ.

" ಅಮ್ಮಾ, ಶಾರೀ ಮನೆಗೆ ಹೋಗಿ ಬರ್ತೇನೆ " ಎಂದು ಓಡುವಳು.

' ಹುಚ್ಚು ಹುಡುಗಿ ಮದುವೆಯಾಗುವುದಿಲ್ಲವಂತೆ ' ಎಂದು ತಾಯಿ ಮನ ಸ್ಸಿನಲ್ಲಿಯೇ ನಕ್ಕು ತಮ್ಮ ನಿತ್ಯದ ಕೆಲಸದಲ್ಲಿ ತೊಡಗುವರು.

ರಾಮರಾಯರು ಬಾಯಿಯಲ್ಲಿ ತಾಯಿಗೆ ಸಮಾಧಾನ ಹೇಳಿದರೂ ಅವರ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ತಂಗಿಯ ಮದುವೆ ಮಾಡುವುದು ಅಷ್ಟು ಸುಲ ಭದ ಕೆಲಸವಲ್ಲವೆನ್ನುವುದು ಅವರಿಗೆ ಚೆನ್ನಾಗಿ ತಿಳಿದಿತ್ತು.

ರಾಮರಾಯರ ಯೋಚನೆ ತಂಗಿಯನ್ನು ಬಿಟ್ಟು ತಂಗಿಯ ಗೆಳತಿಯ ಕಡೆಗೆ ಹರಿಯಿತು ; ಆದರೆ ಆಕೆ ಒಮ್ಮೆಯಾದರೂ ಇವರನ್ನು ಕಂಡಿಲ್ಲ. ಶಾಂತಿ ದಿನವಿಡೀ ಆಕೆಯ ಮನೆಯಲ್ಲಿಯೇ ಇರುತ್ತಿದ್ದರೂ ಗೆಳತಿಯನ್ನು ಒಮ್ಮೆ ಯಾದರೂ ತಮ್ಮಲ್ಲಿ ಕರೆದು ತಂದಿರಲಿಲ್ಲ.

ಶಾರದೆ ನಿಜವಾಗಿಯೂ ಎಂಥಾ ಚೆಲುವೆ. ಚೆಲುವಿನ ಬೆಂಗಡೆಯಲ್ಲಿ

ಅಡಗಿರುವ ಆಕೆಯ ಹೃದಯದ ಮಧುರತೆಯ ಪ್ರತೀಕವೆಂಬಂತೆ ಅವ
ಮುದ್ದು ಮುಖ ಕಂಡವರನ್ನು ತನ್ನ ಕಡೆಗೆ ಆಕರ್ಷಿಸುತ್ತಿತ್ತು. ಆದ
ಅವಳಿನ್ನೂ ನಿರ್ಬೋಧ ಬಾಲಿಕೆ. ಜಗತ್ತಿನ ನೋವು, ದುಃಖ, ಕಲ್ಮಷಗ
ಸ್ಪರ್ಶ ಇನ್ನೂ ಅವಳ ನಿಷ್ಕಳಂಕ ಹೃದಯಕ್ಕೆ ಆಗಿರಲಿಲ್ಲ. ತಾನೂ ಮದು
ಯಾಗಿ ಪರಕೀಯನಾದ ಪುರುಷನೊಡನೆ ತನ್ನ ಬಾಳುವೆಯನ್ನೆಲ್ಲಾ ಕಳೆಂ
ಬೇಕೆನ್ನುವ ಕಲ್ಪನೆ ಕೂಡ ಅವಳಲ್ಲಿ ಮೂಡಿರಲಿಲ್ಲ.

ಆದರೆ ಅವಳು ರಾಮರಾಯರ ಹೃದಯವನ್ನು ಪೂರ್ತಿಯಾಗಿ ಆಕ್ರಮಿ
ಬಿಟ್ಟಿದ್ದಳು. ಶಾರದೆಗೆ ಆ ವಿಚಾರ ಸ್ವಲ್ಪವೂ ತಿಳಿಯದು. ಶಾಂತಿಯ ಅಣ್
ನನ್ನು ಈವರೆಗೆ ಆಕೆ ಸರಿಯಾಗಿ ಕಂಡಿರಲಿಲ್ಲ. ಶಾಂತಿ ತಾನಾಗಿ ಒಮ್ಮೆ ಅಣ್ಣ
ವಿಚಾರಗಳನ್ನು ಅವಳೆದುರು ಹೇಳುತ್ತಿದ್ದಳು. "ಶಾರೀ, ನನ್ನಣ್ಣ ಎಷ್ಟು ಒ
ಯವರು ಗೊತ್ತೇ?" ಎನ್ನುವಾಗ ಅವರನ್ನೊಮ್ಮೆ ನೋಡಬೇಕೆನ್ನುವ ಬಯ
ಯಾಗುವುದು. ಅದನ್ನು ಶಾಂತಿಯ ಎದುರು ಆಡಿ ತೋರಿಸಿದರೆ ಆಕೆ ದಿ
ವಿಡೀ ಹಾಸ್ಯ ಮಾಡಿ ತನ್ನನ್ನು ಕೊಲ್ಲುವಳು ಎಂದು ಆಕೆಗೆ ತಿಳಿದಿತ್ತು. ಒವೆ
ಯಾದರೂ ಅವಳು ಶಾಂತಿಯ ಮನೆಗೆ ಹೋಗಿರಲಿಲ್ಲ.

ಭಾಗ್ಯವಶಾತ್ ಅವಳ ಆಶೆ ಈಡೇರುವ ಸಂದರ್ಭ ಒದಗಿತು. ಅಂದ
ಭಾನುವಾರ, ಎಲ್ಲರಿಗೂ ರಜೆ. ಶಾಂತಿ ಓಡುತ್ತಾ ಬಂದು ಗೆಳತಿಯನ
ತಬ್ಬಿಕೊಂಡಳು.

"ಏನೇ ಇದು ಹುಚ್ಚು?"

"ಶಾರೀ, ನಾನು ನಿನ್ನ ಗೆಳತಿಯಲ್ಲವೇ?"

"ಇದೇನು ನಿನ್ನ ರಾಮಾಯಣ, ಏನಾಯಿತು ಹೇಳಬಾರದೆ?"

"ನನ್ನದೊಂದು ಬೇಡಿಕೆಯಿದೆ, ನಡೆಸಿ ಕೊಡುತ್ತೀಯಾ?" ಅವ
ದೈನ್ಯವನ್ನು ಕಂಡು ಶಾರಿಗೆ ಬೇಸರವಾಯಿತು.

"ಹುಚ್ಚಿ, ಹೇಳಬಾರದೇನೆ" ಎಂದು ಸ್ನೇಹದಿಂದ ಆಕೆಯ ಕೇ
ಹಿಂಡಿದಳು.

"ನಿನ್ನನ್ನು ಊಟಕ್ಕೆ ಕರೆದು ತರುವೆನೆಂದು ಅಮ್ಮನಿಗೆ ಮಾತ
ಕೊಟ್ಟಿದ್ದೇನೆ."

"ಅಷ್ಟೇನೇ?" ಎಂದು ಶಾರಿ ಬಿದ್ದು ಬಿದ್ದು ನಕ್ಕಳು.

" ಏಕೆ ಬರುವುದಿಲ್ಲವೇ ? "

" ಅಯ್ಯೋ ಹುಚ್ಚಿ. ನೀನು ಊಟಕ್ಕೆ ಕರೆದರೆ ನಾನು ಬಾರದಿರುತ್ತೇನೆಯೇ ? ಅದಕ್ಕೆ ಇಷ್ಟು ಉದ್ದ ರಾಮಾಯಣ ಬೇಕೆ ? "

" ನನ್ನ ಮುದ್ದು " ಎಂದು ಶಾಂತಿ ಗೆಳತಿಯ ಗಲ್ಲಕ್ಕೆ ಮುತ್ತಿಟ್ಟಳು.

ಶಾಂತಾ ವಿಜಯೋತ್ಸಾಹದಿಂದ ಗೆಳತಿಯನ್ನು ಕರೆದುಕೊಂಡು ತನ್ನ ಮನೆಯ ಮೆಟ್ಟಲೇರಿದಳು ; ಜಗುಲಿಯ ಮೇಲೆ ಕಾಲಿರಿಸಬೇಕಾದರೆ ಅವರ ಕಣ್ಣಿಗೆ ಬಿದ್ದುದು ಅವಳಣ್ಣ.

" ಇವರೇ ನನ್ನ ಅಣ್ಣಾ ಶಾರೀ. "

ಶಾರದೆ ಮೊದಲ ಬಾರಿಗೆ ತಲೆಯೆತ್ತಿ ಅವರನ್ನು ನೋಡಿದಳು. ಅವಳಿಗೆ ನಾಚಿಕೆ ಎನಿಸಲಿಲ್ಲ— ತನ್ನ ಗೆಳತಿಯ ಅಣ್ಣನಲ್ಲವೇ ? ಕೈಯೆತ್ತಿ ನಮಸ್ಕಾರ ಮಾಡಿದಳು.

ರಾಮರಾಯರು ನಿಂತೇ ಇದ್ದರು. ಅವಳನ್ನು ತಮ್ಮ ಮನೆಯಲ್ಲಿ ಕಂಡು ಅವರ ಹೃದಯ ಆನಂದದಿಂದ ಅರಳಿತು. ಮಂತ್ರಮುಗ್ಧರಂತೆ ಅವಳನ್ನು ನೋಡುತ್ತಾ ನಿಂತರು. ತಮ್ಮ ಸಮಾಧಿಯಲ್ಲಿ ಅವಳಿಗೆ ಪ್ರತಿ ನಮಸ್ಕಾರ ಮಾಡುವುದು ಅವರಿಗೆ ಮರವೆಯಾಯಿತು. ಅವರು ಹಾಗೇ ತನ್ನನ್ನೇ ನೋಡುತ್ತ ನಿಂತುದನ್ನು ಕಂಡು ಶಾರದೆಗೆ ನಾಚಿಕೆಯಾಯಿತು. ತಲೆ ತಗ್ಗಿಸಿದಳು.

ಅಣ್ಣಾನ ವರ್ತನೆಯನ್ನು ಕಂಡು ಶಾಂತಿಗೆ ಸೋಜಿಗವೆನಿಸಿತು. ಅವಳು ತುಂಟ ಹುಡುಗಿ.

" ಶಾರಿಯನ್ನು ಹಾಗೇನು ನೋಡುತ್ತಿರುವಿರಣ್ಣಾ, ದೃಷ್ಟಿ ತೆಗೆಯುತ್ತಿದ್ದೀರೇನು ? "

ಅವರು ಎಚ್ಚೆತ್ತರು. ತಮ್ಮ ತಪ್ಪು ತಿಳಿಯಿತು. ಮರುಕ್ಷಣದಲ್ಲಿಯೇ ಸಾವರಿಸಿಕೊಂಡು ಮುಗುಳು ನಕ್ಕರು.

" ಶಾರಿ ನನಗೆ ಬೇಕಣ್ಣಾ, ಅವಳನ್ನು ಯಾರಿಗೂ ಕೊಡಲಾರೆ. " ಎಂದು ತಂಗಿ ಮತ್ತೊಂದು ತುಂಟ ನಗೆ ಬೀರಿದಳು.

ಗೆಳತಿಯ ಕೈಯಲ್ಲಿ ಕೈ ಹಾಕಿಕೊಂಡು ಒಳಗೆ ನಡೆದಳು.

" ಅಮ್ಮಾ, ಶಾರಿ ಬಂದಿದ್ದಾಳಮ್ಮ. " ತಾಯಿ ತಲೆಯೆತ್ತಿದಳು. ತನ್ನ

ಮಗಳ ಜೊತೆಯಲ್ಲಿದ್ದವಳನ್ನು ನೋಡಿದರು. ಮೊದಲ ನೋಟಕ್ಕೇ ಅವಳು ಅವರಿಗೆ ಮೆಚ್ಚಿಗೆಯಾಗಿದ್ದಳು. ಶಾರಿ ಮಾತನಾಡದೆ ತಾಯಿಗೆ ವಂದಿಸಿದಳು. ಅವರ ಸಂತಸಕ್ಕೆ ಪಾರವಿಲ್ಲದಾಯಿತು. " ನೂರು ವರುಷ ಸುಮಂಗಲಿಯಾಗಿ ಬಾಳಮ್ಮ. ಭಾಗ್ಯವಂತನ ಕೈ ಹಿಡಿದು ಮುತ್ತೈದೆಯಾಗಿ ಬಾಳು." ಅದು ಅವರ ಹೃದಯಾಂತರಾಳದಿಂದ ಹೊರಟ ಮಾತು.

ನಾಚಿಕೆಯೆನಿಸಿದರೂ ತೋರಿಸಿಕೊಳ್ಳದೆ ಶಾರಿ ಎದ್ದು ನಿಂತಳು. ಅವಳ ವರ್ತನೆಯನ್ನು ಕಂಡು ತಾಯಿಯ ಹೃದಯದಲ್ಲಿ ಯಾವುದೋ ಅವ್ಯಕ್ತ ಆಸೆ ಯೊಂದು ಜಾಗ್ರತವಾಯಿತು. ' ಇವಳು ನನ್ನ ಸೊಸೆಯಾಗಿ ಬಂದರೆ ? '

" ಅಮ್ಮನ ಆಶೀರ್ವಾದ ದೊರೆಯಿತೇ ಶಾರೀ. ನಿನಗೆ ಒಳ್ಳೆಯ ಗಂಡ ಸಿಗುತ್ತಾನೆ." ಅವಳು ಮಾತನಾಡಲಿಲ್ಲ; ಗದರಿಸುವವಳಂತೆ ಗೆಳತಿಯನ್ನು ನೋಡಿದಳು. ಆದರೆ ಆ ನೋಟದಲ್ಲಿ ಸ್ನೇಹ ತುಂಬಿತ್ತು.

ಅಂದಿನ ದಿನ ಗೆಲುವಿನಲ್ಲಿಯೇ ಕಳೆಯಿತು. ಶಾಂತಿಯ ತಾಯಿ ಗೆಳತಿ ಯರಿಬ್ಬರನ್ನೂ ಜೊತೆಯಾಗಿ ಕೂರಿಸಿ ಬಡಿಸಿದಳು. ಊಟ ಮುಗಿಸಿ ಕೆಲ ಹೊತ್ತಿನ ವರೆಗೆ ಗೆಳತಿಯರಿಬ್ಬರೂ ಹರಟೆ ಹೊಡೆಯುತ್ತಾ ಕುಳಿತರು. ಸಂಜೆ ಯಾಗುವುದಕ್ಕಾಯಿತು.

" ಇನ್ನು ಹೋಗೋಣವೇ ಶಾಂತೂ ? ಸಂಜೆಯ ಕಾಫಿ ನಮ್ಮ ಮನೆ ಯಲ್ಲಾಗಲಿ." ಸರಿ ಅದಕ್ಕೆ ಆಕ್ಷೇಪಣೆಯೇನೂ ಇರಲಿಲ್ಲ. ಇಬ್ಬರೂ ಹೊರಟರು.

" ಹೋಗಿ ಬರುವೆನಮ್ಮ." ತಾಯಿ ಮತ್ತೊಮ್ಮೆ ಅವಳನ್ನು ನೋಡಿ ನಿಟ್ಟುಸಿರುಬಿಟ್ಟರು. ನೋವು, ಆಸೆ ತುಂಬಿದ ನಿಟ್ಟುಸಿರು.

" ಹೋಗಿ ಬಾಮ್ಮಾ, ಯಾವಾಗಲೂ ಬರುತ್ತಿರು."

ಅವಳು ತಾಯಿಗೆ ವಂದಿಸಿ ಹೊರಟಳು. ಹುಡುಗಿಯರಿಬ್ಬರೂ ಕಣ್ಮರೆ ಯಾಗುವ ವರೆಗೆ ಅವರನ್ನೇ ನೋಡುತ್ತಾ ಮತ್ತೊಮ್ಮೆ ನಿಟ್ಟುಸಿರು ಬಿಟ್ಟರು ತಾಯಿ.

ಆಶ್ಚರ್ಯವೆಂದರೆ, ರಾಮರಾಯರು ಒಮ್ಮೆಯಾದರೂ ಅವರ ಕಣ್ಣ ಮುಂದೆ ಸುಳಿಯಲಿಲ್ಲ. ಬೆಳಗಿನ ತಮ್ಮ ವರ್ತನೆಯನ್ನು ಎಣಿಸಿ ಅವರಿಗೆ ತುಂಬಾ ನಾಚಿಕೆಯಾಗಿತ್ತು; ಅದರ ನಡುವೆ ತಂಗಿಯ ಅಣಕದ ಮಾತು.

ಹಾಗಾಗಿ ಆಕೆಯನ್ನು ನೋಡಬೇಕೆಂದು ಎಷ್ಟು ಆಶೆಯಾದರೂ ಅದಕ್ಕವರು ಪ್ರಯತ್ನಿಸಲಿಲ್ಲ; ತಮ್ಮ ಕೋಣೆಯಲ್ಲಿಯೇ ಕುಳಿತುಕೊಂಡರು.

ಮತ್ತೆ ಪ್ರಾರಂಭವಾಯಿತು ಗೆಳತಿಯರ ಸರಸ ಸಲ್ಲಾಪ.

" ಎಂಥವಳೇ ಶಾಂತೂ ನೀನು. ಅಮ್ಮನೆದುರು ಹಾಗೆಲ್ಲಾ ಹೇಳುವುದೇ ? "

" ಇದ್ದುದನ್ನು ಹೇಳಿದರೆ ತಪ್ಪೇನು ? "

" ಸಾಕೆ ಸುಮ್ಮನಿರು. "

ಶಾಂತಿ ಅವಳ ಮುಖವನ್ನು ಕಂಡು ನಗುತ್ತಿದ್ದಳು.

" ಎಂಥಾ ತುಂಟ ಹುಡುಗಿಯೇ ನೀನು. " ಶಾರಿ ಸ್ನೇಹದಿಂದ ಗೆಳತಿಯ ಗಲ್ಲ ಹಿಂಡಿದಳು.

" ಅಯ್ಯೋ, ಅಮ್ಮಾ ಇಲ್ಲಿ ನೋಡೇ ? " ಎಂದು ಒಮ್ಮೆಗೆ ಕೂಗಾಡಿದಳು. ಶಾರದೆಯ ತಾಯಿ ವನಜಮ್ಮ ' ಏನೇ ಶಾರಿ ಅದು ? ' ಎನ್ನುತ್ತ ಗಾಬರಿಯಿಂದ ಓಡಿಬಂದಳು. ಇಬ್ಬರೂ ಬಿದ್ದು ಬಿದ್ದು ನಗುತ್ತಿದ್ದರು. ವನಜಮ್ಮನೂ ಅವರ ನಗುವಿನಲ್ಲಿ ದನಿಗೂಡಿಸಿದಳು.

" ಹುಚ್ಚು ಹುಡುಗಿಯರು, ನಾನು ಏನೋ ಅಂತ ಗಾಬರಿಯಾಗಿಬಿಟ್ಟೆ. "

" ನೋಡಮ್ಮ, ಗಲ್ಲ ಹಿಂಡಿ ಶಾರಿ ಹೇಗೆ ಮಾಡಿದ್ದಾಳೆ" ಎಂದು ಕೆಂಪಗಾದ ಗಲ್ಲವನ್ನು ತೋರಿಸಿದಳು.

" ನಾನಲ್ಲಮ್ಮ, ಯಾರೋ ಅವಳ ಗಂಡ ಬಂದಿದ್ದ. "

" ಹೋಗೇ ನೀನು. "

ವನಜಮ್ಮ ಮಕ್ಕಳ ಆಟವನ್ನು ಕಂಡು ನಗುತ್ತ ಅಡುಗೆಯ ಮನೆ ಕಡೆಗೆ ನಡೆದರು. ಅವರ ಪಾಲಿಗೆ ಅದೇನೂ ಹೊಸತಲ್ಲ; ದಿನವೂ ಅವರು ಹೀಗೆಯೇ ಹೊಡೆದಾಡಿಕೊಳ್ಳುತ್ತಿದ್ದರು. ಸ್ವಲ್ಪ ಹೊತ್ತು ಕಳೆಯುವುದರೊಳಗೆ ವನಜಮ್ಮನ ಕರೆ ಕೇಳಿಸಿತು.

" ಶಾರೀ, ಶಾಂತೂನ ಕರೆದುಕೊಂಡು ಬಾರೇ. " ಇಬ್ಬರೂ ಅಡುಗೆಯ ಮನೆಯತ್ತ ಓಡಿದರು. ವನಜಮ್ಮನ ಪಾಲಿಗೆ ಇಬ್ಬರೂ ಮನೆಯ ಮಕ್ಕಳೇ

ಆಗಿದ್ದರು. ಸಂಜೆಯ ಉಪಹಾರ ಮುಗಿಯಿತು ; ಏನೇನೋ ಸಿಹಿ ತಿಂಡಿ ಮಾಡಿದ್ದರು.

ಶಾಂತಿ-ಶಾರದೆಯರಿಬ್ಬರೂ ದಿನಗಳೆದಂತೆ ತೀರ ಸಮೀಪದವರಾಗುತ್ತ ನಡೆದಿದ್ದರು. ಇಬ್ಬರ ಹೃದಯಗಳೂ ಅಷ್ಟು ಸ್ನೇಹದಿಂದ ಜೊತೆಗೂಡಿದ್ದುವು. ಶಾಂತಿಗೆ ಸ್ವಲ್ಪವಾದರೂ ನೋವಾದರೆ ಶಾರಿ ಸಹಿಸುತ್ತಿರಲಿಲ್ಲ. ಶಾಂತಿಯಾದರೂ ಹಾಗೆಯೇ— ಒಡಹುಟ್ಟಿದ ಸಹೋದರಿಯರಿಗಿಂತಲೂ ಅವರ ಬಾಂಧವ್ಯ ಬೆಳೆದು ಹೋಗಿತ್ತು.

ರಾಮರಾಯರ ದಿನಚರಿ ಮಾತ್ರ ಬೇರೆಯೇ ವಿಧವಾಗಿ ಸಾಗಿತ್ತು. ತಮ್ಮ ತಾಪತ್ರಯಗಳ ನಡುವೆ ಅವರನ್ನು ಅತಿಯಾಗಿ ಕಾಡುತ್ತಿದ್ದ ವಿಷಯ ವೆಂದರೆ ಶಾರದೆಯದು. ಆಕೆಯ ನೆನಪು ಅವರ ನಿದ್ದೆಯನ್ನು ಓಡಿಸಿತ್ತು. ರಾತ್ರಿ ಮಲಗಿದವರು ಬೆಳಗಾಗುವುದನ್ನೇ ಕಾಯುತ್ತಿದ್ದರು. ಅವಳ ಹಾಡಿನ ದನಿಯನ್ನು ಕೇಳಲು ಅವರ ಹೃದಯ ತವಕಗೊಳ್ಳುತ್ತಿತ್ತು. ಎದ್ದೊಡನೆ ಮನೆಬಾಗಿಲನ್ನು ಗುಡಿಸಲು ಬರುವ ಆಕೆಯನ್ನು ಕಂಡ ವಿನಃ ಅವರಿಗೆ ನೆಮ್ಮದಿ ಯಿಲ್ಲ. ಆಕೆಯನ್ನು ಕಾಣದೆ ಕೋಣೆಯಿಂದ ಹೊರಡುತ್ತಿರಲಿಲ್ಲ. ಆಮೇಲೆ ತಂಗಿಯ ಜೊತೆಯಲ್ಲಿ ಶಾಲೆಗೆ ಹೋಗುವುದನ್ನು ಕಾಣಬೇಕು. ಆಮೇಲೆಯೇ ಅವರು ತಮ್ಮ ಕೆಲಸಕ್ಕೆ ಹೊರಡುವುದು. ಮನಸ್ಸಿನ ಆತುರ ದಿನದಿನಕ್ಕೆ ಹೆಚ್ಚುತ್ತಿತ್ತು.

ರಾಮರಾಯರ ಚಿಂತೆ ಹೆಚ್ಚಿದಂತೆ ಅವರು ತಮ್ಮ ಮನಸ್ಸಿನ ಹಿಡಿತ ವನ್ನು ಕಳೆದುಕೊಳ್ಳಲಾರಂಭಿಸಿದರು. ಕೋಣೆಯಲ್ಲಿಯೇ ನಿಂತು ನೋಡು ವವರು ಹೊರಜಗುಲಿಯ ಮೇಲೆ ಬಂದು ನಿಲ್ಲಲಾರಂಭಿಸಿದರು. ಆಕೆಯೂ ತನ್ನನ್ನು ನೋಡುವಂತಾಗಬೇಕೆಂದು ಅವರ ಹೃದಯ ಬಯಸುತ್ತಿತ್ತು. ಅದ ಕ್ಕಾಗಿಯೇ ಈ ಪ್ರಯತ್ನ.

ನಾಲ್ಕಾರು ದಿನಗಳ ವರೆಗೆ ಹಾಗೆ ನಿಂತರೂ ಅವರ ಪ್ರಯತ್ನ ಫಲಕಾರಿ ಯಾಗಲಿಲ್ಲ. ಶಾರಿಯ ಗಮನ ಆಕಡೆ ಸುಳಿಯಲಿಲ್ಲ. ನಿಯಮದಂತೆ ತನ್ನ ಕೆಲಸವನ್ನು ಮಾಡಿ ಆಕೆ ಹೋಗಿಬಿಡುತ್ತಿದ್ದಳು. ಆದೊಂದು ದಿನ ಅಕಸ್ಮಾತ್ತಾಗಿ ಆಕೆಯ ದೃಷ್ಟಿ ಶಾಂತಿಯ ಮನೆಯ ಕಡೆಗೆ ಹರಿಯಿತು. ಜಗುಲಿಯ ಮೇಲೆ ಅವಳ ಅಣ್ಣ ನಿಂತು ತನ್ನನ್ನೇ ನೋಡುತ್ತಿರುವುದು ಕಂಡಿತು. ಅವಳದಕ್ಕೆ

ಯಾವ ಅರ್ಥವನ್ನೂ ಕಲ್ಪಿಸಲಿಲ್ಲ. ಸುಮ್ಮನೆ ಎದ್ದವರು ಬಂದು ನಿಂತಿರಬಹುದೆಂದುಕೊಂಡಳು; ಆದರೆ ಅದು ಅಷ್ಟಕ್ಕೆ ನಿಲ್ಲಲಿಲ್ಲ.

" ನನ್ನ ಅಣ್ಣ ತುಂಬಾ ಒಳ್ಳೆಯವರು ಶಾರೀ " ಎಂದ ಶಾಂತಿಯ ನುಡಿ ಕಿವಿಯಲ್ಲಿ ಪ್ರತಿಧ್ವನಿಸಿತು. ಮೈಯಲ್ಲಿ ಒಮ್ಮೆಲೇ ವಿದ್ಯುತ್ ಸಂಚಾರವಾದಂತೆನಿಸಿತು. ಪುನಃ ತಲೆಯೆತ್ತಿ ನೋಡಿದಳು. ತಲೆ ತಗ್ಗಿಸಲೇಬೇಕಾಯಿತು. ಅವರು ಇನ್ನೂ ಅಲ್ಲೇ ನಿಂತು ತನ್ನನ್ನೇ ನೋಡುತ್ತಿರುವುದು ಕಂಡಿತು. ಎಂದೂ ಇಲ್ಲದ ನಾಚಿಕೆ ಅವಳನ್ನಾವರಿಸಿತು. ಒಳಗೋಡಿಬಿಟ್ಟಳು.

ಅಷ್ಟಕ್ಕೇ ಆ ಪ್ರಸಂಗ ಕೊನೆಗೊಳ್ಳಲಿಲ್ಲ. ಮರುದಿನ ಬಂದಿತು. ಪುನಃ ನೋಡಿದಳು; ಅವರು ಅಲ್ಲಿಯೇ ನಿಂತಿದ್ದರು; ತನ್ನನ್ನೇ ನೋಡುತ್ತಿದ್ದರು. ಆಕೆಯ ಮನಸ್ಸಿನಲ್ಲಿ ಏನೇನೋ ವಿಚಾರಗಳು ಬಂದು ಹೋದುವು. ಆದರೂ ಅದಕ್ಕವಳು ಹೆಚ್ಚಿನ ಮಹತ್ವ ಕೊಡಲಿಲ್ಲ.

ಇನ್ನೂ ನಾಲ್ಕಾರು ದಿನಗಳು ಕಳೆದುವು. ಪ್ರತಿ ದಿನವೂ ಅವರು ಅಲ್ಲಿಯೇ ನಿಂತಿರುತ್ತಿದ್ದರು. ಇನ್ನಾದರೂ ಆಕೆಯದಕ್ಕೆ ಮಹತ್ತ್ವ ಕೊಡಲೇಬೇಕಾಯಿತು. ಹೊಸ ಹೊಸ ವಿಚಾರಗಳು ಅವಳ ತಲೆಯಲ್ಲಿ ಸುಳಿದು ಮಾಯವಾದುವು. ' ಅವರು ಹಾಗೇಕೆ ನಿಂತು ನನ್ನನ್ನೇ ನೋಡುತ್ತಿರುವುದು? ನನ್ನನ್ನವರು ಪ್ರೀತಿಸುತ್ತಿರಬಹುದೇ? ಇಲ್ಲವಾದರೆ ನನ್ನನ್ನು ನೋಡಲು ಅವರಿಗೇಕೆ ಅಷ್ಟು ಆತುರ? '

ಇಷ್ಟು ದಿನಗಳಲ್ಲಿ ಅವರನ್ನವಳು ಸ್ಪಷ್ಟವಾಗಿ ನೋಡಿದ್ದಳು. ನೋಡಲು ಆಕರ್ಷಣೀಯವಾಗಿಯೇ ಇದ್ದರು. ಅವರು ತನ್ನ ಪತಿಯಾಗಲು ಸಾಧ್ಯವಿರುವುದಾದರೆ, ಅಂಥಾ ಪ್ರಸಂಗ ಬರುವುದಾದರೆ ಆಕೆಗೆ ಸಂತೋಷವೇ ಆಗುತ್ತಿತ್ತು. ಹಾಗಾಗುವುದರಲ್ಲಿ ಹೆಚ್ಚಿನ ಸಂತಸವೆಂದರೆ ತಾನು ತನ್ನ ಗೆಳತಿಯ ಅತ್ತಿಗೆಯಾಗಿ ಬರುವುದು. ನಾನೂ ಶಾಂತೂ ಜೊತೆಯಾಗಿಯೇ ಇರಬಹುದು. ಈ ವಿಚಾರ ಮನಸ್ಸಿನಲ್ಲಿ ಮೂಡಿದೊಡನೆ ಅವಳಿಗೆ ತುಂಬಾ ನಾಚಿಕೆ ಎನಿಸಿತು.

" ಛೀ, ಎಂಥಾ ಹುಚ್ಚಿ ನಾನು " ಎಂದುಕೊಂಡಳು.

ಮತ್ತೂ ದಿನಗಳು ಕಳೆದುವು. ದಿನವೂ ಒಬ್ಬರನ್ನೊಬ್ಬರು ಕಂಡು ನಗುವುದಕ್ಕೆ ಪ್ರಾರಂಭವಾಯಿತು. ಅವರು ತನ್ನನ್ನು ಕಂಡು ನಗುತ್ತಿರುವು

ದನ್ನು ಕಂಡಾಗಲೆಲ್ಲ ಶಾರಿ ನಾಚಿಕೆಯ ಪ್ರದರ್ಶನ ಮಾಡಿ ಓಡಿಬಿಡುತ್ತಿದ್ದಳು. ‘ ಅವರು ತನ್ನ ಪತಿಯಾದರೆ ನಾನೆಂಥ ಸುಖಿ ? ’ ಅದನ್ನೆಣಿಸಿದಂತೆಲ್ಲ ಆಕೆಯ ಹೃದಯ ಆನಂದದಿಂದ ಅರಳುತ್ತಿತ್ತು.

ಒಮ್ಮೊಮ್ಮೆ ಮನಸ್ಸಿನ ಉದ್ವೇಗವನ್ನು ತಡೆಯಲು ಅಸಾಧ್ಯವಾದಾಗ, ಏನೆಲ್ಲ ವಿಚಾರ ಮಾಡುವಳು. ‘ ಈಗಲೇ ಓಡಿ ಹೋಗಿ ಅವರ ಪಾದದ ಮೇಲೆ ಹಣೆಯಿರಿಸಿ, ಸ್ವೀಕರಿಸಿ ಎಂದು ಹೇಳಲೇ ? ’ ಆದರೆ ಅಷ್ಟು ಧೈರ್ಯ ಆಕೆ ಗಿದ್ದಿಲ್ಲ.

ರಾಮರಾಯರಾದರೂ ಅದೇ ದಾರಿಯಲ್ಲಿ ನಡೆದಿದ್ದರು. ಶಾರದೆಯನ್ನು ಎಂದೋ ಅವರು ತಮ್ಮ ಕನಸಿನ ಸಾಮ್ರಾಜ್ಯದ ರಾಣಿಯನ್ನಾಗಿ ಸ್ವೀಕರಿಸಿದ್ದರು. ದಿನಕಳೆದಂತೆ ಅವರ ಆ ಭಾವನೆ ಬೆಳೆಯುತ್ತಲೇ ಬಂದಿತು. ‘ ಶಾರದೆ ನನ್ನ ವಳು— ಆಕೆಯನ್ನಗಲಿ ಜೀವಿಸುವುದಕ್ಕೆ ತನ್ನಿಂದ ಸಾಧ್ಯವಿಲ್ಲ ’ ಎನ್ನುವ ನಿರ್ಧಾರಕ್ಕೂ ಅವರು ಬಂದಿದ್ದರು.

ಆದರೆ ಒಮ್ಮೆಯೂ ಇಬ್ಬರೂ ಕೂಡಿ ಮಾತನಾಡುವ ಅವಕಾಶ ದೊರೆಯ ಲಿಲ್ಲ. ಬರೀ ಮೂಕ ನೋಟ ನಗುವಿನಲ್ಲಿಯೇ ಅವರ ಸಂಭಾಷಣೆ ನಡೆಯು ತ್ತಿತ್ತು. ರಾಮರಾಯರು ತಾವಾಗಿ ಮುಂದುವರಿದು ಮಾತನಾಡಲು ಹಿಂಜರಿ ಯುತ್ತಿದ್ದರು ; ಶಾರದೆಗೆ ಸಂಕೋಚ. ‘ ಅವರೇ ಮೊದಲು ಮಾತನಾಡಲಿ, ನಾನು ಮಾತನಾಡಿ ನಾಚಿಕೆ ಬಿಟ್ಟವಳು ಎನ್ನಿಸಿಕೊಳ್ಳಲೇ ? ’ ಹೀಗಾಗಿ ಮಾತನಾಡುವ ಅವಕಾಶ ಇಬ್ಬರಿಗೂ ದೊರೆಯಲಿಲ್ಲ ; ಕೊನೆಯ ವರೆಗೂ ದೊರೆಯಲೇ ಇಲ್ಲ.

ಇಷ್ಟಾದರೂ ರಾಮರಾಯರು ತಮ್ಮ ಬಯಕೆಯನ್ನು ಕುರಿತು ಯಾರೊ ಡನೆಯೂ ಮಾತನಾಡಲಿಲ್ಲ ; ಶಾರಿಯೂ ಅಷ್ಟೇ. ತನ್ನ ಗೆಳತಿ ಶಾಂತಿಗೂ ಈ ವಿಚಾರದ ಸುಳಿವು ಕೊಡಲಿಲ್ಲ ; ಯಾರಿಗೂ ಇದು ತಿಳಿಯಬಾರದೆಂಬಂತೆ ಬಹಳ ಜಾಗರೂಕತೆಯಿಂದ ವರ್ತಿಸುತ್ತಿದ್ದಳು. ಹೀಗೆಯೇ ಹಲವು ಸಮಯ ಕಳೆಯಿತು. ರಾಮರಾಯರ ಮತ್ತು ಶಾರದೆಯ ಪ್ರಣಯ ಮೂಕ ಸಂಭಾಷಣೆ ಗಳಲ್ಲಿಯೇ ಮುಂದುವರಿಯಿತು.

ಇನ್ನೂ ಒಂದು ವರುಷ ಪೂರ್ತಿಯಾಗುವುದರೊಳಗೆ ಮತ್ತೊಂದು ಗಂಡಾಂತರವು ರಾಮರಾಯರ ಬದುಕಿನಲ್ಲಿ ಕಾದುಕೊಂಡಿತ್ತು. ಚಿಂತೆಯಿಂದ

ಕೊರಗಿ ಕೊರಗಿ ಅವರ ತಾಯಿ ಹಾಸಿಗೆ ಹಿಡಿದರು. ದಿನದಿನಕ್ಕೆ ಕ್ಷೀಣವಾಗ ತೊಡಗಿದರು. ಆಗೊಮ್ಮೆ ಈಗೊಮ್ಮೆ "ಸಾಯುವುದಕ್ಕೆ ಮೊದಲು ನಿನ್ನ ತಲೆಯ ಮೇಲೆ ಮಂತ್ರಾಕ್ಷತೆ ಬಿದ್ದುದನ್ನು ಕಂಡಿದ್ದರೆ— ಮನೆಗೆ ಸೊಸೆ ಬಂದಿದ್ದರೆ— ನೆಮ್ಮದಿಯಾಗಿ ಸಾಯುತ್ತಿದ್ದೆ" ಎಂದು ಬಡಬಡಿಸುತ್ತಿದ್ದರು. ಚಿಕಿತ್ಸೆಯಿಂದ ಏನೂ ಫಲವಾಗದೆ ಅದೊಂದು ದುರ್ದಿನದಲ್ಲಿ ಶಾಂತಿ ತಾಯಿಯನ್ನು ಕಳೆದು ಕೊಂಡು ಅನಾಥೆಯಾದಳು. ರಾಮರಾಯರಿಗೂ ತಾಯಿಯ ಸಾವಿನಿಂದ ದೊಡ್ಡ ಆಘಾತವಾಗಿತ್ತು. ಆದರೆ ಅದನ್ನವರು ಹೊರಗೆ ತೋರಿಸಿಕೊಳ್ಳಲಿಲ್ಲ. ಅದು ಅವರ ಸ್ವಭಾವಕ್ಕೆ ವಿರುದ್ಧವಾದ ವಿಚಾರ.

ತಾಯಿ ಹೋದ ಮೇಲೆ ಇನ್ನೊಂದು ಪ್ರಶ್ನೆ ಮುಂದೆ ಬಂದಿತು. ಮನೆ ಯಲ್ಲಿ ಅಡುಗೆಯ ವ್ಯವಸ್ಥೆಯಾಗಬೇಕು; ಮನೆಯಲ್ಲಿ ಹೆಂಗುಸೆಂದರೆ ಶಾಂತಿ ಯೊಬ್ಬಳೇ. ಗೋಪುವಂತೂ ಕಟ್ಟಿಗೆ ಸಿಗುತ್ತಲೇ ಇರಲಿಲ್ಲ. ಶಾಲೆಯಾಯಿತು, ಅವನ ಗೆಳೆಯರಾಯಿತು, ಆಟವಾಯಿತು. ಬೇರೆ ವಿಚಾರಗಳ ಕಡೆಗೆ ಅವನ ಗಮನವೇ ಇರುತ್ತಿರಲಿಲ್ಲ.

ರಾಮರಾಯರಿಗೆ ಯೋಚನೆಗಿಟ್ಟುಕೊಂಡಿತು. ತಂಗಿಯನ್ನು ಶಾಲೆ ಬಿಡಿಸಿ ಮನೆಯಲ್ಲಿ ಕೂರಿಸುವುದು ಅವರಿಗೆ ಇಷ್ಟವಿರಲಿಲ್ಲ. ಯಾರಾದರೂ ಅಡುಗೆಯವಳನ್ನು ನಿಯಮಿಸುವುದೋ ಎಂದು ಯೋಚಿಸಿದರು. ಆದರೆ ಶಾಂತಿ ಅಣ್ಣನ ತೀರ್ಮಾನವನ್ನು ಒಪ್ಪಲಿಲ್ಲ.

"ನೀನೇನೂ ಯೋಚನೆ ಮಾಡಬೇಡಣ್ಣ, ನಾನು ಶಾಲೆ ಬಿಟ್ಟುಬಿಡುವೆ. ನಿಮ್ಮಿಬ್ಬರಿಗೆ ಅಡುಗೆ ಮಾಡಿ ಹಾಕುವುದಕ್ಕೆ ನಾನು ಸಾಕು" ಎಂದಳು.

"ಬೇಡ ಶಾಂತೂ, ಮೆಟ್ರಿಕ್ ವರೆಗಾದರೂ ಓದು; ಅಡುಗೆಗೆ ಯಾರ ನ್ನಾದರೂ ನಿಯಮಿಸಿದರಾಯಿತು."

"ಇಲ್ಲಣ್ಣ, ಅದು ಸಾಧ್ಯವೇ ಇಲ್ಲ. ನಾನು ಸತ್ತ ಮೇಲೆ ಬೇಕಾದಂತೆ ಮಾಡಿ. ಹೆಣ್ಣುಮಕ್ಕಳು ಶಾಲೆ ಕಲಿತು ಉದ್ಧಾರ ಮಾಡುವುದು ಅಷ್ಟರಲ್ಲಿಯೇ ಇದೆ. ಗೃಹಿಣಿಯಾಗಬೇಕಾದರೆ ಶಾಲೆಯ ಓದಿನ ಅವಶ್ಯಕತೆಯಿಲ್ಲ." ತಂಗಿಯ ನಿರ್ಧಾರದ ಎದುರು ಅಣ್ಣನ ಬಾಯಿ ಕಟ್ಟಿಹೋಯಿತು. ಶಾಂತಿಯ ಓದಿಗೆ ಅದೇ ಕೊನೆಯಾಯಿತು.

ಅವಳ ನಿರ್ಧಾರವನ್ನು ಕೇಳಿ ಶಾರದೆಗೆ ತುಂಬಾ ಬೇಸರವಾಯಿತು. ಆದರೆ ಯಾವುದೂ ಶಾಂತಿಯ ನಿರ್ಧಾರವನ್ನು ಬದಲಿಸಲು ಶಕ್ತವಾಗಲಿಲ್ಲ. ಶಾರದೆಗೆ ಮಾತ್ರ ಇದರಿಂದ ಸ್ವಲ್ಪ ಕಷ್ಟವಾಯಿತು; ಮೊದಲಿನಂತೆ ಗೆಳತಿಯರು ಜೊತೆಯಲ್ಲಿ ಆಟವಾಡುವುದು ತಪ್ಪಿ ಹೋಯಿತಲ್ಲಾ ಎಂದು. ಆದರೂ ಆಕೆ ಮಾಡಿದ್ದು ಸರಿ ಎಂದು ಶಾರಿಗೂ ಅನ್ನಿಸದಿರಲಿಲ್ಲ. ಶಾಲೆಯಲ್ಲಿ ದೊರೆಯುವ ಶಿಕ್ಷಣವನ್ನು ಮೂಲೆಗೊತ್ತಿ ಗೃಹಿಣಿಯಾಗುವ ತರಬೇತಿಯನ್ನು ಪಡೆಯಲು ಮುಂದಾದಳು ಶಾಂತಿ.

ದಿನಗಳು ಕಳೆಯುತ್ತಲೇ ಇದ್ದುವು ; ರಾಮರಾಯರ ಹಾಗೂ ಶಾರದೆ ಯರ ಮೂಕ ಪ್ರಣಯ ಸಲ್ಲಾಪಗಳೂ ನಡೆಯುತ್ತಲೇ ಇದ್ದುವು. ಇಷ್ಟು ದಿನ ಗಳು ಕಳೆದರೂ ಅವರಿಬ್ಬರೊಳಗೆ ಒಮ್ಮೆಯಾದರೂ ಪ್ರತ್ಯಕ್ಷ ಮಾತು-ಕತೆ ನಡೆಯಲಿಲ್ಲ. ಆದರೆ ಜಗತ್ತಿಗರಿಯದ ರೀತಿಯಲ್ಲಿ ಇಬ್ಬರ ಹೃದಯಗಳೂ ತೀರಾ ಸಮೀಪವಾಗಿದ್ದುವು ; ಮನಃಪೂರ್ವಕವಾಗಿ ಒಬ್ಬರನ್ನೊಬ್ಬರು ಪ್ರೀತಿಸ ತೊಡಗಿದ್ದರು.

ಶಾರಿ ಬೆಳಗಾಗಬೇಕಾದರೆ ಎದ್ದು ಅವರ ದರ್ಶನಕ್ಕಾಗಿ ಹೊರಗೋಡಿ ಬರುವಳು; ಆಗಲೇ ಎದ್ದು ತನಗಾಗಿ ಕಾಯುತ್ತಿದ್ದವರನ್ನು ಕಂಡು ಮುಗುಳು ನಗುವಳು. ಕಣ್ಣ ನೋಟದ ಮೂಲಕ ಏನೇನೋ ಮಾತನಾಡುವ ಪ್ರಯತ್ನ ಮಾಡುವಳು.

ರಾಮರಾಯರು ಅದಕ್ಕೆ ಪ್ರತಿಯಾಗಿ ಒಲವಿನ ನೋಟವನ್ನು ಆವಳೆಡೆಗೆ ಬೀರುವರು, ನಗುವರು. ಅವರಿಬ್ಬರ ಮುಗುಳು ನಗು ಮೂಕ ನೋಟಗಳೇ ಇಬ್ಬರ ಹೃದಯಗಳನ್ನೂ ಪ್ರೇಮಪಾಶದಲ್ಲಿ ಬಂಧಿಸಿದ್ದುವು. ಶಾರಿಗೆ ಪ್ರತಿ ಸಲವೂ ಅವರಿದ್ದಲ್ಲಿ ಓಡಿಬರುವ ಮನಸ್ಸಾಗುವುದು. ಆದರೆ ಹಾಗೆ ಬಂದರೆ ಶಾಂತಿಗೆ ತಿಳಿಯದಿರುವುದಿಲ್ಲ ಆಮೇಲೆ ಎಲ್ಲರಿಗೂ ತಿಳಿಯುವುದು. ಆದಕ್ಕೆ ಅವಳು ಸಿದ್ಧಳಿರಲಿಲ್ಲ. ರಾಮರಾಯರೂ ಅಷ್ಟೇ. ಸಂಕೋಚ ಹಾಗೂ ಅಪವಾದದ ಭಯ ಅವರನ್ನು ಹಿಡಿದು ನಿಲ್ಲಿಸಿತ್ತು.

ಇಷ್ಟಾದರೂ ಶಾಂತಿಗೆ ಈ ವಿಚಾರ ಏನೂ ತಿಳಿಯದು. ತನ್ನ ಗೆಳತಿ ಯಲ್ಲಿ ಏನೋ ಒಂದು ರೀತಿಯ ಬದಲಾವಣೆಯಾದಂತೆ ಕಂಡುಬಂದರೂ ಅದ ನ್ನವಳು ಆಳವಾಗಿ ಗಮನಿಸಿರಲಿಲ್ಲ.

" ಏನೇ ಶಾರಿ ವಿಚಾರ ಮಾಡುತ್ತಿರುವೆ ? " ಎಂದರೆ ಸಾಕು ; ಅವಳು ಓಡಿ ಬಂದು ಶಾಂತಿಯನ್ನು ತಬ್ಬಿಕೊಳ್ಳುತ್ತಿದ್ದಳು. ತನ್ನ ಹೃದಯೇಶ್ವರರ ತಂಗಿಯಲ್ಲವೇ ?

" ಏನೂ ಇಲ್ಲ ಶಾಂತೂ, ನೀನೇನು ಇನ್ನೂ ಬಂದಿಲ್ಲವೆಂದು ಯೋಚಿಸು ತ್ತಿದ್ದೆ. "

" ಅಬ್ಬಾ ! ಎಷ್ಟು ಸುಳ್ಳು ಹೇಳುವುದನ್ನು ಕಲಿತಿರುವೆಯಮ್ಮಾ. ಸುಳ್ಳು ಹೇಳಿದರೆ ಇಗೋ ನನ್ನ ಕೊರಳಾಣೆ. " ಶಾರಿ ಗಾಬರಿಯಾಗಿ ಅವಳ ಬಾಯಿ ಯನ್ನು ಮುಚ್ಚಿಬಿಡುತ್ತಿದ್ದಳು.

" ಹಾಗೆ ಆಣೆ ಹಾಕಬೇಡ ಶಾಂತೂ, ಬಿಡ್ತು ಅನ್ನು "

ಅವಳ ದನಿಯಲ್ಲಡಗಿದ್ದ ಕಾತರವನ್ನು ಕಂಡು ಶಾಂತಿಗೆ ಆಶ್ಚರ್ಯವೆನಿಸು ತ್ತಿದ್ದರೂ ತನ್ನ ನೆಚ್ಚಿನ ಗೆಳತಿಯ ವಿಚಾರದಲ್ಲಿ ಅವಳಿಗೆ ಯಾವ ಸಂಶಯವೂ ಉಂಟಾಗಲಿಲ್ಲ. ಹಾಗೆ ಗೆಳತಿಯಲ್ಲಿ ಅನುಮಾನ ತಳೆಯುವುದು ಸರಿಯಲ್ಲ ವೆಂದೇ ಅವಳು ತಿಳಿದಿದ್ದಳು. ಆಕೆಯ ಮನಸ್ಸು ಇನ್ನೂ ಮಗುವಿನ ಮನಸ್ಸಿ ನಂತೆಯೇ ಇತ್ತು.

ಆದರೆ ಶಾರದೆ ಸೋತು ಹೋಗಿದ್ದಳು. ಪ್ರೇಮದ ವಿಷಬೀಜ ಅವಳ ಹೃದಯದಲ್ಲಿ ಬಿತ್ತಲ್ಪಟ್ಟಿತ್ತು. ಮನಸ್ಸಿನ ನೆಮ್ಮದಿಯನ್ನು ಹಾಳುಗೆಡಹು ವಂಥಾ ಭಾವನೆ ವಿಷವಲ್ಲದೆ ಅಮೃತವಾಗಬಲ್ಲುದೇ ? ಆದರೂ ಆಕೆ ಮೋಸ ಮಾಡಿದಳು. ತನ್ನ ಜೀವದ ಗೆಳತಿಯೊಡನೆ ಅದನ್ನು ಹೇಳಲಿಲ್ಲ. ತನ್ನ ಹೃದ ಯದ ನೋವನ್ನು ಅವಳೆದುರು ತೋಡಿಕೊಳ್ಳಲಿಲ್ಲ. ಹಾಗೆ ಮಾಡಿದ್ದರೆ ಅವ ಳಿಗೆ ಸ್ವಲ್ಪವಾದರೂ ನೆಮ್ಮದಿ ದೊರೆಯುತ್ತಿತ್ತು. ತನ್ನ ನಾಚಿಕೆ ಸಂಕೋಚಗಳ ದೆಸೆಯಿಂದ, ದೊರೆಯಬಹುದಾದ ಅಲ್ಪ ಸ್ವಲ್ಪ ನೆಮ್ಮದಿಯನ್ನು ಅವಳು ಕಳೆದು ಕೊಳ್ಳಬೇಕಾಯಿತು.

ಶಾಂತಿಯೇ ಈಗ ಮನೆಯೊಡತಿ. ತಾಯಿ ತೀರಿದ ಮೇಲೆ ಮನೆಯ ಜವಾಬ್ದಾರಿ ಎಲ್ಲವೂ ಅವಳ ತಲೆಯ ಮೇಲೆಯೇ ಬಿದ್ದಿತ್ತು. ಅಣ್ಣನ ಮೇಲೆ ಅವಳಿಗೆ ಅಪಾರ ಪ್ರೀತಿ. ಅವರಿಗಾಗಿ ಎಂಥಾ ತ್ಯಾಗವನ್ನು ಮಾಡಲೂ ಆಕೆ ಸಿದ್ಧ. ದಿನಗಳೆದಂತೆ ಅಣ್ಣನ ಮುಖದ ಮೇಲೆ ಮೂಡುತ್ತಿರುವ ಔದಾಸೀನ್ಯದ ಕಳೆಯನ್ನು ಕಂಡಾಗಲೆಲ್ಲ ಅವಳಿಗೆ ಏನೋ ಒಂದು ರೀತಿಯ ಬೇಸರವಾಗು

ವುದು. ಅವರೊಡನೆ ಅದರ ಕಾರಣವನ್ನು ಕೇಳಬೇಕೆಂದು ಎಷ್ಟೋ ತಡವೆ ಹವಣಿಸಿದ್ದಳು; ಆದರೆ ಕೇಳಿರಲಿಲ್ಲ. "ನೀನೇ ನನ್ನ ಚಿಂತೆಯ ಕಾರಣ ಶಾಂತೂ" ಎಂದುಬಿಟ್ಟರೆ? ಆ ಭಯದಿಂದಲೇ ಅವಳು ಬಾಯಿ ಮುಚ್ಚಿಕೊಂಡು ಸುಮ್ಮನಿದ್ದಳು. ಈ ಕಡೆಯಿಂದಲೂ ಆ ವಿಷಯ ಅವಳಿಗೆ ಗೊತ್ತಾಗಲಿಲ್ಲ.

ದಿನಗಳು ಒಂದೇ ಗತಿಯಲ್ಲಿ ಕಳೆಯುತ್ತಿದ್ದುವು. ಒಂದೆರಡು ವರುಷಗಳೂ ಕಳೆದುವು. ಆದರೆ ಯಾವ ವಿಶೇಷ ಘಟನೆಗಳೂ ನಡೆಯಲಿಲ್ಲ. ರಾಮರಾಯರ ಹಾಗೂ ಶಾರದೆಯ ದೃಷ್ಟಿಮಿಲನ ಮಾತ್ರ ಒಂದೇ ರೀತಿಯಲ್ಲಿ ಸಾಗಿತ್ತು. ಇಬ್ಬರೂ ಭಾವನಾ ಸಾಮ್ರಾಜ್ಯದ ರಾಜ-ರಾಣಿಯರಾಗಲು ಹವಣಿಸಿದ್ದರು. ರಾಮರಾಯರ ಪಾಲಿಗೆ ಹೇಗೆಯೋ ಇನ್ನೂ ಒಂದೆರಡು ವರುಷ ಇರುವುದಕ್ಕೆ ಸಾಧ್ಯವಾದರೂ ಶಾರದೆಯ ಪಾಲಿಗೆ ಅದು ಸಾಧ್ಯವಿರಲಿಲ್ಲ. ಅವಳು ಹೆಣ್ಣು, ಆಗಲೇ ಮದುವೆಗೆ ಬೆಳೆದು ನಿಂತಿದ್ದಳು. ಅವಳ ತಂದೆ ಅದರ ಸಿದ್ಧತೆಯನ್ನು ಮಾಡಿಬಿಟ್ಟಿದ್ದರು.

ಅದೊಂದು ದಿನ ಯಾರೋ ಬಂದರು, ಶ್ರೀಮಂತರಂತೆ. ಮಾಸ್ತರರ ಮನೆಯಲ್ಲಿ ಅವರ ಊಟ-ಉಪಚಾರವಾಯಿತು. ಶಾರದೆಯನ್ನು ಸಿಂಗರಿಸಿಕೊಂಡು ಬಂದವರೆದುರು ಮೆರವಣಿಗೆ ಮಾಡಿಸಿದರು. ಶಾರದೆಯನ್ನು ನೋಡಲು ಬಂದವರು ಅವರು. ಹುಡುಗ ಸುಂದರವಾಗಿಯೇ ಇದ್ದ. ಮೇಲಾಗಿ ಶ್ರೀಮಂತ. ಶಾರದೆಯನ್ನು ಮೆಚ್ಚದಿರುವುದು ಯಾವ ತರುಣನಿಂದಲೂ ಸಾಧ್ಯವಿರಲಿಲ್ಲ. ಹಾಗೆಯೇ ಆಯಿತು; ಹುಡುಗ ಹುಡುಗಿಯನ್ನು ಒಪ್ಪಿದ.

ಆದರೆ ಹುಡುಗಿ? ಅದೇನೋ ಯಾರಿಗೂ ತಿಳಿಯದು. ಯಜ್ಞಕ್ಕೆ ಬಲಿಪಶುವಿನ ಒಪ್ಪಿಗೆ ದೊರೆಯುವುದೇ? ಅದನ್ನು ಕೇಳುವವರೂ ಇಲ್ಲ. ಅಂತೂ ಶಾರದೆಯ ಮದುವೆ ನಿಶ್ಚಯವಾಯಿತು; ಸುದ್ದಿ ಕೇಳಿ ಅವಳು ಬೆಚ್ಚಿಬಿದ್ದಳು. ಆದರೆ ತಂದೆ-ತಾಯಿಯವರನ್ನು ವಿರೋಧಿಸುವ ಧೈರ್ಯ ಅವಳಲ್ಲಿದ್ದಿಲ್ಲ.

"ಅಣ್ಣಾ, ಶಾರದೆಯ ಮದುವೆ ನಿಶ್ಚಯವಾಯಿತು" ಎಂದಳು ಶಾಂತಿ.

ರಾಮರಾಯರಿಗೆ ತಲೆಯ ಮೇಲೆ ಸಿಡಿಲು ಬಡಿದಂತಾಯಿತು. ಹೇಗೋ ಸಾವರಿಸಿಕೊಂಡರು. ತಂಗಿಯ ಎದುರು ತನ್ನ ದೌರ್ಬಲ್ಯವನ್ನು ಪ್ರಕಟಗೊಳಿಸುವ ಇಚ್ಛೆ ಅವರಿಗಿದ್ದಿಲ್ಲ. ನೆಟ್ಟಗೆ ತನ್ನ ಕೋಣೆಗೆ ಹೋಗಿ ಬಾಗಿಲು

ಹಾಕಿಕೊಂಡರು. ತಂಗಿಯ ಮಾತನ್ನು ಕೇಳಿ ಜಗತ್ತೇ ತಮ್ಮ ಪಾಲಿಗೆ ಶೂನ್ಯವಾದಂತೆ ಅವರಿಗನಿಸಿತು. ತನಗರಿಯದಂತೆ ಕಣ್ಣುಗಳಿಂದ ಒಂದೇ ಸಮನೆ ನೀರು ಹರಿಯುತ್ತಿತ್ತು; ಎಷ್ಟೋ ಹೊತ್ತು ಕಳೆದು ಕಣ್ಣೊರಸಿಕೊಂಡು ಹೊರಗೆ ಬಂದು ಮುಖ ತೊಳೆದುಕೊಂಡರು; ತನಗೇನೂ ಆಗಿಲ್ಲವೆಂಬಂತೆ ತೋರಿಸಿಕೊಂಡರು.

ಇನ್ನು ಆ ಮನೆಯಲ್ಲಿರುವುದು ಅವರಿಂದ ಸಾಧ್ಯವಿರಲಿಲ್ಲ; ಕಣ್ಣೆದುರ ಲ್ಲಿಯೇ ತನ್ನ ಮನೋಮಂದಿರ ಸುಟ್ಟು ಬೂದಿಯಾಗುವುದನ್ನು ನೋಡಲು ಅವರಿಂದ ಸಾಧ್ಯವಿರಲಿಲ್ಲ; ಜನರಿಲ್ಲದ ಊರಿಗೆ ಹೋಗುವ ನಿರ್ಧಾರ ಮಾಡಿದರು.

ಮತ್ತೂ ಹಲಕೆಲವು ದಿನಗಳು ಕಳೆದುವು. ಶಾರದೆ ಎಂದಿನಂತೆ ಅವರ ಕಣ್ಣೆದುರು ಬೀಳುತ್ತಲೇ ಇರಲಿಲ್ಲ; ಬಿದ್ದರೂ ಮೊದಲಿನ ದೃಷ್ಟಿವಿನಿಮಯ ವಿಲ್ಲ; ತಲೆತಗ್ಗಿಸಿ ಒಳಕ್ಕೆ ನಡೆದುಬಿಡುತ್ತಿದ್ದಳು. ' ಅವಳಿಗಿಷ್ಟವಿಲ್ಲದ ಮದುವೆ ಅದು ' ಎಂದು ತಿಳಿದುಕೊಳ್ಳಲು ಅವರಿಗೆ ಕಷ್ಟವಾಗಲಿಲ್ಲ; ಆದರೂ ಏನೂ ಮಾಡುವಂತಿಲ್ಲ.

ಶಾಂತಿಗೆ ಇದೊಂದೂ ತಿಳಿಯದು ; ಗೆಳತಿಯ ಮದುವೆಯ ಸುದ್ದಿಯನ್ನು ಕೇಳಿ ಅವಳಿಗೆ ಸಂತೋಷವಾಗುತ್ತಿತ್ತು. ದಿನವೂ ಅವಳಿಗೆ ಏನಾರೊಂದು ಹೇಳಿ ಗೇಲಿಮಾಡುತ್ತಿದ್ದಳು.

" ಏನೇ ಶಾರಿ, ಒಳ್ಳೆಯ ಗಂಡ ಸಿಕ್ಕಿದ; ಇನ್ನು ನಮ್ಮಂಥ ಬಡವರ ನೆನಪು ಸಹ ನಿನಗುಳಿಯಲಾರದು " ಎಂದರೆ ಸಾಕು. ಅವಳು ಓಡಿ ಬಂದು ಗೆಳತಿಯನ್ನಪ್ಪಿಕೊಂಡು ಅತ್ತುಬಿಡುತ್ತಿದ್ದಳು.

" ಶಾಂತೂ, ನಾನು ನಿನ್ನ ಗೆಳತಿಯಲ್ಲವೇ ? "

" ಏಕೆ ಏನಾಯಿತು ? "

" ನನ್ನದೊಂದು ಮಾತು ನಡೆಸಿಕೊಡುವಿಯಾ ? "

" ಏನೇ ಅದು ? "

" ಈ ಮದುವೆಯ ಮಾತನ್ನೆತ್ತಿ ನನ್ನನ್ನು ನೋಯಿಸಬೇಡ ಶಾಂತೂ ! "

" ಏಕೆ, ಈ ಮದುವೆ ನಿನಗಿಷ್ಟವಿಲ್ಲವೇ ? "

" ಯಜ್ಞಕ್ಕೆ ಬಲಿಪಶುವಿನ ಒಪ್ಪಿಗೆ ಅಗತ್ಯವೇನು ಶಾಂತೂ? ಆ ವಿಚಾರ

ಕೇಳಬೇಡ, ಇದು ನನ್ನ ಕೊನೆಯ ಬೇಡಿಕೆ." ಅವಳ ಅಳುವನ್ನು ಕಂಡು ಶಾಂತಿಗೂ ದುಃಖವಾಗದಿರುತ್ತಿರಲಿಲ್ಲ. ಆದರೆ ಅವಳದನ್ನು ಸ್ವಾಭಾವಿಕವೆಂದೇ ತಿಳಿದಳು. ಮುಂದೆ ಆ ವಿಚಾರವನ್ನೆತ್ತಿ ಅವಳನ್ನು ನೋಯಿಸುವ ಗೋಜಿಗೆ ಹೋಗಲಿಲ್ಲ.

ಅವಳ ಮದುವೆಯ ಆಮಂತ್ರಣ ಪತ್ರಿಕೆ ರಾಮರಾಯರ ಕೈಸೇರಿತು, ನೋಡಿದರು; ಇನ್ನೆಂಟು ದಿನಗಳಲ್ಲಿ ಮದುವೆ. ಅವಳ ಮದುವೆಯಾಗುವು ದನ್ನು ನೋಡುವುದು ಅವರಿಂದ ಸಾಧ್ಯವಿಲ್ಲ. ಹೇಗಾದರೂ ದೂರ, ಬಹುದೂರದ ಊರಿಗೆ ಹೋಗಿಬಿಡಬೇಕು; ಅವಸರವಾಗಿ ಪ್ರಯತ್ನ ಮಾಡತೊಡಗಿ ದರು. ಅವರ ಪುಣ್ಯಕ್ಕೆ ಸರಿಯಾಗಿ ಪಂಜದ ಡಾಕ್ಟರರಿಗೆ ಒಬ್ಬ ಕಂಪೌಂಡರರ ಅಗತ್ಯವಿತ್ತು.

ಹೊರಡುವ ಮೊದಲ ದಿನದ ವರೆಗೂ ಸುದ್ದಿಯನ್ನು ಯಾರಿಗೂ ಹೇಳ ಲಿಲ್ಲ. ಅವಳ ಮದುವೆಯ ಮೊದಲ ದಿನವೇ ತಮ್ಮನನ್ನು ಕರೆದು ಹೊರಡುವ ಸಿದ್ಧತೆ ಮಾಡೆಂದು ಅಪ್ಪಣೆ ಮಾಡಿದ್ದರು.

ಶಾರದೆ ಹಾಗೂ ರಾಮರಾಯರನ್ನು ಬಿಟ್ಟರೆ ಈ ಪ್ರಯಾಣದ ಉದ್ದೇಶ ಯಾರಿಗೂ ತಿಳಿದಿರಲಿಲ್ಲ.

೯

ರಾಮರಾಯರು ಪಂಜದ ತಮ್ಮ ಮನೆಯಲ್ಲಿ ಕುಳಿತು ವಿಚಾರ ಮಾಡು ತ್ತಲೇ ಇದ್ದರು. ಮಧ್ಯ ರಾತ್ರೆ ಆಗಲೇ ಕಳೆದುಹೋಗಿತ್ತು. ತನ್ನ ಗತ ಜೀವನದ ಘಟನೆಗಳು ಕಣ್ಣ ಮುಂದೆ ಸುಳಿದಂತೆಲ್ಲ ಕಣ್ಣುಗಳಿಂದ ಒಂದೇ ಸವನೆ ನೀರು ಸುರಿಯುತ್ತಿತ್ತು.

"ಇನ್ನು ಅದನ್ನೆಲ್ಲ ಯೋಚಿಸಿ ಫಲವೇನು? ಶಾರದೆ ನನ್ನ ಪಾಲಿಗೆ ಇನ್ನು ದೊರೆಯುವಂತಿಲ್ಲ. ಅವಳಿಂದು ಗೃಹಿಣಿ. ಅವಳಂತಹ ಹೆಂಡತಿಯನ್ನು ಪಡೆದ ಅವಳ ಪತಿ ನಿಜವಾಗಿಯೂ ಭಾಗ್ಯಶಾಲಿ."

"ಅವಳ ಮದುವೆಯಾಗಿ ಆಗಲೇ ಎಷ್ಟೋ ಸಮಯ ಕಳೆದುಹೋಯಿತು.

ಆದರೆ ಶಾಂತೂ ಇನ್ನೂ ಅವಿವಾಹಿತೆ. ಇಷ್ಟರಲ್ಲಿಯೇ ಅವಳ ಮದುವೆಯಾಗ ಬೇಕಿತ್ತು. ನಾನು ನನ್ನ ಕರ್ತವ್ಯವನ್ನು ಪೂರೈಸಲಿಲ್ಲ. ಇನ್ನು ಉದಾಸೀನ ಮಾಡಲಾಗದು. ಆದಷ್ಟು ಬೇಗನೆ ಅವಳ ಮದುವೆಯಾಗಬೇಕು."

ನಿದ್ದೆ ಬಂದು ಕಣ್ಣುಗಳು ತೂಗುತ್ತಿದ್ದುವು. ಮನಸ್ಸು ತುಂಬಾ ಅಧೀರ ವಾಗಿತ್ತು. ಹೇಗೊ ಬಹು ಪ್ರಯಾಸದಿಂದ ಹಾಸಿಗೆಯ ಮೇಲೆ ಬಿದ್ದುಕೊಂಡರು. ಎಷ್ಟೋ ಹೊತ್ತಿನ ಮೇಲೆ ನಿದ್ದೆ ಬಂದಂತಾಯಿತು. ರಾತ್ರಿ ತುಂಬಾ ಹೊತ್ತಿನ ವರೆಗೆ ಎಚ್ಚರವಾಗಿಯೇ ಇದ್ದುದರಿಂದ ಬೆಳಿಗ್ಗೆ ಎಂಟು ಗಂಟೆಯಾದರೂ ಅವ ರಿಗೆ ಎಚ್ಚರವಾಗಲಿಲ್ಲ.

ಶಾಂತಿ ಆಗಲೇ ಎದ್ದು ಬೆಳಗಿನ ಗಂಜಿಯೂಟದ ಸಿದ್ಧತೆಯನ್ನೆಲ್ಲ ಮಾಡಿ ಮುಗಿಸಿದ್ದಳು ; ಆದರೂ ಅಣ್ಣ ಇನ್ನೂ ಎದ್ದಿರಲಿಲ್ಲ. ದಿನವೂ ನಸುಕಿನಲ್ಲೇ ಎದ್ದು ಬಿಡುವವರು ಇಂದೇಕೆ ಎದ್ದಿಲ್ಲ? ನೆಟ್ಟಗೆ ಅಣ್ಣನ ಕೋಣೆಗೆ ಹೋದಳು. ಅವರು ಇನ್ನೂ ಮಲಗಿದಲ್ಲಿಯೇ ಇದ್ದರು. ರಾತ್ರೆಯಿಡೀ ಅತ್ತಿರುವರೆಂದು ತಿಳಿಯುವ ಹಾಗಿತ್ತು.

ಶಾಂತಿಯ ಕರುಳನ್ನು ಯಾರೋ ಹಿಸುಕಿದಂತಾಯಿತು. ನಿಂತಲ್ಲಿಯೇ ಕಣ್ಣುಗಳು ಹನಿಗೂಡಿದುವು. ಹಿಂದಿನ ರಾತ್ರೆ ತಾನು ಅಣ್ಣನಿಗೆ ಆಡಿದ ಮಾತು ನೆನಪಿಗೆ ಬಂದಿತು. ಅದನ್ನು ಕೇಳಿ ಅವರಿಗಿಷ್ಟು ನೋವಾಗಿರಬಹುದೇ? ಅವರನ್ನು ನೋಯಿಸುವ ಉದ್ದೇಶದಿಂದ ಅವಳದನ್ನು ಆಡಿರಲಿಲ್ಲ.

ಮಧ್ಯಾಹ್ನ ಊಟ ಮಾಡಿರಲಿಲ್ಲವೇಕೆ? ಎಂದು ಗದರಿಸಿದ್ದಳಷ್ಟೆ. ಆದರೆ ಅವರದನ್ನು ವಿಪರೀತವಾಗಿ ಭಾವಿಸಿರಬೇಕು. ಅದಕ್ಕಾಗಿ ಇಷ್ಟು ಅಳಬೇಕೆ? ತುಂಬಾ ಹೊತ್ತಿನ ವರೆಗೆ ಎಚ್ಚತ್ತಿರಬೇಕು ; ಹಾಗಾಗಿ ಬೆಳಗಿನ ಜಾವಕ್ಕೆ ಈ ನಿದ್ರೆ.

ಅವಳಿಂದ ಸುಮ್ಮನಿರಲಾಗಲಿಲ್ಲ. ಅಣ್ಣನ ಸಮೀಪಕ್ಕೆ ಹೋಗಿ ತಟ್ಟಿ ಎಬ್ಬಿಸಿದಳು. "ಅಣ್ಣಾ, ಅಣ್ಣಾ, ಏಳುವುದಿಲ್ಲವೇ? ಆಗಲೇ ಗಂಟೆ ಎಂಟಾಯಿತು."

ಅವರು ಗಡಿಬಿಡಿಯಿಂದ ಎದ್ದು ಕುಳಿತು ಕಣ್ಣುಜ್ಜಿಕೊಂಡರು. ಕಣ್ಣು ಗಳು ಕೆಂಪಗೆ ಊದಿಕೊಂಡಿದ್ದುವು. ಶಾಂತಿಗೆ ಅದನ್ನು ಕಂಡು ಸಹಿಸಲಾಗ ಲಿಲ್ಲ. ಅವರ ತೀರ ಸಮೀಪಕ್ಕೆ ಹೋಗಿ ನಿಂತಳು. ತನ್ನೆರಡೂ ಕೈಗಳನ್ನು

ಅವರ ಕೊರಳ ಸುತ್ತು ಬಳಸಿದಳು.

" ಅಣ್ಣಾ. "

ಅವರು ಮಾತನಾಡದೆ ತಂಗಿಯ ಮುಖವನ್ನು ನೋಡಿದರು. ಅವಳ ಕಣ್ಣಲ್ಲಿ ಮೂಡಿದ ಕಂಬನಿ ಅವರ ಹೃದಯವನ್ನು ಕಲಕಿಬಿಟ್ಟಿತು.

" ನನ್ನ ಮೇಲೆ ಸಿಟ್ಟು ಬಂತೇ ಅಣ್ಣ ? "

" ಹಾಗೇಕೆ ಹೇಳುವಿ ಶಾಂತೂ ? "

" ನಿಮ್ಮ ಕಣ್ಣುಗಳೇ ಅದನ್ನು ಹೇಳುತ್ತಿವೆ ಅಣ್ಣ. ನಿಮ್ಮ ಚಿಕ್ಕ ತಂಗಿ ಏನಾದರೂ ತಿಳಿಯದೆ ಮಾತನಾಡಿದರೆ ಕೋಪಿಸಿಕೊಳ್ಳಬೇಕೆ ? ನಾನು ಬದುಕಿರುವುದು ನಿಮಗಿಷ್ಟವಿಲ್ಲವೇ ? ಮತ್ತೆ ಹೀಗೇಕೆ ನನ್ನನ್ನು ನೋಯಿಸು ತ್ತಿರುವಿರಿ ? "

ಅವಳಿಂದ ಅಳು ತಡೆಯಲಾಗಲಿಲ್ಲ. ಅಣ್ಣನ ಉತ್ತರಕ್ಕಾಗಿ ಕಾಯದೆ ಅಲ್ಲಿಂದ ಹೋಗಿಬಿಟ್ಟಳು. ತಂಗಿಯ ಮಾತು ಬಾಣದಂತೆ ಅವರೆದೆಯನ್ನು ಇರಿಯಿತು. ಅವರು ಮಾತನಾಡಲಿಲ್ಲ; ಮಾತನಾಡಲು ಸಾಧ್ಯವೂ ಇರ ಲಿಲ್ಲ. ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ ಗಂಜಿಯೂಟ ಮಾಡಿ ಆಸ್ಪತ್ರೆಗೆ ಹೊರಟರು.

" ಅಣ್ಣ, ಇನ್ನು ಅಲ್ಲಿಗೆ ಊಟ ಕಳುಹಿಸುವುದಿಲ್ಲ. "

" ಏಕೆ ಶಾಂತೂ ? "

" ಅದು ನನ್ನಿಚ್ಛೆ. ನೀವು ಇಲ್ಲಿಯೇ ಬಂದು ಊಟ ಮಾಡಬೇಕು ; ನೀವು ಬಂದು ಊಟ ಮಾಡುವ ವರೆಗೆ ನಾನು ಉಪವಾಸವೇ ಇರುವೆ. "

ಅವರು ಮಾತನಾಡದೆ ಹೊರಟು ಹೋದರು. ತಂಗಿಯ ಮಾತನ್ನು ವಿರೋಧಿಸಲು ಅವರಿಂದಾಗಲಿಲ್ಲ. ಅಣ್ಣ ಹೊರಟು ಹೋದೊಡನೆ ಶಾಂತಿಯ ವಿಚಾರಲಹರಿ ಬೇರೆಡೆಗೆ ತಿರುಗಿತು. ಗಂಟೆ ಆಗಲೇ ಒಂಭತ್ತಾಗಿತ್ತು. ದಿನವೂ ಡಾಕ್ಟರರು ಬರುವ ಹೊತ್ತು. ಇಂದೂ ಬರುವರೇನೊ ಎಂದೆನಿಸಿತು. ಛೇ, ಬರಲಿಕ್ಕಿಲ್ಲ ; ಏಕೆ ಬರಬೇಕು ? ನನ್ನ ಕಾಯಿಲೆಯಂತೂ ಆಗಲೇ ಗುಣ ವಾಗಿದೆ.

ಇಲ್ಲ, ಬಂದೇ ಬರುವರು. ನಿನ್ನೆ ಹೋಗುವಾಗ ಅವರ ಕಣ್ಣುಗಳು ನನ್ನನ್ನೇ ನೋಡುತ್ತಿದ್ದುವು ; ಎಂತಹ ಮಧುರ ನೋಟ ! ಅದನ್ನೆಂದೂ

ಮರೆಯಲಾರೆ. ಅವರು ಬಂದೇ ಬರುವರು; ಆದರೆ ನಿತ್ಯದಂತೆ ನಾನು ಮಲಗಿರಲು ಸಾಧ್ಯವಿಲ್ಲ; ಅವರ ಕೈ ನನ್ನ ಹಣೆಯನ್ನು ಸ್ಪರ್ಶಿಸಲಿಕ್ಕೂ ಸಾಧ್ಯ ವಿಲ್ಲ. ಅವರ ಸ್ವಾಗತಕ್ಕಾಗಿ ನಾನು ಮಲಗಿಕೊಂಡೇ ಇದ್ದರೆ....

ಅವಳ ಮುಖ ನಾಚಿಕೆಯಿಂದ ಕೆಂಪೇರಿತು; ಹೃದಯವನ್ನು ಅರಳಿಸುವ ಮಧುರ ಭಾವನೆಗಳು ತನ್ನನ್ನೇ ಮರೆಯುವಂತೆ ಮಾಡಿದ್ದುವು. ಗೋಪು ಆಗಲೇ ಪೇಟೆಯ ಕಡೆಗೆ ಹೋಗಿದ್ದ. ಅವನು ಹಿಂತಿರುಗುವುದರೊಳಗೆ ಅವರು ಬಂದು ಹೋಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಬೇರೆಲ್ಲವನ್ನೂ ಮರೆತು— ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದಳು ಶಾಂತಿ.

ಬೂಟ್ಸಿನ ಸದ್ದು, ಅವಳ ಕಿವಿಗಳು ನೆಟ್ಟಗಾದುವು; ಅದು ಅವರ ಬೂಟ್ಸಿನ ಸದ್ದು. ಹೌದು ಅವರದೇ. ಸಂತೋಷದಿಂದ ಕುಣಿಯುವಂತಾಯಿತು. ಹುಚ್ಚಳಂತಾದಳು; ಒಳಕೋಣೆಗೆ ಓಡಿದಳು; ಅವರೆದುರಿಗೆ ಮುಖವೆತ್ತಿ ನಿಲ್ಲುವ ಧೈರ್ಯವಿರಲಿಲ್ಲ ಆಕೆಗೆ. ಆದರೂ ಹೃದಯ ಅರಳಿತ್ತು; ಅವರನ್ನು ಸ್ವಾಗತಿಸಲು ತವಕಗೊಂಡಿತ್ತು; ತೆರೆದ ಬಾಗಿಲೊಳಗಿಂದ ಹಾದು ತನ್ನೆಡೆಗೆ ಬರುತ್ತಿರುವ ಹೆಜ್ಜೆಯ ಸದ್ದು ಅವಳನ್ನು ಎಚ್ಚರಿಸಿತ್ತು.

ಪ್ರಯತ್ನಪಟ್ಟು ತಲೆಯನ್ನು ಮೇಲಕ್ಕೆ ಎತ್ತಿದಳು. ನಾಚಿಕೆಯ ತೆರೆ ಹರಿದು ಬಂದು ಅವಳ ಅಂಗಾಂಗಗಳನ್ನು ವ್ಯಾಪಿಸಿದಂತೆ ಭಾವನೆಯಾಯಿತು. ಆದರೂ ಇಲ್ಲದ ಎದೆಗಾರಿಕೆ ಅವಳಲ್ಲಿ ಹೊಸ ಚೈತನ್ಯವನ್ನು ತುಂಬಿತ್ತು.

ನೋಡಿದಳು, ನೋಡುತ್ತಾ ನಿಂತಳು; ಎದುರಿಗೆ ಅವರು ನಿಂತಿದ್ದರು. ಮಧುರವಾಗಿ ಅವರು ನಗುತ್ತಿದ್ದರು. ತನಗಾಗಿಯೇ ಆ ನಗು; ಅದು ಅವ ಳಿಗೆ ಚೆನ್ನಾಗಿ ಗೊತ್ತು. ಆದರೆ ಅಷ್ಟೇ ಮಧುರವಾಗಿ ಅವರನ್ನು ಕಂಡು ನಗುವುದು ಅವಳ ಪಾಲಿಗೆ ಸಾಧ್ಯವಾಗಲಿಲ್ಲ.

ಅದು ಸಾಧ್ಯವಾಗುತ್ತಿದ್ದರೆ! ಎಂತಹ ಸುಖಮಯವಾದ ಕಲ್ಪನೆ. ಮುಖದ ಮೇಲಿನ ರಂಗು ಇನ್ನೂ ಮಾಸಿರಲಿಲ್ಲ; ಅಪರಿಚಿತರಿಗಾದರೂ ಅವಳ ಹೃದಯದ ಭಾವನೆಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುವಂತಿತ್ತು ಮುಖಭಾವ. ಆದರೂ ಡಾಕ್ಟರರ ಹೆಜ್ಜೆ ಮುಂದುವರಿಯಲಿಲ್ಲ. ಮಾನ ವಂತರ ಹೆಣ್ಣಿನ ಬಳಿ ಯಾವ ರೀತಿಯಲ್ಲಿ ವರ್ತಿಸಬೇಕೆನ್ನುವುದು ಅರಿಯ ದಷ್ಟು ಅಬೋಧರು ಅವರಾಗಿರಲಿಲ್ಲ. ತನ್ನ ವರ್ತನೆ ಅವಳು ಸಹಿಸದೆ ಹೋದರೆ,

ಆದರಿಂದ ಅವಳ ಮನಸ್ಸು ಮುದುಡಿಕೊಂಡರೆ, ಇಂದಿನ ಈ ನೋಟವು ಎಂದಿಗೂ ತನ್ನ ಪಾಲಿಗೆ ಇಲ್ಲದಂತಾಗುವುದೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು. ಶಾಂತಿಯ ಹೃದಯವನ್ನರಿಯದೆ ಹೋದರೂ, ಅವಳ ಸ್ವಭಾವವನ್ನವರು ಅರಿತಿದ್ದರು.

ಮೂಕ ನೋಟಗಳ ವಿತರಣೆಯಲ್ಲೇ ಎಷ್ಟೋ ಹೊತ್ತು ಕಳೆಯಿತು. ಇಬ್ಬರಿಗೂ ಮಾತನಾಡಬೇಕೆಂದು ಆತುರ; ಶಾಂತಿಯನ್ನು ನಾಚಿಕೆ ತಡೆದಿದ್ದರೆ, ಡಾಕ್ಟರರನ್ನು ಸಂಕೋಚ ಬಿಗಿದು ಕಟ್ಟಿತ್ತು. ಏನೆಂದು ಮಾತನಾಡುವುದು?, ಜ್ವರ ಬಿಟ್ಟಿತೇ ಎಂದು ಕೇಳಲೇ? ಅದು ಬಿಟ್ಟು ಆಗಲೇ ಎರಡು ದಿನಗಳು ಕಳೆದು ಹೋಗಿದ್ದುವು. ಮತ್ತೇನು ಕೇಳುವುದು? ಹೊಸ ಕಾಯಿಲೆ ಏನಾದರೂ ಅಂಟಿಕೊಂಡಿದೆಯೇ ಎನ್ನಲೇ? ಕಾಯಿಲೆಯೇನೋ ಅಂಟಿಕೊಂಡಿದ್ದುದು ನಿಜ. ಆದರೆ ಅದು ವೈದ್ಯರ ಚಿಕಿತ್ಸೆಗೊಳಪಡಬಹುದಾದ ದೈಹಿಕ ಕಾಯಿಲೆಯಲ್ಲ.

"ಚೆನ್ನಾಗಿದ್ದೀರಾ?" ಕೊನೆಗೆ ಮೌನವನ್ನು ಒಡೆದರು.

"ಹೂಂ" ಎಂದಳು ತಲೆತಗ್ಗಿಸಿ.

"ಹಾಗಾದರೆ ಹೋಗಲೇನು?"

ಶಾಂತಿ ಎಚ್ಚತ್ತಳು; ತುಂಬಾ ನಾಚಿಕೆಯೆನಿಸಿತು. ಮನೆಗೆ ಬಂದವರಿಗೆ ಕುಳಿತುಕೊಳ್ಳುವುದಕ್ಕಾದರೂ ಹೇಳಬೇಡವೇ? "ಕುಳಿತುಕೊಳ್ಳಿ." ಪಕ್ಕದಲ್ಲಿದ್ದ ಕುರ್ಚಿಯನ್ನು ಅವರಿದ್ದಲ್ಲಿಗೆ ಸರಿಸಿದಳು. ಅವರಿಗೆ ಅಷ್ಟೇ ಸಾಕಿತ್ತು. ಒತ್ತಾಯಿಸುವ ಅಗತ್ಯವೇನೂ ಇದ್ದಿರಲಿಲ್ಲ.

"ಟಾನಿಕ್ ಕುಡಿದಿರಾ?"

ಅವಳಿಗೆ ಅದರ ನೆನಪೇ ಇರಲಿಲ್ಲ. ಅಣ್ಣನ ಗಲಾಟೆಯಲ್ಲಿ ಅದು ಮರೆತೇ ಹೋಗಿತ್ತು. "ಇಲ್ಲ" ಎಂದಳು ಮೆಲ್ಲನೆ.

"ಏಕೆ ಕುಡಿಯಲಿಲ್ಲ?"

"ಮರೆತು ಹೋಯಿತು." ಇಷ್ಟು ಮಾತುಗಳು ಆಗುವಾಗ ಅವಳ ಸಂಕೋಚ ಸ್ವಲ್ಪಮಟ್ಟಿಗೆ ಕಡಿಮೆಯಾಗಿತ್ತು.

"ಒಳ್ಳೆಯ ನೆನಪು ನಿಮ್ಮದು! ಆಗಲೇ ಮುಖ ಬಿಳಿಚಿಕೊಂಡಿದೆ. ಮತ್ತೆ ಕಾಯಿಲೆ ಬಿದ್ದರೆ ಯಾರಿಗೆ ತೊಂದರೆ?" ಅವರು ಅವಳ ಮೋರೆ

ಯನ್ನು ಕಂಡು ಮುಗುಳು ನಗುತ್ತಿದ್ದರು.

" ನಿಮಗೆ " ಎಂದು ಹೇಳುವ ಮನಸ್ಸಾಯಿತು ಶಾಂತಿಗೆ. ಆದರೆ ಮಾತ ನಾಡಲಿಲ್ಲ ; ಅರ್ಥಪೂರ್ಣವಾಗಿ ಅವರನ್ನು ಕಂಡು ನಕ್ಕಳು.

" ಸ್ವಲ್ಪ ಕಾಫಿ ಮಾಡಲೇ ? "

ಉತ್ತರ ಕೊಡುವುದರೊಳಗಾಗಿ ಆಕೆ ಅಡುಗೆಯ ಮನೆಯತ್ತ ಸಾಗಿ ದ್ದಳು; ಅವರಿಗೆ ಕಾಫಿಯ ಅವಶ್ಯಕತೆಯಿದ್ದಿಲ್ಲ; ಅವಳೊಡನೆ ಮಾತ ನಾಡುತ್ತ ಕುಳಿತಿರುವುದಕ್ಕಿಂತ ಹೆಚ್ಚಿನ ರುಚಿ ಆ ಕಾಫಿಗಿದ್ದಿಲ್ಲ. ಒಂದೈದು ನಿಮಿಷ ಕಳೆದು ಒಂದು ಲೋಟದಲ್ಲಿ ಕಾಫಿ ಹಿಡಿದುಕೊಂಡು ಬಂದಳು.

ಅವಳು ತನ್ನ ಸಮೀಪದಲ್ಲಿ ಲೋಟವನ್ನು ಹಿಡಿದು ನಿಂತಾಗ ಡಾಕ್ಟರರ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಲೋಟದ ಜೊತೆಯಲ್ಲಿ ಅವಳ ಕೈಯನ್ನು ಹಿಡಿದುಬಿಟ್ಟರು. ಕಾಫಿ ಚೆಲ್ಲಿಹೋಯಿತು; ಅವರ ಬೆಲೆ ಬಾಳುವ ಬಟ್ಟೆಯ ಮೇಲೆಲ್ಲ ಬಿದ್ದು ಬಿಟ್ಟಿತು.

ಶಾಂತಿ ಕೈಯನ್ನು ಹಿಂದಕ್ಕೆಳೆದುಕೊಳ್ಳಲಿಲ್ಲ; ಅಪರಾಧಿಯಂತೆ ಅವ ರನ್ನೇ ನೋಡುತ್ತ ನಿಂತಳು.

" ನಿಮ್ಮ ಬಟ್ಟೆ ಹಾಳಾಗಿ ಹೋಯಿತು. "

" ಹೋದರೆ ಹೋಗಲಿ, ಒಗೆದರಾಯಿತು. " ಆ ಕಡೆಗೆ ಅವರ ಗಮನ ವಿದ್ದಂತಿರಲಿಲ್ಲ ; ಸ್ವಲ್ಪ ಹೊತ್ತು ಮೌನವಾಗಿಯೇ ಕಳೆಯಿತು.

" ಕಾಫಿ ಕುಡಿಯುವುದಿಲ್ಲವೇ ? "

ಅವರಿಗೆ ತನ್ನ ತಪ್ಪಿನ ಅರಿವಾಯಿತು. ಅವಳ ಕೈ ಬಿಟ್ಟು ಕಾಫಿ ಕುಡಿಯ ತೊಡಗಿದರು ; ಶಾಂತಿ ತುಸು ದೂರಕ್ಕೆ ಸರಿದು ನಿಂತಳು. ಮುಖದ ಮೇಲೆ ಮೃದು ಮಂದಹಾಸ ಮಿನುಗುತ್ತಿತ್ತು ; ಹಿಂದಿನ ನಾಚಿಕೆ ಸ್ವಲ್ಪವಾದರೂ ಇದ್ದಂತಿರಲಿಲ್ಲ.

" ನೀವೇ ಮಾಡಿದಿರಾ ಕಾಫಿಯನ್ನು ? "

" ಹೌದು, ಏಕೆ ಚೆನ್ನಾಗಿಲ್ಲವೇ ? "

" ಇಷ್ಟು ಚೆನ್ನಾದ ಕಾಫಿಯನ್ನು ಜೀವಮಾನದಲ್ಲೇ ನಾನು ಕುಡಿದಿಲ್ಲ." ಕಾಫಿಯೇನೋ ಚೆನ್ನಾಗಿತ್ತು. ಅವರ ಮಾತು ಮಾತ್ರ ಅತಿಶಯೋಕ್ತಿ.

ಅವರ ಹೊಗಳುವಿಕೆಯನ್ನು ಕೇಳಿ ಅವಳಿಗೆ ತುಂಬಾ ನಾಚಿಕೆ ಎನಿಸಿತು; ಆದರೆ ಮನಸ್ಸಿಗೆ ಉಲ್ಲಾಸವೆನಿಸಿತ್ತು. ಅವಳು ಮಾತನಾಡದೆ ತಲೆತಗ್ಗಿಸಿ ಕೊಂಡು ಹಾಗೆಯೇ ನಿಂತಳು; ಏನು ಮಾತನಾಡುವುದೆಂದು ತಿಳಿಯದೆ ಇಬ್ಬರೂ ಮೌನವಾಗಿಯೇ ಇದ್ದರು.

"ನಾನು ಹೀಗೆ ಬರುವುದು ನಿಮಗೆ ಬೇಸರವೇ ?"

"ಅದರಷ್ಟು ಸಂತೋಷದ ವಿಚಾರ ನನಗಾವುದೂ ಇಲ್ಲ" ಎಂದು ಹೇಳ ಬೇಕೆನಿಸಿತು; ನಾಲಗೆ ಹಿಂಜರಿಯಿತು. "ಇಲ್ಲ" ಎಂದಳು ಮೆಲ್ಲನೆ.

"ಹಾಗಾದರೆ ಚೆನ್ನಾಗಿ ಮಾತನಾಡುವುದಿಲ್ಲವೇಕೆ ?"

"ಏನು ಮಾತನಾಡಲಿ ?"

"ಹಾಗಾದರೆ ಮಾತನಾಡುವ ವಿಷಯವೇ ಇಲ್ಲವೇ ನಿಮ್ಮ ಬಳಿ?"

ವಿಷಯ ನೂರಾರು ಇರಬಹುದು; ಆದರೆ ಅದೆಲ್ಲವನ್ನೂ ಅವರೆದುರು ಆಡುವುದಕ್ಕೆ ಸಾಧ್ಯವೇ ? ಅಷ್ಟು ತಿಳಿಯಬಾರದೇ ಇವರಿಗೆ?

"ನೀವೇ ಏನಾದರೂ ಹೇಳಿ."

"ಹಾಂ, ಸರಿಹೋಯಿತು. ನಾನು ಡಾಕ್ಟರು, ರೋಗಕ್ಕೆ ಸಂಬಂಧಿ ಸಿದ ವಿಚಾರವಲ್ಲದೆ ನನ್ನಿಂದ ಬೇರೇನು ಮಾತನಾಡಲು ಸಾಧ್ಯ?"

"ನಾನು ಕಲಿತಿರುವುದು ಅಡುಗೆ ಮಾಡುವುದು ಮಾತ್ರ, ಅದನ್ನೇ ಕೇಳಲೇ ?" ತುಂಟ ನಗುವಿತ್ತು ಅವಳ ಮುಖದ ಮೇಲೆ.

"ಅಬ್ಬಾ ! ಇಷ್ಟು ಚೆನ್ನಾಗಿ ಮಾತನಾಡಲು ಬರುವುದೆಂದು ನನಗೆ ತಿಳಿದೇ ಇಲ್ಲ. ನೀವು ಮಾತು ಬಾರದವರು ಎಂದುಕೊಂಡಿದ್ದೆ."

"ಈಗ ಚೆನ್ನಾಗಿ ತಿಳಿಯಿತೇ ?"

"ಬೇಕಾದಕ್ಕಿಂತ ಹೆಚ್ಚಿಗೆ ತಿಳಿಯಿತು."

"ಅಣ್ಣ ಮೊದಲಿನಿಂದಲೂ ನಿಮಗೆ ಪರಿಚಿತರೇ ?"

"ಹೌದು, ಶಾಲೆಗೆ ಹೋಗುತ್ತಿರುವಾಗಲೇ ನನಗವರ ಪರಿಚಯ ವಾಗಿತ್ತು."

"ಹಾಗಾದರೆ ನೀವೂ ಪುತ್ತೂರಿನವರೇ ?"

"ಹೌದು, ಏಕೆ ಭಯವಾಯಿತೇ ?"

"ಭಯವೇನೂ ಇಲ್ಲ. ಪುತ್ತೂರಿನವರು ಈ ಕಾಡುಕೊಂಪೆಗೆ ಏಕೆ

ಬಂದಿರಿ ? ”

“ ಏನೋ ಹಳ್ಳಿಯ ಜನರ ಸೇವೆ ಮಾಡಬೇಕೆನಿಸಿತು. ನನಗೇನೂ ಈ ವೃತ್ತಿಯಿಂದ ಸಂಪಾದನೆಯಾಗಬೇಕಿಲ್ಲ. ಅಪ್ಪ ಮಾಡಿಟ್ಟದ್ದು ಬೇಕಾದಷ್ಟಿದೆ. ನಾನು ಒಬ್ಬನೇ ಮಗ. ”

“ ಹಾಗಿದ್ದೂ ಈ ಕಾಡುಕೊಂಪೆಗೆ ಬಂದಿರಾ ? ”

“ ಏಕೆ, ಬಂದದ್ದು ತಪ್ಪಾಯಿತೇ ? ಈ ಪಾಪದ ಹಳ್ಳಿಗರಿಗೆ ಅದರಿಂದ ಎಷ್ಟು ಪ್ರಯೋಜನವಾಗಿದೆಯೆಂಬುದು ಗೊತ್ತೇ ನಿಮಗೆ ? ”

“ ನಿಮ್ಮ ಹೃದಯ ದೊಡ್ಡದು. ” ಶಾಂತಿಯ ಹೃದಯ ತುಂಬಿಬಂದಿತು. ಅವರ ಪಾದದ ಮೇಲೆ ಹಣೆಯಿರಿಸಿ ನಮಸ್ಕಾರ ಮಾಡುವ ಮನಸ್ಸಾಯಿತು. ಆದರೆ ಏಕೋ ಧೈರ್ಯವಾಗಲಿಲ್ಲ. ಹಾಗೆ ಮಾಡಲು ತಾನು ಚಿಕ್ಕ ಮಗುವಲ್ಲ.

“ ನನ್ನ ದಾರಿ ನಿಮಗೆ ಸರಿಹೋಯಿತೇ ? ”

“ ಅದನ್ನು ಬಾಯಿಯಿಂದ ಆಡಿ ತೋರಿಸಬೇಕೇ ? ನಿಮ್ಮಂತಹ ಮಹಾನುಭಾವರ ಹಿರಿಮೆಗೆ ನನ್ನಂತಹ ಅಲ್ಪ ಜೀವಿಯ ಮಾತಿನ ಕಲಶ ವೇಕೆ ? ”

“ ಇದೆಲ್ಲವನ್ನು ಎಲ್ಲಿ ಕಲಿತಿರಿ ? ”

“ ಹೆಣ್ಣು ಮಕ್ಕಳ ನಿಜವಾದ ಪಾಠಶಾಲೆ ಎಲ್ಲಿ ಎಂಬುದು ತಿಳಿಯದೇ ನಿಮಗೆ ? ”

“ ಎಲ್ಲಿ ? ”

“ ತಾಯಿಯ ಮಡಿಲಲ್ಲಿ. ” ಮುಂದೆ ಅವಳ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಗತಿಸಿಹೋದ ಒಲವಿನ ಮಾತೆಯ ನೆನಪಾಗಿ ಕಣ್ಣುಗಳು ತುಂಬಿ ಬಂದುವು.

“ ಕ್ಷಮಿಸಿ, ಕೇಳಬಾರದ್ದನ್ನು ಕೇಳಿ ನಿಮ್ಮನ್ನು ನೋಯಿಸಿದೆ. ”

“ ಹಾಗೇನಿಲ್ಲ, ಅದು ಯಾವಾಗಲೂ ನನ್ನ ಹೃದಯದಲ್ಲಿ ಜಾಗೃತ ವಾಗಿರುವ ನೆನಪು. ”

“ ನಿಮ್ಮ ಅಣ್ಣ ಇನ್ನೂ ಯಾಕೆ ಮದುವೆಯಾಗಿಲ್ಲವೆಂದು ನಿಮಗೆ ಗೊತ್ತೇ ಇಲ್ಲವೇ ? ”

“ ಇಲ್ಲ. ನೀವು ಪುನಃ ಪುನಃ ಇದೇ ಪ್ರಶ್ನೆಯನ್ನು ಏಕೆ ಕೇಳುತ್ತಿರುವಿ

ರೆಂಬುದೇ ನನಗೆ ತಿಳಿಯದಾಗಿದೆ. ”

“ನೀವು ಅವರ ತಂಗಿಯಾಗಿಯೂ ನಿಮಗದು ತಿಳಿಯದಿರುವುದು ಆಶ್ಚರ್ಯ. ಅವರ ಮುಖವೇ ಅದನ್ನು ಹೇಳುತ್ತಿದೆ; ಅವರು ಯಾರನ್ನೋ ಪ್ರೀತಿಸಿದ್ದಿರಬೇಕು; ಅವರ ಪ್ರೀತಿಯು ನಿರಾಶೆಯಲ್ಲಿ ಕೊನೆಗೊಂಡಿರಬೇಕು. ”

“ ಅದನ್ನು ಹೇಗೆ ಹೇಳುವಿರಿ ? ”

“ ಅವರನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ ; ಅವರ ಮನಸ್ಸಿಗೆ ನೆಮ್ಮದಿಯಿಲ್ಲವೆಂಬುದು ನಿಮಗೆ ತಿಳಿಯದಿರಲಾರದು. ”

“ ಅದಕ್ಕೆ ಬೇರೆ ಕಾರಣವಿರಬಾರದೇ ? ”

“ ಇರಬಹುದು; ತಂಗಿಯ ಮದುವೆಯಾಗಿಲ್ಲವೆಂದಿರಬಹುದು. ಆದರೆ ಅವರ ಅಶಾಂತಿಯ ಕಾರಣ ಅದಲ್ಲ; ನಾನು ನಿಶ್ಚಯಪೂರ್ವಕವಾಗಿ ಹೇಳಬಲ್ಲೆ. ”

ಶಾಂತಿ ತಬ್ಬಿಬ್ಬಾದಳು. ಈ ವಿಚಾರವನ್ನು ಈವರೆಗೆ ಆಕೆ ಯೋಚಿಸಿರಲಿಲ್ಲ; ಆದರೆ ಈ ಮಾತನ್ನು ಹೆಚ್ಚಿಗೆ ಮುಂದುವರಿಸಲು ಅವಳು ಇಷ್ಟಪಡಲಿಲ್ಲ. ಸಮಯ ಸಾಧಿಸಿ ಅವರೊಡನೆಯೇ ಕೇಳಿ ತಿಳಿದುಕೊಳ್ಳುವೆ ಎಂದು ಸುಮ್ಮನಾದಳು.

“ ಏಕೆ ಸುಮ್ಮನಾದಿರಿ ? ”

“ ಏನೂ ಇಲ್ಲ. ” ಎಂದಷ್ಟೇ ಮುಗಿಸಿದಳು.

“ ಗಂಟೆ ಹತ್ತಾಗುತ್ತಾ ಬಂತು. ನಿಮ್ಮ ಅಡುಗೆಯಾಗಬೇಕಲ್ಲವೇ ? ”

“ ಅಡುಗೆ ಮಾಡಿದರಾಯಿತು. ನಿಮಗೆ ಕೆಲಸವಿರಬಹುದೇನೋ ? ”

“ ನನಗೇನೂ ಕೆಲಸವಿಲ್ಲ. ದಿನವಿಡೀ ನಿಮ್ಮ ಜೊತೆಯಲ್ಲಿ ಮಾತನಾಡುತ್ತ ಕುಳಿತುಕೊಳ್ಳುವೆ. ”

“ ಅದು ಇಷ್ಟರಲ್ಲಿಯೇ ತಿಳಿದುಹೋಗಿದೆ. ”

ಡಾಕ್ಟರರಿಗೆ ಮೋರೆಯ ಮೇಲೆ ಹೊಡೆದಂತಾಯಿತು. ಆದರೂ ಅದನ್ನು ತೋರಿಸಿಕೊಳ್ಳದೆ ಅವಳನ್ನು ಕಂಡು ಮುಗುಳು ನಕ್ಕರು. “ ಹಾಗಾದರೆ ನಾನಿನ್ನು ಹೊರಡುವೆ ” ಎಂದು ಎದ್ದು ನಿಂತರು.

ಅದು ಆಕೆಗೆ ಇಷ್ಟವಿಲ್ಲದ ವಿಚಾರ. ಎಲ್ಲ ಸಂಕೋಚವನ್ನೂ ಬದಿಗಿರಿಸಿ ಅವರ ಬಳಿಗೆ ಓಡಿಬಂದಳು. ಅವರನ್ನು ಹಿಡಿದು ಕೂರಿಸುವ ಉದ್ದೇಶವಿತ್ತು

ಆಕೆಯದು. ಆದರೂ ಒಮ್ಮೆಗೇ ಅದು ಸಾಧ್ಯವಾಗಲಿಲ್ಲ. "ಸ್ವಲ್ಪ ಕುಳಿತು ಕೊಳ್ಳಿ."

ಅವರು ವಿರೋಧಿಸಲಿಲ್ಲ. ಕುಳಿತುಕೊಂಡರು. ಶಾಂತಿ ದೂರಕ್ಕೆ ಹೋಗ ಲಿಲ್ಲ. ಅವರ ತೀರ ಸಮೀಪದಲ್ಲಿ ನಿಂತುಕೊಂಡಳು.

"ಏಕೆ, ಏನಾದರೂ ಹೇಳುವುದಿದೆಯೇ ?"

"ನಿಮಗೆ ಏನೂ ಬೇಸರವಾಗಿಲ್ಲವೇ ?"

"ಬೇಸರವೇಕೆ ?"

"ಯಾಕಾದರೂ ಇರಲಿ ; ಬೇಸರವಾಗಿಲ್ಲವೆಂದು ಹೇಳಿ."

"ಬೇಸರವಾಗಿದ್ದರೂ ಸುಳ್ಳು ಹೇಳಬೇಕೆ?" ಅವರು ನಗುತ್ತಿದ್ದರು.

"ಹೂಂ. ನಿಮಗೆ ಸ್ವಲ್ಪವೂ ಕರುಣೆಯಿಲ್ಲ." ಅವಳು ಹೊರಡಲನು ವಾದಳು.

ಕಣ್ಣುಗಳು ಆಗಲೆ ಹನಿಗೂಡಿದ್ದುವು. ಹೋಗುವಷ್ಟರಲ್ಲಿ ಡಾಕ್ಟರರು ಅವಳ ಕೈಯನ್ನು ಹಿಡಿದುಕೊಂಡಿದ್ದರು.

"ನಿಮ್ಮ ಮೇಲೆ ಬೇಸರಪಟ್ಟುಕೊಳ್ಳುವುದು ನನಗೆ ಸಾಧ್ಯವೆಂದು ತಿಳಿದಿರುವಿರಾ ?"

"ಹಾಗಾದರೆ ಒಂದು ಮಾತು."

"ಏನು ?"

"ನಾನು ನಿಮಗಿಂತ ಚಿಕ್ಕವಳಲ್ಲವೇ ?"

"ಹೌದು, ಏಕೆ ?"

"ಇನ್ನು ಮುಂದೆ ನನ್ನನ್ನು ಶಾಂತಾ, ನೀನು, ಎಂದು ಕರೆದರೆ ಸಾಕು. ಈ ಬಹುವಚನಗಳ ಮಾಲೆ ಬೇಡ." ಅವರು ಮಾತನಾಡದೆ ಅವಳ ಕೈಯ ನ್ನೆತ್ತಿ ತುಟಿಗೊತ್ತಿಕೊಂಡರು.

"ಜಾಣೆ, ನನ್ನ ಶಾಂತಾ."

ಶಾಂತಿಯ ಮೈ ನವಿರೆದ್ದಿತು. ಆಕೆಯ ಮನಸ್ಸು ಆನಂದದಿಂದ ಪ್ರಫುಲ್ಲಿತ ವಾಯಿತು. ತಲೆತಗ್ಗಿಸಿ ಸುಮ್ಮನೆ ನಿಂತಿದ್ದಳು ; ಅವರೂ ಅವಳಿಗೆ ಹೊಂದಿ ಕೊಂಡು ಸಮೀಪದಲ್ಲಿಯೇ ನಿಂತಿದ್ದರು.

ಏನೇನೋ ಭಾವಿಸಿಕೊಂಡಳು—ಅವರು ತನ್ನನ್ನು ಅಪ್ಪಿಕೊಳ್ಳಬಹುದು,

ಮುತ್ತಿಡಬಹುದು ; ಆದರೆ ಹಾಗೇನೂ ಆಗಲಿಲ್ಲ.

"ಹೋಗಿ ಬರಲೇ ಶಾಂತಾ ?" ಶಾಂತಾ ತಲೆಯೆತ್ತಿ ಅವರನ್ನೇ ನೋಡಿದಳು. ದೈನ್ಯ ತುಂಬಿತ್ತು ಆಕೆಯ ನೋಟದಲ್ಲಿ.

" ಸಂಜೆಗೆ ಬರುವಿರಾ ? "

" ಕಾಫಿ ಮಾಡಿಡುವಿಯಾ ? "

" ಎಲ್ಲಾ ಮಾಡುವೆ, ನೀವು ಬನ್ನಿ. "

ಅವರು ನಗುತ್ತ ಹೊರಟು ಹೋದರು. ಶಾಂತಾ ಬಾಗಿಲ ಬಳಿಯಲ್ಲಿ ನಿಂತು ಅವರು ಕಣ್ಮರೆಯಾಗುವ ವರೆಗೆ ನೋಡುತ್ತ ನಿಂತಳು. ತಲೆಗೇರಿದ ಅಮಲು ಇಳಿಯಬೇಕಾದರೆ ತುಂಬಾ ಹೊತ್ತು ಬೇಕಾಯಿತು.

## ೧೦

ಗಂಟೆ ಆಗಲೇ ಹನ್ನೊಂದಕ್ಕೆ ಸಮೀಪವಾಗಿತ್ತು.

" ಅಕ್ಕಾ ಅಡುಗೆಯಾಯಿತೇ, ಇಲ್ಲೇನು ಮಾಡುತ್ತಿರುವೆ ? " ಎಂದು ಗೋಪು ಕೂಗಿದಾಗಲೇ ಅವಳಿಗೆ ಎಚ್ಚರ.

"ಅಡುಗೆ ಇನ್ನೂ ಆಗಿಲ್ಲ ಗೋಪೂ. ಏನೊ, ಜೋರಾಗಿ ತಲೆ ಹೊಡೆದುಕೊಳ್ಳಲಾರಂಭಿಸಿತು, ಸ್ವಲ್ಪ ಮಲಗಿದೆ. "

" ಡಾಕ್ಟರರು ಬಂದಿದ್ದರಲ್ಲ. ಇಲ್ಲಿಗೆ ಬಂದಿದ್ದರೇ ? "

" ಹೌದು " ಎನ್ನುವಾಗ ಮುಖ ನಾಚಿಕೆಯಿಂದ ರಂಗೇರಿತ್ತು. ಆದರೆ ಗೋಪುವಿನ ಕಣ್ಣಿಗೆ ಅದು ಗೋಚರವಾಗಲಿಲ್ಲ. ಅದನ್ನೆಲ್ಲ ತಿಳಿದುಕೊಳ್ಳುವಷ್ಟು ಬುದ್ಧಿ ಅವನಲ್ಲಿ ಇನ್ನೂ ಇರಲಿಲ್ಲ. ಶಾಂತಿ ಮಾತನಾಡದೆ ಅಡುಗೆ ಮನೆಯತ್ತ ಸಾಗಿದಳು. ಅವಸರವಾಗಿ ಅಡುಗೆ ಕೆಲಸದಲ್ಲಿ ತೊಡಗಿದಳು.

ಒಂದು ಗಂಟೆಯ ಹೊತ್ತಿಗೆ ರಾಮರಾಯರು ಮನೆಗೇ ಬಂದರು. ಅಡುಗೆ ಅಷ್ಟು ಹೊತ್ತಿಗೆ ಸಿದ್ಧವಾಗಿತ್ತು. ಮಣೆಯಿಟ್ಟು ಅಣ್ಣಗೆ ಬಡಿಸುತ್ತ " ನಿನ್ನೆಯ ತಪ್ಪಿಗೆ ಇದು ಶಿಕ್ಷೆ ತಿಳಿಯಿತೇನಣ್ಣ ? " ತುಂಟ ನಗು ಆಕೆಯ ಮುಖದ ಮೇಲೆ ಮಿನುಗುತ್ತಿತ್ತು.

" ನಿನ್ನ ಮುಖದ ಮೇಲಿನ ಈ ನಗು ಸದಾಕಾಲವೂ ಬೆಳಗುತ್ತಿರಲಿ ಶಾಂತೂ. "

" ಇದೇನಣ್ಣ ಇಂದು ಹೊಸತು ? "

" ನಿನಗೆ ಒಳ್ಳೆಯ ಗಂಡನ್ನ ನಿಶ್ಚಯ ಮಾಡಿದ್ದೇನಮ್ಮ. "

ಅವಳ ಎದೆ ಹೊಡೆದುಕೊಳ್ಳಲಾರಂಭಿಸಿತು. ಆದರೂ ಧೈರ್ಯವಾಗಿ ಹೇಳಿಯೇ ಬಿಟ್ಟಳು.

" ನಾನು ಮದುವೆ ಆಗುವುದೇ ಇಲ್ಲಣ್ಣ. ನಾನು ಹೋದರೆ ನಿನಗೆ ಬೇಯಿಸಿ ಹಾಕುವವರಾರು ? "

" ನನ್ನದು ಹೇಗಾದರೂ ಆಗುವುದಮ್ಮ. ಹಾಗೆಂದು ನಿನ್ನನ್ನು ಮನೆಯಲ್ಲಿರಿಸಿಕೊಳ್ಳಲು ಸಾಧ್ಯವಿದೆಯೇ ? "

" ಇಲ್ಲಣ್ಣ, ನಾನು ಮದುವೆಯಾಗುವುದೇ ಇಲ್ಲ. "

" ಹುಚ್ಚಿ, ನಿನ್ನ ಗಂಡ ಯಾರೆಂದಾದರೂ ಒಮ್ಮೆ ಕೇಳಿಕೊ, ಆಮೇಲೆ ನಿರ್ಣಯ ಮಾಡುವಿಯಂತೆ. "

ಅವಳು ಮಾತನಾಡದೆ ಅಣ್ಣನ ಮುಖವನ್ನೆ ನೋಡಿದಳು.

" ಡಾ। ಮಾಧವರಾಯರು, ನಿನಗೊಪ್ಪಿಗೆಯೇ ಶಾಂತೂ ? "

ಅವಳಿಗೆ ತಲೆತಿರುಗಿ ಬೀಳುವಂತಾಯಿತು; ಆದರೂ ಸಾವರಿಸಿಕೊಂಡಳು. ಇಷ್ಟು ಬೇಗನೆ ಅಣ್ಣನ ಬಾಯಿಯಿಂದ ಈ ಮಾತನ್ನು ಅವಳು ನಿರೀಕ್ಷಿಸಿರಲಿಲ್ಲ.

" ಅವರೂ ನಮ್ಮ ಜನ ಶಾಂತೂ. ನನಗೆ ಈ ಮಾತನ್ನು ಅವರೊಡನೆ ಪ್ರಸ್ತಾಪಿಸುವುದಕ್ಕೆ ಸಾಧ್ಯವಿರಲಿಲ್ಲ ; ಅವರೇ ಹೇಳಿದರು. "

" ಏನೆಂದು ? "

" ನಿಮ್ಮ ತಂಗಿಯನ್ನು ನನಗೆ ಕೊಡಲು ನಿಮಗೊಪ್ಪಿಗೆಯೇ ರಾಮುರಾಯರೇ ? ಎಂದರು. ನನಗೆ ನನ್ನ ಕಿವಿಯನ್ನೇ ನಂಬಲಾಗಲಿಲ್ಲ.

" ಹೂಂ " ಎಂದುಬಿಟ್ಟೆ.

" ನಿಮ್ಮ ತಂಗಿಯ ಒಪ್ಪಿಗೆ ಬೇಡವೆ ಇದಕ್ಕೆ ? " ಎಂದು ಕೇಳಿದರು.

" ಒಪ್ಪಿಕೊಳ್ಳದಿರುವಷ್ಟು ಮೂರ್ಖತನ ಅವಳು ಮಾಡಲಿಕ್ಕಿಲ್ಲ ಎಂದು ಧೈರ್ಯವಾಗಿ ಹೇಳಿಬಿಟ್ಟೆ. ಏಕೆ ಶಾಂತೂ, ನಿನಗೊಪ್ಪಿಗೆಯಲ್ಲವೇ ? "

ಶಾಂತಿ ಆಗಲೇ ಮುಖವನ್ನು ಪಕ್ಕಕ್ಕೆ ಹೊರಳಿಸಿಕೊಂಡಿದ್ದಳು. ಅಲ್ಲಿ

ಮೂಡಿದ ಹಿಗ್ಗು ಅಣ್ಣನ ಕಣ್ಣಿಗೆ ಬೀಳಬಾರದೆಂದು ಹಾಗೆ ಮಾಡಿದ್ದಳು. ಅವರ ಮಾತು ಕೇಳಿ ಅವಳ ಬಾಯಿ ಕಟ್ಟಿಹೋಯಿತು. ಇಷ್ಟು ಬೇಗನೇ ಇಂಥಾ ಸೌಭಾಗ್ಯವನ್ನು ಅವಳು ನಿರೀಕ್ಷಿಸಿರಲಿಲ್ಲ. ಆದರೂ ಒಂದು ರೀತಿಯಲ್ಲಿ ಉತ್ತರಿಸಿದಳು.

" ಇದಕ್ಕೆ ಒಮ್ಮೆಲೆ ಉತ್ತರ ಕೊಡಲು ಸಾಧ್ಯವಿಲ್ಲಣ್ಣ. ಯೋಚಿಸಲು ಒಂದೆರಡು ದಿನಗಳ ಅವಕಾಶ ಬೇಕು."

ಯೋಚಿಸುವುದೇನೂ ಆಕೆಯ ಪಾಲಿಗೆ ಉಳಿದಿರಲಿಲ್ಲ. ಆದರೆ ನಾಚಿಕೆ ಬಿಟ್ಟು ನನ್ನ ಒಪ್ಪಿಗೆ ಎಂದು ಹೇಳುವುದಕ್ಕೆ ಆಕೆ ಸಿದ್ಧಳಿರಲಿಲ್ಲ.

" ಇದರಲ್ಲಿ ಯೋಚಿಸುವುದೇನಿದೆ ಶಾಂತೂ ? ಅವರನ್ನಂತೂ ನೀನು ನೋಡಿಯೇ ಇರುವಿ. ತುಂಬಾ ಯೋಗ್ಯರು ; ಮಾತ್ರವಲ್ಲ ಆಗರ್ಭ ಶ್ರೀಮಂತರು. "

" ಏನಾದರೂ ಆಗಲಿ, ಎರಡು ದಿನ ಕಳೆದು ನನ್ನ ನಿರ್ಧಾರ ತಿಳಿಸುವೆ. "

ತಂಗಿಯ ಸ್ವಭಾವವರಿತ ಅವರು ಮತ್ತೆ ಚರ್ಚೆ ಮಾಡುವ ಗೋಜಿಗೆ ಹೋಗಲಿಲ್ಲ.

ಅಣ್ಣ ಹೋದೊಡನೆ ಶಾಂತಿ ಮನೆಯಲ್ಲಿ ಕುಣಿದಾಡಿದಳು. ಅಷ್ಟು ಸಂತೋಷವನ್ನು ಜೀವಮಾನದಲ್ಲೆಂದೂ ಆಕೆ ಅನುಭವಿಸಿರಲಿಲ್ಲ. ಸಂತೋಷ ದಿಂದ ಹುಚ್ಚಳಂತಾದಳು. ಊಟ ಮಾಡುವುದೂ ಆಕೆಗೆ ಬೇಕಾಗಿರಲಿಲ್ಲ; ಊಟದ ಶಾಸ್ತ್ರ ಮುಗಿಸಿದಳು. ಸಂಜೆ ಅವರು ಬರುವರು ; ಈಗಿನಿಂದಲೇ ಅವರ ಸ್ವಾಗತದ ಸಿದ್ಧತೆ ಮಾಡತೊಡಗಿದಳು. ಪೆಟ್ಟಿಗೆಯೊಳಗಿಂದ ಹೊಸ ಜಾರ್ಜೆಟ್ ಸೀರೆ ತೆಗೆದಳು; ಗುಲಾಬಿ ಬಣ್ಣದ ಬ್ಲಾವುಜನ್ನು ಆಯ್ದುಕೊಂಡಳು. ಚೆನ್ನಾಗಿ ಮುಖ ತೊಳೆದು, ಓರಣವಾಗಿ ತಲೆ ಬಾಚಿ, ಕಾಡುಮಲ್ಲಿಗೆ ಮುಡಿ ದಳು. ನಾಲ್ಕು ಗಂಟೆ ಆಗಬೇಕಾದರೆ ಉಪ್ಪಿಟ್ಟು ಒಗ್ಗರಿಸಿ ಅಣ್ಣನಿಗೆ ಕಾಫಿ ಕಳುಹಿಸಿಕೊಟ್ಟಳು. ಗೋಪು ತಿರುಗಾಡುವುದಕ್ಕೆಂದು ಹೊರಟ. ಮನೆಯಲ್ಲಿ ಒಬ್ಬಳೆ. ಉತ್ಸಾಹದಿಂದ ಅವರ ಬರವನ್ನೇ ಕಾದು ಕುಳಿತಳು. ಒಂದೊಂದು ಕ್ಷಣ ಒಂದೊಂದು ಯುಗದಂತೆ ಕಂಡಿತು.

ಗಳಿಗೆಗೊಮ್ಮೆ ಬಾಗಿಲ ಬಳಿ ಹೋಗಿ ನಿಲ್ಲುವಳು. ಅವರು ಬಾರದಿರುವು ದನ್ನು ತಿಳಿದರೆ ಮುಖ ಮುದುಡಿಸಿಕೊಳ್ಳುವಳು. ನಿಟ್ಟುಸಿರು ಬಿಡುವಳು.

ತನ್ನ ಆತುರವನ್ನು ಕಂಡು ಆಕೆಗೆ ನಾಚಿಕೆ ಎನಿಸಿದರೂ ಅದು ಕಡಿಮೆಯಾಗು ವಂತಿರಲಿಲ್ಲ. ಅವರು ಈಗ ಬರಬಹುದು; ಆಗ ನಾನೇನು ಮಾಡಬೇಕು.

ಪಂಜಕ್ಕೆ ಬಂದ ಮೇಲೆ ಇದು ಅವಳ ಮೊದಲಬಾರಿಯ ಅಲಂಕಾರ. ಅದೂ ತನ್ನ ಪ್ರಿಯತಮನ ಸ್ವಾಗತದ ಸಲುವಾಗಿ. ಗಳಿಗೆಗೊಮ್ಮೆ ಕನ್ನಡಿ ನೋಡಿಕೊಳ್ಳುವಳು. ಅಷ್ಟರಲ್ಲಿ ಹೊರಗಡೆ ಬೂಟ್ಸಿನ ಸಪ್ಪಳವಾಯಿತು; ಶಾಂತಿ ಓಡಿ ಬಾಗಿಲು ತೆರೆದಳು; ಎದುರಿಗೆ ಕಂಡುದೇನು ?

ತನ್ನ ಹೃದಯೇಶ್ವರರು ನಿಂತಿದ್ದರು. ಅವರು ಹಾಕಿಕೊಂಡದ್ದೂ ನೀಲಿ ಸೂಟು. ಶಾಂತಿ ತಲೆತಗ್ಗಿಸಿ ಒಳಕ್ಕೆ ನಡೆದಳು. ಡಾಕ್ಟರರು ಹಿಂಬಾಲಿಸಿ ದರು. ಅವರಿಗಾಗಿ ಮೊದಲೇ ಕುರ್ಚಿ ಇಡಲ್ಪಟ್ಟಿತ್ತು. ಮಾತನಾಡದೆ ಕುಳಿತುಕೊಂಡರು. ಅಕ್ಕಪಕ್ಕಕ್ಕೆ ಕಣ್ಣು ಹೊರಳಿಸಿದರು ; ಶಾಂತಿ ಕಾಣಿಸಲಿಲ್ಲ. ಐದೇ ನಿಮಿಷ ಕಳೆಯುವುದರೊಳಗಾಗಿ ಒಂದು ಕೈಯಲ್ಲಿ ಉಪ್ಪಿಟ್ಟಿನ ತಟ್ಟೆ ಯನ್ನೂ ಇನ್ನೊಂದರಲ್ಲಿ ಕಾಫಿ ಲೋಟಿಯನ್ನೂ ಹಿಡಿದುಕೊಂಡು ಬಂದಳು. ನೆಟ್ಟಗೆ ಅವರಿದ್ದಲ್ಲಿಗೆ ಬಂದು ಎದುರಿಗಿದ್ದ ಸ್ಟೂಲಿನ ಮೇಲೆ ಕೈಯಲ್ಲಿದ್ದುದನ್ನು ಇಟ್ಟಳು.

ಡಾಕ್ಟರರ ಕಣ್ಣು ಅವಳ ಕಡೆಗೆ ತಿರುಗಿತು. ನೋಡುತ್ತ ಕುಳಿತರು; ಅಂದಿನ ಅವಳ ರೂಪ ತುಂಬಾ ಮೋಹಕವಾಗಿ ಕಂಡಿತು. ಶಾಂತಿ ನಾಚಿದರೂ ಅದನ್ನು ತೋರಿಸಿಕೊಳ್ಳಲಿಲ್ಲ.

" ನನ್ನನ್ನೇ ನೋಡುವುದೇನು, ಕಾಫಿ ಆರಿ ಹೋಗುತ್ತದೆ ಕುಡಿಯ ಬಾರದೇ ? "

ಅವಳ ಮಾತು ಕೇಳಿ ಅವರು ಎಚ್ಚತ್ತರು. ಮೆಲ್ಲನೆ ಉಪ್ಪಿಟ್ಟಿನ ತಟ್ಟೆಗೆ ಕೈ ಹಾಕಿದಳು.

" ಅಣ್ಣ ಏನಾದರೂ ಹೇಳಿದರೆ ಶಾಂತೂ ? "

" ಹೂಂ. "

" ನೀನೇನೂ ಉತ್ತರ ಕೊಡಲಿಲ್ಲವೇ ಶಾಂತೂ ? "

" ನನ್ನ ಉತ್ತರವೇನೆಂದು ತಿಳಿಸಲಿಲ್ಲವೇ ಅವರು ? "

" ತಿಳಿಸಿದರು ಶಾಂತೂ, ಕೇಳಿ ತುಂಬಾ ಬೇಸರವಾಯಿತು. ನಿನ್ನಿಂದ ನಾನಂತಹ ಉತ್ತರವನ್ನು ನಿರೀಕ್ಷಿಸಿರಲಿಲ್ಲ. "

ಶಾಂತಿಗೆ ಉದ್ವೇಗವನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಅವರಿದ್ದಲ್ಲಿಗೆ ಓಡಿ ಬಂದು ತನ್ನೆರಡೂ ಕೈಗಳನ್ನು ಅವರ ಕೊರಳ ಸುತ್ತ ಬಳಸಿದಳು. ಅವರ ತಲೆಯನ್ನು ತನ್ನೆದೆಗೆ ಒತ್ತಿಕೊಂಡಳು. " ಈಗ ದೊರೆಯಿತೇ ಉತ್ತರ ? "

ಅವರಿಗೆ ಒಮ್ಮೆಲೇ ಆಶ್ಚರ್ಯ, ಸಂತೋಷ. ಆಕೆಯನ್ನು ತಬ್ಬಿಕೊಂಡರು.

" ಮತ್ತೆ ಅಣ್ಣನೊಡನೆ ಹಾಗೇಕೆ ಹೇಳಿದೆ ? "

" ಹೇಗೆ ಹೇಳಬೇಕಿತ್ತು ? ಅವರು ನನಗೆ ಗಂಡ ಆಗಬಹುದು ಎಂದು ಹೇಳಬೇಕಿತ್ತೇ ? " ಆಕೆ ನಗುತ್ತಿದ್ದಳು.

ಡಾಕ್ಟರರ ಹೃದಯ ಆನಂದದಿಂದ ಅರಳಿತು. ಆಕೆಯ ಕೈಗಳೆರಡನ್ನೂ ಎದೆಗೊತ್ತಿಕೊಂಡರು, ತುಟಿಗೊತ್ತಿಕೊಂಡರು.

" ನಾನು ಭಾಗ್ಯಶಾಲಿ ಶಾಂತೂ. "

" ಇರಲಿ, ಮೊದಲು ಕಾಫಿ ಕುಡಿಯಿರಿ, ಆಮೇಲೆ ಮಾತು."

ಅವರು ಕಾಫಿಯನ್ನು ಕೈಗೆತ್ತಿಕೊಂಡರು. " ನೀನೂ ಒಂದಿಷ್ಟು ಕುಡಿ. "

" ಏನೂ ಬೇಡ, ಇಲ್ಲಿ ಕೊಡಿ ನಾನೇ ಕುಡಿಸುವೆ. " ಅವರ ಕೈಯಲ್ಲಿನ ಲೋಟ ಕಸಿದುಕೊಂಡು ತಾನೇ ಕುಡಿಸಿದಳು. ಅವರ ಜಗ್ಗಾಟದಲ್ಲಿ ಡಾಕ್ಟರರ ಬಟ್ಟೆಯ ಮೇಲೆಲ್ಲ ಕಾಫಿ.

" ಇದು ಬೆಲೆಬಾಳುವ ಬಟ್ಟೆ ಶಾಂತೂ, ದಂಡ ಕೊಡಬೇಕಾದೀತು. "

" ಮತ್ತೆ ಮಕ್ಕಳ ಹಾಗೆ ಹಟ ಮಾಡಿದ್ದಿರೇಕೆ ? "

" ಹೋಗಲಿ ಬಿಡು. ನಿನ್ನಂತಹ ಹೆಂಡತಿ ದೊರೆಯುವುದಾದರೆ ಅಂಥಾ ನೂರು ಸೂಟುಗಳು ಹೋದರೂ ಚಿಂತಿಲ್ಲ. "

" ನಿಮಗೇನು, ತುಂಬಾ ಶ್ರೀಮಂತರು. ಬೇಕಾದಷ್ಟು ಹೊಲಿಸಿಕೊಳ್ಳಬಲ್ಲಿರಿ. " ಅವಳ ದನಿಯಲ್ಲಿ ಅಣಕವಿರಲಿಲ್ಲ, ಸ್ನೇಹವಿತ್ತು.

" ನನ್ನ ಸಂಪತ್ತೆಲ್ಲವೂ ನೀನು ಶಾಂತೂ. ನಿನ್ನ ಎದುರಿನಲ್ಲಿ ನನ್ನ ಐಶ್ವರ್ಯವೆಲ್ಲವೂ ಕಾಲಕಸ. "

ಶಾಂತಿಯ ಹೃದಯ ಆನಂದದಿಂದ ಉಬ್ಬಿಹೋಯಿತು. ತನ್ನೆರಡೂ ತೋಳುಗಳನ್ನು ಅವರ ಕೊರಳ ಸುತ್ತ ಬಳಸಿ ಕೆನ್ನೆಗೆ ಮುದ್ದಿಟ್ಟಳು. ಅವರೂ

ಪ್ರತಿಕಾರ ಮಾಡಲು ಹಿಂಜರಿಯಲಿಲ್ಲ. ಎಷ್ಟೋ ಹೊತ್ತಿನ ವರೆಗೆ ಪ್ರೇಮಿಗಳಿಬ್ಬರೂ ಭಾವಸಮಾಧಿಯಲ್ಲಿ ತನ್ಮಯರಾಗಿದ್ದರು.

" ನನ್ನ ಪ್ರಶ್ನೆಗೆ ಏನು ಉತ್ತರ ಶಾಂತೂ? "

" ಯಾವ ಪ್ರಶ್ನೆ ? "

" ಅಣ್ಣನೊಡನೆ ಹೇಳಿ ಕಳುಹಿಸಿದ್ದೆನಲ್ಲಾ ? "

" ಓ....ಅದೇ....ವಿಚಾರ ಮಾಡಬೇಕು. ಅದಕ್ಕಿನ್ನೂ ಎರಡು ದಿನಗಳ ಅವಕಾಶ ಬೇಕು. ಅದನ್ನಾಗಲೇ ಹೇಳಿ ಕಳುಹಿಸಿದ್ದೆನಲ್ಲವೇ ? "

ಇಬ್ಬರೂ ಬಿದ್ದು ಬಿದ್ದು ನಕ್ಕರು. ಸ್ವಲ್ಪ ಹೊತ್ತು ಕಳೆದು ಇಬ್ಬರೂ ಸಾವರಿಸಿಕೊಂಡರು. ಅವರು ಮೆಲ್ಲನೆ ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡರು. " ಶಾಂತೂ. "

ಅವಳು ಮಾತನಾಡದೆ ತನ್ನ ಬೊಗಸೆಕಣ್ಣುಗಳನ್ನು ಅವರ ಕಡೆಗೆ ತಿರುಗಿಸಿದಳು.

" ನನ್ನ ಪ್ರೀತಿಸುತ್ತೀಯಾ ? "

" ಇಲ್ಲ ! "

ಅವರು ಒಮ್ಮೆಲೇ ಹಾರಿಬಿದ್ದು ಅವಳನ್ನೇ ನೋಡಿದರು. ಅವಳು ನಗುತ್ತಿದ್ದಳು.

" ಏಕೆ ಹೆದರಿಬಿಟ್ಟಿರಾ? " ಎಂದು ಮೃದುವಾಗಿ ಅವರ ಗಲ್ಲ ತಟ್ಟಿದಳು.

" ನಾನು ತಮಾಶೆ ಮಾಡುತ್ತಿಲ್ಲ ಶಾಂತೂ, ನಿಜವಾಗಿಯೂ ನನ್ನನ್ನು ಪ್ರೀತಿಸುತ್ತೀಯಾ ? "

" ಆದಕ್ಕುತ್ತರ ಇನ್ನೂ ದೊರೆಯಲಿಲ್ಲವೇ ನಿಮಗೆ ? "

" ನಿನ್ನ ಬಾಯಿಯಿಂದಲೇ ಅದನ್ನು ಕೇಳಿದರೆ ನನಗೆ ಸಂತೋಷ. "

" ಹುಂ. " ಅವಳು ಮೌನವಾಗಿ ಏನನ್ನೋ ಯೋಚಿಸುವವಳಂತೆ ನಿಂತುಕೊಂಡಳು. ಯಾವ ರೀತಿಯಲ್ಲಿ ಉತ್ತರ ಕೊಡಬೇಕೆನ್ನುವುದೇ ಆಕೆಗೆ ತಿಳಿಯಲಿಲ್ಲ.

ಕೆಲವು ನಿಮಿಷ ಕಳೆದು ಅವರ ಕೈಯಿಂದ ಬಿಡಿಸಿಕೊಂಡು ಪಕ್ಕಕ್ಕೆ ಸರಿದಳು. ಮತ್ತೆ ಬಾಗಿ ಅವರ ಪಾದದ ಮೇಲೆ ಹಣೆಯಿರಿಸಿದಳು.

" ನಾನು ನಿಮ್ಮವಳು, ನನ್ನನ್ನು ಏನು ಬೇಕಾದರೂ ಮಾಡಿರಿ. "

ಅವಳು ಎದ್ದು ದೂರ ಸರಿದು ನಿಂತಳು.

ಬಯಸಿದುದಕ್ಕಿಂತಲೂ ಚೆನ್ನಾದ ಉತ್ತರ ಅವರಿಗೆ ದೊರೆತಿತ್ತು; ಅವರ ಮುಖದ ಮೇಲೆ ಗೆಲುವಿನ ನಗು ಮೂಡಿತು.

" ನಾನು ಭಾಗ್ಯಶಾಲಿ ಶಾಂತೂ. "

" ಅದು ನಾನು ಹೇಳಬೇಕಾದ ಮಾತು. ನಿಮ್ಮ ಯೋಗ್ಯತೆಗೆ ಸರಿಯಾದವಳು ನಾನಲ್ಲ; ಆದರೂ ಈ ಭಾಗ್ಯಹೀನಳಿಗೆ ಆಶ್ರಯ ನೀಡುವ ಔದಾರ್ಯ ತೋರಿದಿರಿ. ನಿಮ್ಮ ಔದಾರ್ಯಕ್ಕೆ ತಕ್ಕವಳಾಗಿ ಬಾಳಲು ನನ್ನಿಂದ ಸಾಧ್ಯವಾದರೆ ಅದಕ್ಕಿಂತ ಹೆಚ್ಚಿನದಾದ ಭಾಗ್ಯ ನನ್ನ ಪಾಲಿಗೆ ಬೇರೊಂದಿಲ್ಲ. "

" ನನ್ನ ಮನೆ ನೋಡಲು ಬರುವುದಿಲ್ಲವೇ ? "

" ನನ್ನ ಮನೆಯನ್ನು ನೋಡಲು ಬರಬೇಕಾದರೆ ನೀವು ಹೇಳಬೇಕೆ? ಎಂದು ಕರೆದುಕೊಂಡು ಹೋಗುವಿರೋ ಅಂದೇ ಬರುವೆ. "

ಅವಳ ಮಾತಿನ ಅರ್ಥ ಅವರಿಗಾಗದಿರಲಿಲ್ಲ.

" ಆಗಲಿ, ಶಾಂತೂ ನಿನ್ನನ್ನು ಹೆಚ್ಚು ದಿನ ಅಗಲಿರುವುದು ನನ್ನಿಂದ ಸಾಧ್ಯವಿಲ್ಲ ; ಆದಷ್ಟು ಬೇಗನೆ ನನ್ನ ಮಹಾರಾಣಿಯನ್ನು ಕರೆದೊಯ್ಯುವೆ. "

" ನನ್ನಿಂದಲೂ ಅದು ಸಾಧ್ಯವಿಲ್ಲ; ಹೆಚ್ಚು ಸಮಯದ ವರೆಗೆ ನನ್ನನ್ನು ಬಳಲಿಸಬೇಡಿ. "

" ಅಣ್ಣನಿಗೆ ಏನು ಉತ್ತರ ಹೇಳುವೆ ? "

" ಅದನ್ನು ಆಗಲೇ ಹೇಳಿಬಿಟ್ಟಿರುವೆನಲ್ಲ ? "

" ಆದಲ್ಲ, ಇನ್ನೂ ಎರಡು ದಿನ ಕಳೆದ ಮೇಲೆ. "

" ಅದನ್ನು ನೀವು ಕಲಿಸಿಕೊಡಬೇಕಾಗಿಲ್ಲ. " ಇಬ್ಬರೂ ಒಬ್ಬರನ್ನೊಬ್ಬರು ಕಂಡು ನಕ್ಕರು ; ಡಾಕ್ಟರರು ಹೊರಡಲು ಎದ್ದು ನಿಂತರು.

" ಹೋಗಿ ಬರಲೇ ಶಾಂತೂ. "

ಅವಳ ಮುಖದ ಮೇಲೆ ಮೋಡ ಕವಿಯಿತು. " ಒಂದು ಮಾತು ಕೇಳಬೇಕೆಂದು ಮಾಡಿದ್ದೆ, ಕೇಳಲೇ ? "

" ಏನದು ? "

" ಮತ್ತೆ ನಾಚಿಕೆ ಇಲ್ಲದವಳು ಎನ್ನಬೇಡಿ. "

“ ಇಲ್ಲ ಶಾಂತೂ ಹೇಳು. ” ಅವರು ಅವಳ ತೀರ ಸಮೀಪಕ್ಕೆ ಬಂದು ನಿಂತಿದ್ದರು.

“ ನಾನು ನಿಮಗೆ ಒಪ್ಪಿಗೆಯೇ ? ”

ಅವರು ಉದ್ವೇಗವನ್ನು ತಡೆಯಲಾರದೆ ಅವಳನ್ನಪ್ಪಿ ಅವಳ ಚೆಂದುಟಿಗಳನ್ನು ಮುದ್ದಿಸಿದರು. ಒಂದೈದು ನಿಮಿಷ ಇಬ್ಬರೂ ಮೌನ; ಒಬ್ಬರಿಗೊಬ್ಬರು ತೀರಾ ಹೊಂದಿಕೊಂಡು ನಿಂತಿದ್ದರು.

“ ಕತ್ತಲಾಗುತ್ತ ಬಂತು, ನಾನಿನ್ನು ಹೋಗಿ ಬರಲೇ ? ” ಅವಳು ಮಾತನಾಡದೆ ಬಗ್ಗಿ ಅವರ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡಳು. ಎದ್ದು ದೂರ ಸರಿದು ನಿಂತಳು. ಅವರು ಹೊರಟು ಹೋದರು; ಶಾಂತಿ ಮಂತ್ರ ಮುಗ್ಧಳಂತೆ ತುಂಬಾ ಹೊತ್ತು ನಿಂತಿದ್ದಳು.

## ೧೦

ಹುಂ, ಕತ್ತಲಾಯಿತು; ಇನ್ನು ಅಡುಗೆಯಾಗಬೇಕು, ಎಂದುಕೊಂಡು ಅಡುಗೆ ಮನೆಯತ್ತ ಸಾಗಿದಳು.

ತಾನು ಗಾಳಿಯಲ್ಲಿ ಹಾರಾಡುತ್ತಿರುವಂತೆ ಅನಿಸುತ್ತಿತ್ತು ಅವಳಿಗೆ. ಬರೀ ದೇಹವಷ್ಟೇ ಅಡುಗೆಯ ಕೆಲಸದಲ್ಲಿತ್ತಲ್ಲದೆ ಮನಸ್ಸು ಎತ್ತಲೋ ಹಾರಾಡುತ್ತಿತ್ತು; ಅಡುಗೆಯ ರುಚಿ ಹೇಗಾಗಿತ್ತೋ ದೇವರೇ ಬಲ್ಲ.

ರಾಮರಾಯರು ರಾತ್ರೆ ಊಟ ಮಾಡುವಾಗ “ ಪಲ್ಯಕ್ಕೆ ಉಪ್ಪೇ ಹಾಕಲಿಲ್ಲವೇ ಶಾಂತೂ ? ” ಎಂದಾಗಲೇ ಅವಳಿಗೆ ತನ್ನ ತಪ್ಪು ತಿಳಿಯಿತು.

ಪಲ್ಯಕ್ಕೆ ಏನೆಲ್ಲ ಹಾಕಿದ್ದಳೆಂಬುದು ಅವಳಿಗೇ ತಿಳಿದಿರಲಿಲ್ಲ; ಹೇಗೋ ಅಡುಗೆ ಮಾಡಿ ಮುಗಿಸಿದ್ದಳು.

ಅಂದು ರಾಮರಾಯರು ತಂಗಿಯೊಡನೆ ಬೇರೇನೂ ಮಾತನಾಡಲಿಲ್ಲ; ಊಟ ಮುಗಿಸಿದವರೇ ಹೋಗಿ ಹಾಸಿಗೆಯ ಮೇಲೆ ಉರುಳಿಕೊಂಡರು. ಅವರ ಮನಸ್ಸಿನಲ್ಲಿ ತಿರುಗುತ್ತಿದ್ದುದು ತಂಗಿಯ ಉತ್ತರ.

ಅವಳೇಕೆ ಹಾಗೆ ಹೇಳಿದಳು ? ಈ ಸಂಬಂಧ ಅವಳಿಗೆ ಒಪ್ಪಿಗೆಯಾಗ

ದಿರಬಹುದೇ ? ಛೇ ಇರಲಾರದು, ಇದಕ್ಕಿಂತ ಉತ್ತಮ ಸಂಬಂಧ ಬಯಸಿ ದರೂ ಅವಳಿಗೆ ದೊರೆಯಲಾರದು....ಹಾಗಾದರೆ ಎರಡು ದಿನಗಳ ಅವಕಾಶ ಬೇಕೆಂದು ಹೇಳಿದಳೇಕೆ ? ಅವಳೂ ನನ್ನ ಹಾಗೆ ಯಾರನ್ನಾದರೂ ಪ್ರೀತಿಸಿ ದ್ದಿರಬಹುದೇ ? ಛೇ ಇರಲಾರದು. ಹಾಗೇನಾದರೂ ಆಗಿದ್ದರೆ ನನ್ನ ಗಮನ ಕ್ಕದು ಬಾರದಿರುತ್ತಿರಲಿಲ್ಲ....ಶಾಂತಿ ತಮಾಶೆಗೆಂದು ಎರಡು ದಿನಗಳ ಅವಕಾಶ ವನ್ನು ಕೇಳಿದ್ದರೂ ಆಕೆಯ ಮಾತು ರಾಮರಾಯರ ನೆಮ್ಮದಿಯನ್ನು ಕದಡಿ ಬಿಟ್ಟಿತ್ತು.

ದಿನವಿಡೀ ಅನ್ಯಮನಸ್ಕರಾಗಿಯೇ ಇದ್ದರು; ತೀರಾ ನಿರಾಸಕ್ತರಂತೆಯೇ ರೋಗಿಗಳನ್ನು ವಿಚಾರಿಸಿಕೊಳ್ಳುತ್ತಿದ್ದರು. ಕೆಲಸ ಮುಗಿಸಿ ಮನೆಗೆ ಬಂದರೂ ಅವರ ಮನಸ್ಸಿಗೆ ನೆಮ್ಮದಿಯಿರಲಿಲ್ಲ; ಹಾಸಿಗೆಯ ಮೇಲೆ ಅತ್ತಿತ್ತ ಹೊರಳಾಡು ತ್ತಿದ್ದರೇ ವಿನಾ ನಿದ್ದೆ ಬರುವಂತಿರಲಿಲ್ಲ. ಆದರೂ ಶಾಂತಿ ಅಂದು ಗೆಲುವಾಗಿ ದ್ದಳು; ಅದು ಅವರ ಕಣ್ಣಿಗೆ ಗೋಚರವಾಗದಿರಲಿಲ್ಲ.

'ವಿಚಿತ್ರ ಹೆಣ್ಣು ನಮ್ಮ ಶಾಂತಿ' ಎಂದು ಮನಸ್ಸಿನಲ್ಲಿಯೇ ಅಂದು ಕೊಂಡರು. ಹೇಗೋ ನಿದ್ದೆ ಬಂದಿತು; ಅಂದಿನ ನಿದ್ದೆ ತುಂಬಾ ಸುಖಮಯ ವಾಯಿತು ಅವರ ಪಾಲಿಗೆ. ಎಚ್ಚರವಾಗುವ ವರೆಗೂ ಕನಸಿನ ಲೋಕದಲ್ಲಿಯೇ ವಿಹರಿಸುತ್ತಿದ್ದರು; ಅವರ ಪಾಲಿಗದು ತುಂಬಾ ಹಿತಕರವಾದ ಕನಸು. ಪ್ರೇಮಿ ಗಳ ಸುಖಸಾಮ್ರಾಜ್ಯದ ಕನಸಲ್ಲ; ಬದಲು ತ್ಯಾಗಿಗಳ ಹೃದಯವರಳಿಸುವ ಕನಸು.

ಕನಸಿನಲ್ಲಿ ತಾವು ತಾರುಣ್ಯ ದಾಟಿ ಮುದುಕರಾಗಿದ್ದರು; ತಮ್ಮದೇ ಆಸ್ಪತ್ರೆ, ತಾವೇ ಡಾಕ್ಟರರು ; ಎಣೆಯಿಲ್ಲದ ಜನರ ವಿಶ್ವಾಸ; ಜನರು ಅವರಿಗೆ ತೋರುತ್ತಿರುವ ಗೌರವ; ಹಳ್ಳಿಯ ಮೂಲೆಮೂಲೆಯಲ್ಲಿ ದೊರೆಯುತ್ತಿರುವ ಆದರದ ಸ್ವಾಗತವನ್ನು ಕನಸಿನ ತೆರೆಯ ಮರೆಯಲ್ಲಿ ಕಂಡರು.

ಅದು ಅವರ ಜೀವನದ ಕೊನೆಯ ಘಟ್ಟ; ಬದುಕು ಸಾವಿನೆಡೆಗೆ ಸಾಗಿತ್ತು. ಯಾರೋ ಎದುರು ಬಂದಂತಾಯಿತು. ನೋಡಿದರು. ಅದು ಬೇರೆ ಯಾರೂ ಅಲ್ಲ ; ಅವರ ಮನೋರಾಜ್ಯದ ಅಧಿದೇವತೆ ಶಾರದೆ. ಇನ್ನೂ ಹದಿ ನಾರರ ತರುಣಿಯಂತೆ ಕಾಣಿಸುತ್ತಿದ್ದಳು. ಇವರನ್ನೇ ಅರಸಿಕೊಂಡು ಬಂದಿ ದ್ದಳು. 'ಶಾರದಾ' ಎಂದು ಕೂಗಿಬಿಟ್ಟರು ; ಎಚ್ಚರವಾಯಿತು. ಬೆಳಕು

ಹರಿಯಲು ಇನ್ನೂ ಅವಕಾಶವಿತ್ತು. ಕಣ್ಣುಜ್ಜಿಕೊಂಡು ನೋಡಿದರು; ದಿಗಂತದ ವರೆಗೆ ವ್ಯಾಪಿಸಿದ್ದ ಕತ್ತಲೆಯೊಂದೇ ಅಲ್ಲದೆ ಬೇರೇನೂ ಕಾಣಿಸುತ್ತಿರಲಿಲ್ಲ.

ಪುನಃ ಹೊದ್ದುಕೊಂಡು ಮಲಗಿದರು; ಕನಸು ಅವರ ನಿದ್ದೆಯನ್ನು ಹೊಡೆದೋಡಿಸಿತ್ತು. ತಾನು ಡಾಕ್ಟರನಾಗಬೇಕೆಂದು ಚಿಕ್ಕಂದಿನಿಂದಲೂ ಕನಸು ಕಟ್ಟಿದ್ದರು; ಆದರೆ ತಂದೆಯ ಸಾವು ಅವರ ಕನಸುಗಳನ್ನೆಲ್ಲ ಒಡೆದು ಚೂರು ಚೂರು ಮಾಡಿತ್ತು. ಪುನಃ ತನ್ನ ಕನಸು ನನಸಾದುದನ್ನು ಕನಸಿನಲ್ಲಿಯೇ ಕಂಡರು; ಜೊತೆಯಲ್ಲಿ ಶಾರದೆಯ ಚಿತ್ರ. ತನ್ನನ್ನು ಅರಸಿಕೊಂಡು ಬಂದ ಅವಳ ಭಾವಭಂಗಿ ಎಲ್ಲವನ್ನೂ ಎಣಿಸಿ ಅವರ ಹೃದಯ ಒಂದು ಕ್ಷಣಕ್ಕೆ ಆನಂದದಿಂದ ಅರಳಿತು.

ತನ್ನ ಆಸ್ಪತ್ರೆ; ತಾನು ಡಾಕ್ಟರನಾಗಿ ಹಳ್ಳಿಯ ಜನರ ಪ್ರೀತಿಯನ್ನು ಗಳಿಸುವುದು; ತಾನು ಮಾಡಬಹುದಾದ ಸೇವೆಯ ಚಿತ್ರವೆಲ್ಲವೂ ಕಣ್ಣಮುಂದೆ ಕಟ್ಟಿದಂತಾಯಿತು. ಅದು ಸಾಧ್ಯವಾಗುತ್ತಿದ್ದರೆ? ಸೇವೆಯಲ್ಲಿಯೇ ತಮ್ಮ ಬದುಕನ್ನು ಕಳೆಯುವುದು ಅವರ ಪಾಲಿಗೆ ಸಾಧ್ಯವಿರುತ್ತಿದ್ದರೆ? ತಮ್ಮೆಲ್ಲ ನೋವು-ದುಃಖಗಳನ್ನು ಮರೆತು ನೆಮ್ಮದಿಯಿಂದಿರುತ್ತಿದ್ದರು. ಅವರಿಗೆ ಉಳಿದಿರುವ ಬಯಕೆ ಎಂದರೆ ಅದೊಂದೇ.

ಶಾಂತಿಯ ಮದುವೆಯೊಂದು ಆಗಿಬಿಟ್ಟರೆ ಎಲ್ಲಾ ವಿಧವಾಗಿಯೂ ಅವರು ನಿಶ್ಚಿಂತರು. ಸುದೈವದಿಂದ ಆಕೆಗೆ ಯೋಗ್ಯ ವರ ದೊರೆತಿದ್ದ.

ಒಂದು ದಿನ ಹಾಗೆಯೇ ಕಳೆಯಿತು. ವಿಶೇಷವೇನೂ ನಡೆಯಲಿಲ್ಲ; ಶಾಂತಿಯನ್ನು ನೋಡಲು ಡಾಕ್ಟರರೂ ಬರಲಿಲ್ಲ. ಅವರು ಬರಬಹುದೆಂದು ಅವಳು ಕಾದು ಕುಳಿತಿದ್ದಳು. ಆದರೆ ಕೊನೆಗೆ ನಿರಾಶಳಾಗಬೇಕಾಯಿತು. ಎರಡನೇ ದಿನವೂ ಕಳೆಯಿತು. ಅಂದು ಶಾಂತಿ ಅಣ್ಣನ ಪ್ರಶ್ನೆಗೆ ಉತ್ತರ ಹೇಳಬೇಕು. ಅದು ಆಕೆಯ ಪಾಲಿಗೆ ಕಷ್ಟದ ವಿಷಯವೇನೂ ಆಗಿರಲಿಲ್ಲ. ಆದರೆ ಏನೆಂದು ಹೇಳುವುದು ?

ಒಮ್ಮೆಲೇ ಡಾಕ್ಟರರ ಮಾತು ನೆನಪಿಗೆ ಬಂದಿತು.

'ನಿನ್ನ ಅಣ್ಣ ಯಾರನ್ನೋ ಪ್ರೀತಿಸುತ್ತಿದ್ದಿರಬೇಕು. ಅವರ ಮುಖವೇ ಅದನ್ನು ಹೇಳುತ್ತಿದೆ ಎಂದು.' ಹೌದು ಅವರು ಹೇಳಿದ್ದು ನಿಜವಿರಬೇಕು.

ಇಲ್ಲವಾದರೆ ದಿನವಿಡೀ ಅಷ್ಟು ಉದಾಸೀನರಾಗಿರುವುದೇಕೆ? ಯಾವಾಗಲೂ ಮುಖದ ಮೇಲೆ ಚಿಂತೆಯ ಮೋಡ ಕವಿದೇ ಇರುತ್ತದೆ. ನನಗೂ ಒಳ್ಳೆಯ ಸಂದರ್ಭ; ಅದಕ್ಕೆ ಕಾರಣವೇನೆಂದು ಕೇಳಿಯೇ ಬಿಡುತ್ತೇನೆ. ನನ್ನ ಅತ್ತಿಗೆ ಬಾರದೆ ನಾನು ಮದುವೆಯಾಗುವುದಿಲ್ಲವೆಂದು ಹೇಳಿ ಬಿಡುವೆ; ಆಗ ಗುಟ್ಟು ತಿಳಿಯುವುದು.

ಅಂದಿನ ದಿನವೂ ಕಳೆಯಿತು. ಸಂಜೆಯ ವರೆಗೆ ಡಾಕ್ಟರರಿಗಾಗಿ ಕಾದು ಕಾದು ದಣಿದಳು; ಆದರೆ ಅವರು ಬರಲಿಲ್ಲ. ಆಕೆಗೆ ತುಂಬಾ ಬೇಸರವಾಯಿತು; ಜೊತೆಯಲ್ಲಿ ದುಃಖವೂ ಆಯಿತು.

'ಸ್ವಲ್ಪವೂ ಕನಿಕರವಿಲ್ಲದವರು; ಒಮ್ಮೆಯಾದರೂ ಬಂದು ಮುಖ ತೋರಿಸ ಬಾರದೇ?' ಎಂದುಕೊಂಡಳು. 'ನನ್ನ ಮರವೆಯಾಗಿರಬಹುದೇ ಅವರಿಗೆ? ಛೇ! ಇರಲಾರದು; ಎಂತಹ ಹುಚ್ಚಿ ನಾನು. ಇಷ್ಟರಲ್ಲಿಯೆ ಅವರ ಮೇಲೆ ಸಂಶಯ.' ಎಂದುಕೊಂಡು ತನ್ನನ್ನು ತಾನು ಸಂತೈಸಿಕೊಂಡಳು.

ಸಂಜೆಯಾಯಿತು, ಕತ್ತಲಾಯಿತು. ರಾಮರಾಯರು ಮನೆಗೆ ಹಿಂತಿರುಗಿದರು; ತಂಗಿಯ ಉತ್ತರವನ್ನು ಕೇಳುವ ಕುತೂಹಲದಿಂದಲೇ ಬಂದಿದ್ದರು.

"ಶಾಂತೂ" ಎಂದು ಮೃದುವಾಗಿ ಕರೆದರು. ಅಣ್ಣನ ಕರೆ ಕೇಳಿ ಅಡುಗೆ ಮನೆಯಲ್ಲಿದ್ದವಳು ಓಡಿ ಬಂದಳು.

"ವಿಚಾರ ಮಾಡಿದೆಯಾ ಶಾಂತೂ?"

"ಯಾವ ವಿಚಾರ?"

"ನಿನ್ನ ಮದುವೆಯ ವಿಚಾರ." ಅವಳ ಮುಖ ನಾಚಿಕೆಯಿಂದ ಆರಕ್ತವಾಯಿತು. ಅದನ್ನು ತೋರಗೊಡಲಿಲ್ಲ.

"ನನ್ನದೂ ಒಂದು ಮಾತಿದೆ ಅಣ್ಣಾ."

"ಏನದು?"

"ನನಗೆ ಅತ್ತಿಗೆ ಬಾರದೆ ನಾನು ಮದುವೆಯಾಗುವುದಿಲ್ಲ."

ತಂಗಿಯ ಮಾತನ್ನು ಕೇಳಿ ಅವರ ಮುಖದ ಮೇಲೆ ವಿಷಾದದ ನಗುವೊಂದು ಮಿಂಚಿ ಮಾಯವಾಯಿತು. ಒಂದು ಕ್ಷಣ ಸುಮ್ಮನೆ ಕುಳಿತರು. ಬಳಿಕ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟು ಆಕೆಯ ಕಡೆಗೆ ದೃಷ್ಟಿ ಹೊರಳಿಸಿದರು.

" ಅದು ಆಮೇಲಾಗುವುದು ಶಾಂತೂ, ಮೊದಲು ನಿನ್ನದೊಂದು ನಿಶ್ಚಯವಾಗಲಿ. "

" ಅದು ಸಾಧ್ಯವೇ ಇಲ್ಲಣ್ಣ, ಅತ್ತಿಗೆ ಬರುವ ಮೊದಲು ನಾನು ಮದುವೆಗೆ ಒಪ್ಪುವಂತಿಲ್ಲ. "

ಅವರು ಒಂದು ಕ್ಷಣ ವಿಚಾರ ಮಾಡಿದರು. ತಂಗಿಯೆದುರು ನಿಜ ಹೇಳಬೇಕೆನಿಸಿತು. " ಅದು ಸಾಧ್ಯವಿಲ್ಲ ಶಾಂತೂ, ನಾನು ದುರ್ದೈವಿ. ಈ ಜನ್ಮದಲ್ಲಿ ನನಗಾ ಭಾಗ್ಯವಿಲ್ಲ. "

ಶಾಂತಿ ಬೆಚ್ಚಿಬಿದ್ದಳು. ಇಂಥಾ ಉತ್ತರವನ್ನು ಆಕೆ ನಿರೀಕ್ಷಿಸಿರಲಿಲ್ಲ. ಓಡಿ ಬಂದು ಅಣ್ಣನಿಗೆ ತೀರಾ ಹೊಂದಿಕೊಂಡು ನಿಂತಳು. " ಹಾಗೇಕೆ ಹೇಳುವಿರಣ್ಣ; ಏನಾಗಿದೆ ನಿಮಕೆ ? ನಾನು ನಿಮ್ಮ ತಂಗಿಯಲ್ಲವೇ ? ನನ್ನೊಡನೆಯೂ ಹೇಳಬಾರದೇ ? "

ಅವರು ತಮ್ಮ ಕಣ್ಣುಗಳನ್ನು ಆಕೆಯ ಕಡೆಗೆ ತಿರುಗಿಸಿದರು ; ದೈನ್ಯ ತುಂಬಿತ್ತು ಅವುಗಳಲ್ಲಿ ; ಶಾಂತಿ ಮೆಲ್ಲನೆ ಅಣ್ಣನ ಕ್ರಾಪಿನಲ್ಲಿ ಬೆರಳಾಡಿಸುತ್ತ ನಿಂತಳು. ಅವರ ವೈರಾಗ್ಯದ ಮಾತು ಆಕೆಯ ಪಾಲಿಗೊಂದು ಸಮಸ್ಯೆಯೇ ಆಗಿತ್ತು.

ಅವರು ಉತ್ತರವೀಯಲಿಲ್ಲ. ಎಷ್ಟೋ ಹೊತ್ತಿನ ವರೆಗೆ ಸುಮ್ಮನೆ ಕುಳಿತರು ; ಸ್ವಲ್ಪ ಹೊತ್ತು ಕಳೆದು ಶಾಂತಿ ಅಣ್ಣನ ಮುಖದ ಕಡೆಗೆ ಕಣ್ಣು ಹೊರಳಿಸಿದಳು ; ಆಕೆಯಿಂದ ಸಹಿಸಲಾಗಲಿಲ್ಲ. ಅವರು ಅಳುತ್ತಿದ್ದರು ; ಆಕೆ ಹುಚ್ಚಿಯಂತೆ ಅಣ್ಣನನ್ನು ತಬ್ಬಿಕೊಂಡಳು.

" ಅಣ್ಣಾ, ಅಣ್ಣಾ ಏನಾಗಿದೆಯಣ್ಣಾ ನಿಮಗೆ ? ಹೀಗೇಕೆ ಮಾಡುತ್ತಿರುವಿರಿ ? ನಾನು ಬದುಕಿರುವುದೂ ನಿಮಗಿಷ್ಟವಿಲ್ಲವೇ ? " ಅದು ಆಕೆಯ ಹೃದಯದಾಳದಿಂದ ಹೊರಟ ಮಾತು. ಅಣ್ಣ ಅಳುತ್ತಿರುವುದನ್ನು ನೋಡಲು ಆಕೆಯಿಂದ ಸಾಧ್ಯವಿರಲಿಲ್ಲ.

ರಾಮರಾಯರು ಒಂದೇ ನಿಮಿಷದಲ್ಲಿ ತಮ್ಮನ್ನು ಸಾವರಿಸಿಕೊಂಡರು. ಮೊದಲ ಬಾರಿಗೆ ತಂಗಿಯೆದುರು ತಮ್ಮ ದೌರ್ಬಲ್ಯವನ್ನು ಅವರು ಪ್ರಕಟಗೊಳಿಸಿದ್ದರು. " ಶಾಂತೂ, ಅಣ್ಣನ ಮೇಲೆ ಪ್ರೀತಿಯಿರುವುದಾದರೆ ಈ ಮಾತನ್ನು ಇನ್ನೆಂದೂ ನನ್ನೆದುರು ಆಡಬೇಡ. "

ಆಕೆಯ ಬಾಯಿ ಮುಚ್ಚಿ ಹೋಯಿತು. ಮುಂದೆ ಮಾತನಾಡುವುದು ಆಕೆಯ ಪಾಲಿಗೆ ಸಾಧ್ಯವಿರಲಿಲ್ಲ. ಮಂಕುಹಿಡಿದವಳಂತೆ ಸುಮ್ಮನೆ ನಿಂತು ಬಿಟ್ಟಳು. ಅಷ್ಟು ಹೊತ್ತಿಗೆ ರಾಮರಾಯರು ಪೂರ್ತಿಯಾಗಿ ಎಚ್ಚತ್ತಿದ್ದರು.

" ನನ್ನ ಪ್ರಶ್ನೆಗೆ ಏನು ಉತ್ತರ ಶಾಂತೂ ? "

" ನಿಮ್ಮ ಇಚ್ಛೆ ಇದ್ದಂತೆ ಮಾಡಿ, ನನ್ನದೇನೂ ಅಡ್ಡಿಯಿಲ್ಲ.

" ಅಂದರೆ, ನಿನ್ನ ಒಪ್ಪಿಗೆಯೇ ಇದಕ್ಕೆ ? "

" ಹೂಂ " ಆಕೆಯ ದನಿ ಭಾರವಾಗಿತ್ತು; ಅಣ್ಣನ ಹೃದಯದ ನೋವು ಆಕೆಯ ಸಂತಸವನ್ನು ಕಸಿದೊಯ್ದಿತ್ತು.

ತಂಗಿಯ ಒಪ್ಪಿಗೆಯನ್ನು ಕೇಳಿ ರಾಮರಾಯರಿಗೆ ಆ ನೋವಿನಲ್ಲಿಯೂ ಸಂತೋಷವಾಗದಿರಲಿಲ್ಲ. ದೊಡ್ಡ ಹೊರೆಯೊಂದು ತಲೆಯ ಮೇಲಿಂದ ಇಳಿದು ಹೋದಂತಾಗಿತ್ತು. ಸ್ನೇಹದಿಂದ ಆಕೆಯ ಬೆನ್ನ ಮೇಲೆ ಕೈಯಾಡಿಸಿದರು.

" ಇಂದಿಗೆ ನನ್ನ ಚಿಂತೆ ಹರಿಯಿತು ಶಾಂತೂ. "

" ಆದರೆ ನನ್ನದು ಹರಿಯಲಿಲ್ಲಣ್ಣಾ. " ಆಕೆಯಿಂದ ಮುಂದೆ ಮಾತನಾಡ ಲಾಗಲಿಲ್ಲ ; ಅಣ್ಣನೆದೆಯಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

" ಅಳಬೇಡಮ್ಮ, ಇಂಥಾ ಸಂತೋಷದ ಹೊತ್ತಿನಲ್ಲಿಯೂ ಅಳುತ್ತಾ ರಿಯೆ, ನನ್ನ ಮುದ್ದು ತಂಗಿ? ಯಾವಾಗಲೂ ನಗುತ್ತಿರಬೇಕು." ಶಾಂತಿ ತಲೆ ಯನ್ನು ಮೇಲಕ್ಕೆತ್ತಲೇ ಇಲ್ಲ; ಹಾಗೆಯೇ ಅಳುತ್ತ ನಿಂತಳು

' ಅಣ್ಣನ ಊಟವಾಗಿಲ್ಲ ; ಅವರು ಹಸಿದಿರಬಹುದು. '

" ನೀವು ಊಟಕ್ಕೇಳಿಯಣ್ಣಾ, ತುಂಬಾ ಹೊತ್ತಾಯಿತು. "

ಗೋಪು ಆಗಲೇ ಅಡುಗೆ ಮನೆಯೊಳಕ್ಕೆ ಓಡಿ ಬಂದ.

" ಹಸಿವಾಗುತ್ತದಕ್ಕ, ಏನು ಇಂದು ಉಪವಾಸವೇ ಇರಬೇಕೇ ? "

" ಬಾ ಗೋಪೂ, ಮಣೆ ಹಾಕಿದೆ, ಕುಳಿತುಕೊ. ಇಷ್ಟು ಹೊತ್ತು ಕರೆಯಲಿಲ್ಲವೇಕೆ ? ಎಲ್ಲಿಗೆ ಹೋಗಿದ್ದೆ ? "

" ನಾನು ಎಲ್ಲಿಗೆ ಹೋದರೆ ನಿನಗೇನು ಹೇಳು, ನೀನಂತೂ ಹೋಗು ವವಳು. "

" ಎಲ್ಲಿಗೆ ? "

" ಮತ್ತೆಲ್ಲಿಗೆ, ಗಂಡನ ಮನೆಗೆ ! ಇಷ್ಟು ಹೊತ್ತು ಅದನ್ನೇ ಅಲ್ಲವೇ

ಮಾತನಾಡುತ್ತಿದ್ದುದು. ” ಆಕೆಗೆ ತಮ್ಮನ ಮಾತು ಕೇಳಿ ನಾಚಿಕೆ ಎನಿಸಿತು.

“ ಇಲ್ಲ ಗೋಪು, ನಿಮ್ಮನ್ನೆಲ್ಲ ಬಿಟ್ಟು ಹೋಗುವಷ್ಟು ಕೆಟ್ಟವಳೇ ನಾನು ? ”

“ ಹಾಗಾದರೆ ಇಲ್ಲಿಯೇ ಇರುವಿಯಾ ಶಾಂತಕ್ಕ ? ”

“ ಹೌದು ಗೋಪು, ಯಾವಾಗಲೂ ಇಲ್ಲಿಯೇ ನಿನ್ನ ಹತ್ತಿರವೇ ಇರುವೆ. ”

ಸ್ನೇಹದಿಂದ ತಮ್ಮನ ಬೆನ್ನ ಮೇಲೆ ಕೈಯಾಡಿಸಿದಳು. ಆಕೆಯ ಹೃದಯ ಅಭಿಮಾನದಿಂದ ಉಬ್ಬಿಹೋಗಿತ್ತು. ಅಷ್ಟು ಹೊತ್ತಿಗೆ ರಾಮರಾಯರೂ ಬಂದರು; ಶಾಂತಾ ಅಣ್ಣ-ತಮ್ಮಂದಿರಿಬ್ಬರಿಗೂ ಬಡಿಸಿ, ತಾನೂ ಉಂಡಳು.

ಒಳಗಿನ ಕೆಲಸವನ್ನೆಲ್ಲ ಮುಗಿಸಿ ಬಂದು ಚಾಪೆಯ ಮೇಲೆ ಬಿದ್ದು ಕೊಂಡಳು. ತನ್ನಣ್ಣನ ಜೀವನದ ಯಾವುದೋ ದುರಂತ ಚಿತ್ರವೊಂದು ಆಕೆಯ ಕಣ್ಣ ಮುಂದೆ ಕಟ್ಟಿದಂತಿತ್ತು. ಅಣ್ಣನನ್ನು ಅಷ್ಟು ನೋಯಿಸಿದ ವಿಷಯ ಯಾವುದಿರಬಹುದು? ಅವರು ಹೇಳಿದ್ದೇ ನಿಜವಿರಬೇಕು. ಅಣ್ಣ ಯಾರನ್ನಾದರೂ ಪ್ರೀತಿಸಿದ್ದಿರಬೇಕು. ಅಂಥವಳು ಯಾರಿರಬಹುದು ? ಅದನ್ನ ವಳು ಈವರೆಗೂ ವಿಚಾರ ಮಾಡಿರಲಿಲ್ಲ. ಆದರೆ ಈಗ ವಿಚಾರ ಮಾಡುವ ಅವಶ್ಯಕತೆ ಬಂದಿತ್ತು.

ಕಳೆದು ಹೋದ ಒಂದೊಂದೇ ಘಟನೆಗಳನ್ನು ಮೆಲುಕು ಹಾಕತೊಡಗಿ ದಳು. ಅಂದು ಅಣ್ಣ ಒಮ್ಮೆಲೇ ಪಂಜಕ್ಕೆ ಹೊರಟಿದ್ದು, ಶಾರದೆಯನ್ನು ಕಂಡು ಬರಲು ಹೋದಾಗ ಆಕೆ ಅತ್ತದ್ದು, ದಾರಿಯಲ್ಲಿ ಅಣ್ಣ ಬಡಬಡಿಸಿದ್ದು— ಇವು ಗಳಿಗೆಲ್ಲ ಸಂಬಂಧವನ್ನು ಕಲ್ಪಿಸಿದಳು. ಅಣ್ಣ ಶಾರದೆಯನ್ನು ಪ್ರೀತಿಸಿರಬಹುದೇ? ಹಾಗಿದ್ದರೆ ನನಗದು ತಿಳಿಯದಿರುತ್ತಿತ್ತೇ? ಎಲ್ಲವೂ ಗುಟ್ಟಾಗಿ ನಡೆಯಿತೆ? ಅದೇ ಸರಿ, ಎಂದಿತು ಆಕೆಯ ಮನಸ್ಸು. ಇಲ್ಲವಾದರೆ ಆಕೆಯ ಮದುವೆಯ ದಿನವೇ ಹೊರಡುವ ಅವಶ್ಯಕತೆಯೇನಿತ್ತು? ನೋವನ್ನು ಸಹಿಸಲಾಗದೆ ಅವರು ಹೊರಟಿದ್ದರು.

ಆದರೆ ಅದನ್ನವರು ಗುಟ್ಟಾಗಿ ಇಡುವ ಅಗತ್ಯವಿರಲಿಲ್ಲವಲ್ಲ. ಇಬ್ಬರ ಜಾತಿಯೂ ಒಂದೇ. ಮದುವೆಯ ಪ್ರಸ್ತಾಪವನ್ನು ಎತ್ತಿದ್ದರೆ ಆಕೆಯ ತಂದೆ ಇಲ್ಲವೆನ್ನುತ್ತಿದ್ದರೇ? ಆದರೂ ಹೀಗೇಕಾಯಿತು? ಎಲ್ಲವೂ ವಿಧಿಯಿಚ್ಛೆ.

ಯಾರೇನು ಮಾಡಲು ಸಾಧ್ಯ? ಹಾಗಾದರೆ ಅಣ್ಣ ಮದುವೆಯಾಗುವುದು ಇನ್ನು ಸಾಧ್ಯವಿಲ್ಲವೇ? ಅವರ ವರ್ತನೆಯನ್ನು ಕಂಡರೆ ಅದು ಸಾಧ್ಯವಿಲ್ಲ ವೆಂದೇ ಕಾಣಿಸುತ್ತದೆ. ಆಕೆಯ ಮನಸ್ಸು ತುಂಬಾ ಅಧೀರವಾಯಿತು.

ವಿಚಾರಸರಣಿ ಡಾಕ್ಟರರ ಕಡೆ ಹರಿಯಿತು. ಎರಡು ದಿನಗಳಿಂದ ಅವರೂ ಬಂದಿರಲಿಲ್ಲ. ಅವರಾದರೂ ಬಂದಿದ್ದರೆ ಮನಸ್ಸಿಗೆ ಕೊಂಚ ಸಮಾಧಾನ ದೊರೆಯುತ್ತಿತ್ತು. ಅವರೂ ಇಲ್ಲ. ನನ್ನ ಮೇಲೆ ಬೇಸರವಾಗಿರಬಹುದೇ? ಅಂಥಾ ತಪ್ಪನ್ನೇನು ಮಾಡಿರುವೆ ನಾನು?....ನಾಳೆ ಬರಬಹುದು....ಬೆಳಿಗ್ಗೆಯೇ ಬರಬಹುದು ಎಂದು ಮನಸ್ಸಿಗೆ ಸಮಾಧಾನ ತಂದುಕೊಂಡು ಮಲಗಿದಳು. ಬೆಳಿಗ್ಗೆ ಎಚ್ಚರವಾಗುವಾಗ ಬೆಳ್ಳಗೆ ಬೆಳಕು ಹರಿದಿತ್ತು. ಅವಸರವಾಗಿ ಎದ್ದು ಅಡುಗೆಯ ಕೆಲಸಕ್ಕೆ ತೊಡಗಿದಳು.

ರಾಮರಾಯರು ಎಂದಿನಂತೆ ಊಟ ಮುಗಿಸಿ ಆಸ್ಪತ್ರೆಯ ಕಡೆಗೆ ನಡೆ ದರು. ಅವರ ಮುಖದ ಮೇಲೆ ಯಾವ ಬದಲಾವಣೆಯೂ ಕಾಣಿಸುತ್ತಿರಲಿಲ್ಲ. ಎಂದಿನಂತೆ ಶಾಂತವಾಗಿಯೇ ಇದ್ದರು. ಹಿಂದಿನ ರಾತ್ರಿ ಏನೂ ನಡೆಯಲಿಲ್ಲ ವೆಂಬಂತೆ ಇದ್ದರು. ಅವರ ಸಂಯಮವನ್ನು ಕಂಡು ಶಾಂತಿಗೆ ಆಶ್ಚರ್ಯವಾಗ ದಿರಲಿಲ್ಲ. "ಅಷ್ಟು ನೋವನ್ನು ಸಹಿಸಿ ನೆಮ್ಮದಿಯನ್ನು ಉಳಿಸಿಕೊಳ್ಳುವುದು ನಿಮಗೆ ಮಾತ್ರ ಸಾಧ್ಯ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು.

ಅವರು ಹೊರಟು ಹೋದರು. ಶಾಂತಿಯ ಮನಸ್ಸು ಪುನಃ ಡಾಕ್ಟರರ ಕಡೆಗೆ ಹರಿಯಿತು. ಇಂದು ಬಾರದಿರುವುದಿಲ್ಲವೆಂದು ಗಟ್ಟಿಮಾಡಿಕೊಂಡಳು. ಹಾಗಾಗಿ ಮಧ್ಯಾಹ್ನದ ಅಡುಗೆಯ ಕೆಲಸಕ್ಕೂ ತೊಡಗಿರಲಿಲ್ಲ. ಬಾಗಿಲ ಬಳಿ ಯಲ್ಲಿ ಅವರ ದಾರಿ ಕಾಯುತ್ತ ನಿಂತಳು. ಗಂಟೆ ಹತ್ತಾಯಿತು, ಹನ್ನೊಂದಾ ಯಿತು. ಆದರೂ ಅವರು ಬರಲಿಲ್ಲ. ಆಕೆಗೆ ನಿರಾಶೆಯಾಯಿತು, ದುಃಖ ವಾಯಿತು. ಕಣ್ಣುಗಳು ಹನಿಗೂಡಿದುವು. ಭಾರವಾದ ಹೆಜ್ಜೆಗಳನ್ನೆಳೆದು ಕೊಂಡು ಅಡುಗೆಯ ಮನೆಯತ್ತ ಸಾಗಿದಳು. ಹೇಗಾದರೂ ಅಡುಗೆಯಾಗ ಬೇಕಲ್ಲ!

ನಿಜವಾಗಿಯೂ ಅವರಿಗೆ ಬೇಸರವಾಗಿದೆ. ತನ್ನ ಆತುರವನ್ನು ಆಕೆ ಯಿಂದ ತಡೆದುಕೊಳ್ಳಲಾಗಲಿಲ್ಲ. ಬೇಗನೆ ಅಡುಗೆಯ ಕೆಲಸವನ್ನು ಪೂರೈಸಿ ಅಣ್ಣನನ್ನು ಊಟಕ್ಕೆ ಕರೆಯುವ ಎಂದು ಆಸ್ಪತ್ರೆಯ ಕಡೆಗೆ ಹೊರಟಳು.

ಆಸ್ಪತ್ರೆ ಸಮೀಪಿಸಿದಂತೆ ಆಕೆಯ ಎದೆ ಜೋರಾಗಿ ಹೊಡೆದುಕೊಳ್ಳ ಲಾರಂಭಿಸಿತು. ಆದರೂ ಧೈರ್ಯ ಮಾಡಿಕೊಂಡು ಮುಂದುವರಿದಳು.

ಮೆಲ್ಲನೆ ಆಸ್ಪತ್ರೆಯ ಮೆಟ್ಟಿಲೇರಿದಳು. ಎದುರಿನ ಕೋಣೆಯಲ್ಲಿ ಡಾಕ್ಟರರು ಕುಳಿತುಕೊಂಡು ರೋಗಿಗಳನ್ನು ವಿಚಾರಿಸುತ್ತಿದ್ದರು. ಆಕೆಗೆ ತನ್ನ ಆತುರವನ್ನು ತಡೆದುಕೊಳ್ಳಲಾಗಲಿಲ್ಲ. ಅವರ ಕಡೆಗೆ ಕಣ್ಣು ಹೊರಳಿಸಿದಳು. ಅದೇ ಹೊತ್ತಿಗೆ ಅವರೂ ಆಕೆಯನ್ನು ನೋಡಿದರು. ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಮುಗುಳು ನಕ್ಕರು. ಶಾಂತಿ ಒಂದುಕ್ಷಣ ನಿಂತು ದೈನ್ಯದಿಂದ ಅವರನ್ನೇ ನೋಡಿದಳು. 'ಇಷ್ಟು ಬೇಗ ನನ್ನ ಮರವೆಯಾಯಿತೇ? ಒಮ್ಮೆಯಾದರೂ ಬಂದು ಹೋಗಬಾರದಿತ್ತೇ?' ಎಂದು ಬೇಡಿಕೊಳ್ಳುವಂತಿತ್ತು ಆ ನೋಟ.

ಅವರಿಗೂ ಅದು ಅರ್ಥವಾಗಿರಬೇಕು. ಆದರೆ ಅಲ್ಲಿ ಯಾವುದನ್ನೂ ಮಾತನಾಡುವಂತಿರಲಿಲ್ಲ. ಡಾಕ್ಟರರು ಎದ್ದು ಹೊರಗೆ ಬಂದರು.

"ಏನು ಬಂದೆ ಶಾಂತೂ?"

"ಅಣ್ಣನನ್ನು ಊಟಕ್ಕೆ ಕರೆಯಲು."

ಆಕೆಯ ಮಾತು ಸುಳ್ಳೆಂದು ಚಿಕ್ಕ ಮಗುವಿಗೂ ತಿಳಿಯುವಂತಿತ್ತು. ಡಾಕ್ಟರರು ಮೃದುವಾಗಿ ಆಕೆಯನ್ನು ನೋಡಿ ನಕ್ಕರು. 'ಸಂಜೆಗೆ ಬರುವೆ' ಎಂದು ಹೇಳುವಂತೆ ಸಂಜ್ಞೆ ಮಾಡಿದರು. ಅಷ್ಟು ಹೊತ್ತಿಗೆ ರಾಮರಾಯರೂ ಹೊರಗೆ ಬಂದಿದ್ದರು.

"ಏನು ಬಂದೆ ಶಾಂತೂ?"

"ಊಟಕ್ಕೆ ಬರುವುದಿಲ್ಲವೇನಣ್ಣ? ಒಂದು ದಿನವಾದರೂ ಬಿಸಿಬಿಸಿಯಾಗಿದ್ದುದನ್ನು ಊಟ ಮಾಡಬಾರದೇ?"

"ಉಳಿದಿಬ್ಬರಿಗೆ ಮದ್ದು ಕೊಟ್ಟು ಈಗಲೇ ಬರುವೆನಮ್ಮ, ನೀನು ಹೋಗು" ಎಂದು ಒಳಗೆ ನಡೆದುಬಿಟ್ಟರು.

ಶಾಂತಿ ಮತ್ತೊಮ್ಮೆ ಡಾಕ್ಟರನ್ನು ಕಂಡು ನಕ್ಕು ಮನೆಯ ಕಡೆಗೆ ಹೊರಟಳು. ಆಕೆ ಬಂದ ಕೆಲಸವಾಗಿತ್ತು. ಬರುವಾಗ ಇದ್ದ ಔದಾಸೀನ್ಯ ಹೋಗುವಾಗ ಇದ್ದಿರಲಿಲ್ಲ. ಹೃದಯ ಆನಂದದಿಂದ ಉಬ್ಬಿ ಹೋಗಿತ್ತು. ಎರಡು ದಿನ ಕಾಣದ ತನ್ನ ಹೃದಯೇಶ್ವರರನ್ನು ಕಂಡು ಬಂದಿದ್ದಳಲ್ಲವೇ? ಅರ್ಧ ಗಂಟೆ ಕಳೆಯಬೇಕಾದರೆ ರಾಮರಾಯರು ಬಂದು ಉಂಡು ಹೋದರು. ಶಾಂತಿ

ಅವಸರವಾಗಿ ಊಟ ಮುಗಿಸಿದಳು. ಮತ್ತೆ ಕೆಲಸವಿಲ್ಲ; ಅವರು ಬರುವುದನ್ನೇ ಕಾಯುತ್ತ ಕುಳಿತಳು.

ಸಂಜೆಯ ಉಪಹಾರಕ್ಕೆ ಅವಲಕ್ಕಿ ಒಗ್ಗರಿಸಿದಳು. ಕಾಫಿಗೆ ನೀರಿಟ್ಟಳು. ಗಂಟೆ ಮೂರು ಕಳೆದಿತ್ತು. ಕ್ಷಣಕ್ಷಣಕ್ಕೂ ಆಕೆಯ ಆತುರ ಹೆಚ್ಚುತ್ತಿತ್ತು. ಆತುರದಿಂದ ತನ್ನ ಹೃದಯವನ್ನರಳಿಸಬಲ್ಲ ಹೆಜ್ಜೆಯ ಸದ್ದನ್ನು ನಿರೀಕ್ಷಿಸುತ್ತಿದ್ದಳು....ಮನೆಯೆದುರು ಬೂಟ್ಸಿನ ಸದ್ದು ಕೇಳಿಸಿತು. ಶಾಂತಿ ವಿಳಂಬ ಮಾಡದೆ ಓಡಿ ಬಂದು ಬಾಗಿಲು ತೆರೆದಳು. ಎದುರಿಗೆ ಆಕೆಯ ಇಷ್ಟದೈವ ಪ್ರಸನ್ನವಾಗಿ ನಿಂತಿದ್ದರು !

" ಬನ್ನಿ " ಎಂದು ಮುಗುಳು ನಗುತ್ತ ಹೊಸ ಉತ್ಸಾಹದಿಂದ ಅವರನ್ನು ಸ್ವಾಗತಿಸಿದಳು.

ಅವರೆದುರು ಅಲ್ಲೇ ನಿಂತುಕೊಂಡಿರಲು ಸಾಧ್ಯವಾಗಲಿಲ್ಲ. ಬೆನ್ನು ತಿರುಗಿಸಿಕೊಂಡು ಬಳಕ್ಕೆ ನಡೆದಳು. ಆಕೆಯ ಚಂಚಲ ನಡಿಗೆ ಮನದೊಳಗಿನ ಉತ್ಸಾಹವನ್ನು ಹೊರಗೆಡಹುವಂತಿತ್ತು.

ಒಳಕೋಣೆಯಲ್ಲಿ ಕುರ್ಚಿಯೊಂದು ಇಟ್ಟಿಷ್ಟರು ಎದುರಿಗೆ ಚಿಕ್ಕ ಮೇಜು. ಮೇಜಿನ ಮೇಲೆ ಕಸೂತಿ ಹಾಕಿದ ಬಟ್ಟೆ ಹಾಸಿತ್ತು. ' ಇದೆಲ್ಲವೂ ತನಗಾಗಿ.' ಅವರು ಮನಸ್ಸಿನಲ್ಲಿಯೇ ನಕ್ಕರು. ಅವರು ಮಾತನಾಡದೆ ಕುರ್ಚಿಯನ್ನೆಳೆದುಕೊಂಡು ಕುಳಿದರು.

ಒಂದೈದು ನಿಮಿಷ ಕಳೆದು ವೈಯ್ಯಾರ ಬೀರುತ್ತ ಕೈಯ್ಯಲ್ಲಿ ಕಾಫಿ ಲೋಟ ಮತ್ತು ತಿಂಡಿಯ ತಟ್ಟೆಯನ್ನು ಹಿಡಿದುಕೊಂಡು ಶಾಂತಿ ಬಂದಳು.

" ನೀನು ಕಾಫಿ ಕುಡಿದೆಯಾ ಶಾಂತೂ ?"

" ನಾನು ಆಮೇಲೆ ಕುಡಿಯುವೆ, ನೀವು ಕುಡಿಯಿರಿ. "

" ಅದಾಗದು, ನಾನು ಕುಡಿಯುವುದು, ನೀನು ನಿಂತು ನೋಡುವುದೇ ? "

" ನಾನೂ ನೀವೂ ಬೇರೆಯೇ ? " ಎಂದು ಕೇಳಬೇಕೆನಿಸಿತು. ಆದರೆ ಕೇಳಲಿಲ್ಲ. ನೆಟ್ಟ ನೋಟದಿಂದ ಅವರನ್ನು ನೋಡುತ್ತ ನಿಂತಳು. ಡಾಕ್ಟರರ ಕುರ್ಚಿಯ ಕೈಗೆ ಆತುಕೊಂಡು ನಿಂತಿದ್ದಳು. ತನಗರಿಯದಂತೆ ಕೈಗಳು ಅವರ ಕೊರಳ ಸುತ್ತ ಬಳಸಿದುವು. ಮೃದುವಾಗಿ ಅವರೆದೆಯ ಮೇಲೆ ಕೈಯಾಡಿಸಿದಳು.

" ಸಿಟ್ಟೇ ನನ್ನ ಮೇಲೆ ? "

" ಹಾಗೇಕೆ ಕೇಳುವಿ ಶಾಂತೂ ? " ಮೃದುವಾಗಿ ಅವಳ ಕೈಯನ್ನೆತ್ತಿ ತುಟಿಗೊತ್ತಿಕೊಂಡರು.

" ಮತ್ತೆ ಕಾಫಿ ಕುಡಿಯುವುದಿಲ್ಲವೇಕೆ ? "

" ನೀನೂ ನನ್ನ ಜೊತೆಯಲ್ಲಿ ಕುಡಿದರೆ ಮಾತ್ರ ನಾನು ಕುಡಿಯುವುದು."

" ನೀವು ಕುಡಿದರೆ ಸಾಕು ನನ್ನ ಹೊಟ್ಟೆ ತುಂಬುವುದು. "

ಅವರ ಬಾಯಿ ಕಟ್ಟಿಹೋಯಿತು. ಇಬ್ಬರೂ ಎಷ್ಟೋ ಹೊತ್ತಿನ ವರೆಗೆ ಮೌನವಾಗಿಯೇ ಇದ್ದರು. ಕೊನೆಗೆ ಶಾಂತಿಯೇ ತಟ್ಟೆಯಲ್ಲಿದ್ದ ತಿಂಡಿಯನ್ನು ಕೈಗೆ ತೆಗೆದುಕೊಂಡು ಅವರ ಬಾಯಿಗೆ ತುಂಬಿಸಿದಳು. ಕಾಫಿ ಕುಡಿದಾಯಿತು. ಶಾಂತಿಯ ಕೈಯೆಲ್ಲ ಎಂಜಲಾಗಿತ್ತು. " ಚಿಕ್ಕ ಮಕ್ಕಳಂತೆ ಎಷ್ಟು ಹಠ ಮಾಡುತ್ತಿರುವಿರಿ ! " ಎಂದು ಅವರ ಕೆನ್ನೆ ತಟ್ಟಿ ಲೋಟ ಮತ್ತು ತಟ್ಟೆಯನ್ನು ಹಿಡಿದುಕೊಂಡು ಹೋದಳು. ಶಾಂತಿಯ ಒಂದೊಂದು ಮಾತೂ ಅವರ ಹೃದಯವನ್ನು ಅರಳಿಸುತ್ತಿತ್ತು. ಅವಳ ಸಹವಾಸ ಅವರಲ್ಲಿ ಹೊಸ ಚೈತನ್ಯವನ್ನು ತುಂಬಿಸಿತ್ತು. ಕೆಲವು ನಿಮಿಷ ಕಳೆದು ಶಾಂತಿ ಮತ್ತೆ ಬಂದಳು. ಬಂದವಳು ಅವರ ತೀರ ಸಮೀಪಕ್ಕೆ ಬಂದು ನಿಲ್ಲಲಿಲ್ಲ.

" ಸ್ವಲ್ಪವೂ ಕನಿಕರವಿಲ್ಲ ನಿಮಗೆ ! "

" ಏಕೆ ಶಾಂತೂ ? "

" ಅಬ್ಬಾ ! ಅದನ್ನು ಹೇಳಬೇಕೆ ನಾನು ? ಎರಡು ದಿನಕ್ಕೆ ಒಮ್ಮೆಯಾದರೂ ಬಂದು ಹೋಗಬಾರದಿತ್ತೇ ? ಹೀಗೇ ಏನು ರೋಗಿಗಳನ್ನು ನೋಡಿಕೊಳ್ಳುವುದು ? "

" ಇಷ್ಟು ಚೆನ್ನಾಗಿ ನಿನಗೆ ಮಾತನಾಡಲು ಬರುವುದೆಂದು ನನಗೆ ತಿಳಿದೇ ಇರಲಿಲ್ಲ. ಮೊದಲ ದಿನ ಬಂದಾಗ ಮೂಕಿ ಎಂದು ತಿಳಿದುಕೊಂಡಿದ್ದೆ."

" ಈಗ ಚೆನ್ನಾಗಿ ತಿಳಿಯಿತೇ ಎಂಥವಳೆಂದು ? "

" ಬೇಕಾದ್ದಕ್ಕಿಂತ ಚೆನ್ನಾಗಿ ತಿಳಿಯಿತು. "

" ಏನೆಂದು ? "

" ನನ್ನನ್ನು ಹಿಡಿತದಲ್ಲಿಟ್ಟುಕೊಂಡು ಆಳಬಲ್ಲ ಧಿಟ್ಟೆಯೆಂದು. "

ಶಾಂತಿ ಓಡಿ ಬಂದು ಅವರನ್ನು ತಬ್ಬಿಕೊಂಡಳು. ಅವರ ಮುಖವನ್ನು

ತನ್ನೆದೆಗೆ ಒತ್ತಿಕೊಂಡಳು. " ಹಾಗೆ ಹೇಳಿ ನನ್ನ ಅಪಮಾನ ಮಾಡು ತ್ತಿರುವಿರಾ ? "

" ಹಾಗೇಕೆ ಹೇಳುವಿ ಶಾಂತೂ ? ನನ್ನಿಂದ ನಿನ್ನ ಅಪಮಾನ ಮಾಡು ವುದು ಸಾಧ್ಯವೇ ? "

" ಮತ್ತೆ ಹಾಗೇಕೆ ಹೇಳಿದಿರಿ ? ನಿಮ್ಮನ್ನಾಳುವ ಅಧಿಕಾರ ನನಗೆ ಬೇಕಾಗಿಲ್ಲ. ನಿಮ್ಮ ಸೇವೆ ಮಾಡುವ ಭಾಗ್ಯ ಬದುಕಿರುವಷ್ಟು ಕಾಲ ನನಗೆ ದೊರೆತರೆ ಸಾಕು. " ಕಣ್ಣು ಹನಿಗೂಡಿದ್ದುವು. ತುಂಬಿದ ಕಣ್ಣುಗಳಿಂದ ಅವ ರನ್ನೇ ನೋಡುತ್ತ ನಿಂತಳು.

" ನಾನು ಸುಳ್ಳು ಹೇಳುತ್ತಿಲ್ಲ. ಈಗಾಗಲೇ ನನ್ನ ಹೃದಯದ ಮೇಲೆ ಅಧಿಕಾರ ನಡೆಸುತ್ತಿಲ್ಲವೇ ನೀನು ? "

" ನನ್ನನ್ನು ಕ್ಷಮಿಸಿ. ಇನ್ನೆಂದೂ ಹಾಗೆ ಮಾಡುವುದಿಲ್ಲ. ದಾಸಿಯಂತೆ ನಿಮ್ಮ ಕಾಲ ಬುಡದಲ್ಲಿರುವುದೇ ನನಗೆ ಸಂತೋಷ. "

" ಇಲ್ಲ ಶಾಂತೂ, ನೀನು ದಾಸಿಯಲ್ಲ. ನನ್ನ ಹೃದಯದ ಮೇಲೆ ಈಗಾಗಲೇ ಎಷ್ಟೊಂದು ಅಧಿಕಾರ ನಡೆಸುತ್ತಿರುವೆ— ದಾಸಿಯಿಂದಾಗುವ ಕೆಲ ಸವೇ ಅದು ? ನೀನು ರಾಣಿ. ನನ್ನ ಮನೆಯನ್ನು ಬೆಳಗಬಲ್ಲ ರಾಣಿ. ನಿನ್ನನ್ನು ದಾಸಿಯೆಂದು ಕರೆದು ಅಪಮಾನಪಡಿಸಲಾರೆ ಚಿನ್ನ. "

ಶಾಂತಿಯಿಂದ ತನ್ನ ಹೃದಯದ ಉದ್ವೇಗವನ್ನು ತಡೆದುಕೊಳ್ಳಲಾಗ ಲಿಲ್ಲ. ಅವರೆದೆಯಲ್ಲಿ ಮುಖ ಮುಚ್ಚಿಕೊಂಡು ಅತ್ತಳು. ಅದು ಸಂತೋ ಷದ ಅಳು. ಅಷ್ಟೊಂದು ಸಂತಸವನ್ನು ಒಮ್ಮೆಗೇ ಸಹಿಸುವುದು ಅವಳಿಂದ ಸಾಧ್ಯವಿರಲಿಲ್ಲ.

" ಅಳುವುದೇಕೆ ಶಾಂತೂ ? " ಆದರೆ ಅವಳು ಅಳುತ್ತಿರಲಿಲ್ಲ. ಕಣ್ಣಲ್ಲಿ ಒಂದೇಸವನೆ ನೀರು ಹರಿಯುತ್ತಿದ್ದರೂ ನಗುತ್ತಿದ್ದಳು.

" ಅಳುತ್ತಿರುವೆನೇ ನಾನು; ಹಾಗೆಂದು ಯಾರು ಹೇಳಿದರು ? ಅಷ್ಟೂ ತಿಳಿಯುವುದಿಲ್ಲವೇ ನಿಮಗೆ ? "

" ಹಾಗಾದರೆ ಈ ಕಣ್ಣೀರು ? "

" ದುಃಖವಾದಾಗ ಮಾತ್ರ ಅಳುವುದು ನಿಮಗೆ ಗೊತ್ತು. ಸಂತೋಷ ವನ್ನು ತಡೆಯಲು ಸಾಧ್ಯವಾಗದಾಗಲೂ ಕಣ್ಣೀರು ಬರುವುದಿಲ್ಲವೇ ? ನನ್ನದು

ದುಃಖದ ಕಣ್ಣೀರಲ್ಲ ಸ್ವಾಮೀ, ಸಂತಸದ ಅಮೃತ ಬಿಂದುಗಳು."

"ಅದೆಂತಹ ಸಂತೋಷ ಶಾಂತೂ ?"

"ನಿಮಗದು ಹೇಗೆ ತಿಳಿಯಬೇಕು ? ರಾಜರಿಗೆ ರತ್ನದ ಕಾಣಿಕೆಗಳು ಬೇಕಾದಷ್ಟು ದೊರೆಯುತ್ತವೆ. ಅವರಿಗದು ವಿಶೇಷವಲ್ಲ. ಆದರೆ ಬೀದಿಯ ಭಿಕ್ಷುಕಿಯೊಬ್ಬಳಿಗೆ ರತ್ನರಾಶಿಯ ಮೇಲೆ ಕೂಡುವ ಸೌಭಾಗ್ಯ ದೊರೆತರೆ ಅವ ಳಿಗೆಷ್ಟು ಸಂತಸವಾಗಬಹುದೆಂದು ಊಹಿಸಬಲ್ಲಿರಾ ?"

"ಹಾಗೇಕೆ ಹೇಳುವಿ ಚಿನ್ನ, ನೀನು ಭಿಕ್ಷುಕಿಯೆ ?"

"ಈವರೆಗೆ ಆಗಿದ್ದೆ. ಆದರೆ ಈಗ ಭಿಕ್ಷುಕಿಯೆಂದು ನನ್ನನ್ನು ಕರೆಯುವ ಧೈರ್ಯ ಯಾರಿಗಿದೆ ? ನೀವೇ ಹೇಳಿದಿರಲ್ಲ, ನಾನು 'ರಾಣಿ' ಎಂದು. ನೀವು ಸುಳ್ಳು ಹೇಳುವಿರೇನು ? ರಾಣಿಯನ್ನು ಭಿಕ್ಷುಕಿಯೆಂದು ಕರೆಯುವ ಧೈರ್ಯ ಯಾರಿಗಿದೆ ?"

ಅವರೆದೆಯಲ್ಲಿ ಹೊಕ್ಕು ಅಡಗಿಕೊಳ್ಳುವಂತೆ ಅವರನ್ನಂಟಿಕೊಂಡಿದ್ದ ಳಾಕೆ. ಅವರು ಮೃದುವಾಗಿ ಅವಳ ಬೆನ್ನಮೇಲೆ ಕೈಯಾಡಿಸುತ್ತಿದ್ದರು. ಇಬ್ಬರ ಆತ್ಮಗಳೂ ಐಕ್ಯಗೊಂಡಿದ್ದುವು. ಇಬ್ಬರಿಗೂ ಎಚ್ಚರಿರಲಿಲ್ಲ. ಅನು ಭವದಿಂದಲೇ ತಿಳಿಯಬೇಕಾದ ಮಧುರ ಅನುಭವ ಅದು.

ಅವರ ಬಾಹುಬಂಧನದಿಂದ ಬಿಡಿಸಿಕೊಳ್ಳುವ ಶಕ್ತಿಯೇ ಅವಳಲ್ಲಿದ್ದಿಲ್ಲ. ತೀರಾ ಶಕ್ತಿಹೀನಳಂತೆ ಬಿದ್ದುಕೊಂಡಿದ್ದಳು.

"ಉಸಿರು ಕಟ್ಟಿಹೋಯಿತಲ್ಲ. ನನ್ನನ್ನು ಬಿಡುವುದಿಲ್ಲವೇ ?"

"ನಿನ್ನನ್ನು ಹೀಗೆಯೇ ಸದಾಕಾಲವೂ ಹಿಡಿದುಕೊಂಡಿರಬೇಕೆಂದು ಬಯಕೆಯಾಗುತ್ತಿದೆ ಶಾಂತೂ."

ಅವಳು ಮೆಲ್ಲನೆ ಅವರ ಕೈಗಳಿಂದ ಬಿಡಿಸಿಕೊಂಡು ಎದ್ದು ನಿಂತಳು.

"ನನಗೆಲ್ಲವೂ ಗೊತ್ತು. ಎರಡು ದಿನಗಳಿಂದ ಮುಖವನ್ನೇ ತೋರಿಸ ದವರು ಮಾತನಾಡಲು ಚೆನ್ನಾಗಿ ಕಲಿತಿರುವಿರಿ."

"ನಾನು ಬಾರದಿರುವುದರಿಂದ ಸಿಟ್ಟಾದೆಯಾ ಚಿನ್ನ, ಎಂಥಾ ಹುಚ್ಚಿಯೇ ನೀನು ? ಅಷ್ಟೂ ತಿಳಿಯಬಾರದೇ ನಿನಗೆ ? ಕೆಲಸವಿಲ್ಲದೆ ಹಾಗೆ ದಿನವೂ ಬಂದು ಹೋದರೆ ಚೆನ್ನಾಗಿರುತ್ತದೆಯೇ ?"

ಮಾತು ಅವಳೆದೆಯನ್ನು ಚೆನ್ನಾಗಿ ಇರಿಯಿತು. ನಾಚಿಕೆಯಿಂದ ತಲೆ

ತಗ್ಗಿಸಿದಳು. ಅದನ್ನು ವಿಚಾರ ಮಾಡಬೇಕಾದವಳು ಹೆಂಗುಸಾದ ನಾನು. ಅದನ್ನು ಮರೆತು ಮಾನಗೆಟ್ಟವಳಂತೆ ವರ್ತಿಸುತ್ತಿರುವೆ. ಎಂದು ತನ್ನ ಮೇಲೆ ಆಕೆಗೆ ಎಲ್ಲಿಲ್ಲದ ಸಿಟ್ಟು ಬಂದಿತು. ಜೊತೆಯಲ್ಲಿ ಅವರ ವ್ಯವಹಾರಜ್ಞಾನ ಕಂಡು ಅಭಿಮಾನವಾಯಿತು. ತನಗಾಗಿಯೇ ಅವರು ಬಾರದಿದ್ದುದು.

"ನನ್ನನ್ನು ಕ್ಷಮಿಸಿ, ನಿಮ್ಮನ್ನು ಕಾಣದೆ ಮನಸ್ಸು ತುಂಬಾ ಅಧೀರವಾಯಿತು. ಅದಕ್ಕೆ ಹಾಗೆ ಹೇಳಿದೆ."

"ಅದರಿಂದ ತಪ್ಪೇನೂ ಆಗಲಿಲ್ಲ. ನೀನೇನು ನನಗೆ ಪರಕೀಯಳೇ? ನಿನ್ನನ್ನು ನೋಡದಿರುವುದು ನನ್ನ ಪಾಲಿಗೆ ಸಾಧ್ಯವೆಂದು ತಿಳಿದಿರುವೆಯಾ? ಆದರೂ ನನ್ನಾಶೆಯನ್ನು ತೀರಿಸಲು ನಿನ್ನನ್ನು ಅಪಮಾನಕ್ಕೆ ಗುರಿಪಡಿಸಲಾರೆ."

"ನಾನು ಏನೂ ತಿಳಿಯದವಳು, ನನ್ನನ್ನು ಕ್ಷಮಿಸಿ."

"ಹುಚ್ಚಿ, ನಮ್ಮೊಳಗೆ ತಪ್ಪು ಮಾಡುವುದು ಮತ್ತು ಕ್ಷಮಿಸುವುದೆಂದಿದೆಯೇ? ಇನ್ನು ಕೆಲವೇ ದಿನ ಶಾಂತೂ. ಆಮೇಲೆ ನಾವು ಈ ಕಟ್ಟುಕಟ್ಟಳೆಗಳ ಬಂಧನದಿಂದ ಮುಕ್ತರಾಗುವೆವು."

ಶಾಂತಿ ಅವರ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಎದ್ದು ನಿಂತಳು. ಅವರ ಕೊನೆಯ ವಾಕ್ಯ ಅವಳೆದೆಯಲ್ಲಿ ಮಂಗಳ ವಾದ್ಯವನ್ನು ಮೊಳಗಿಸಿತ್ತು. 'ಇನ್ನು ಕೆಲವೇ ದಿನ ಆಮೇಲೆ ಯಾವ ತಡೆಯೂ ಇಲ್ಲ. ಬದುಕಿನ ಪ್ರತಿ ಕ್ಷಣವನ್ನೂ ಅವರ ಜೊತೆಯಲ್ಲಿಯೇ ಕಳೆಯಬಹುದು.' ತಾನು ಒಮ್ಮೆಲೇ ಆಕಾಶದಲ್ಲಿ ಹಾರಾಡುತ್ತಿರುವಂತೆ ಭಾಸವಾಯಿತು ಅವಳಿಗೆ. ಮುಖದ ಮೇಲೆ ಮಂದಹಾಸ ಮಿನುಗಿತು.

"ತುಂಬಾ ಹೊತ್ತಾಯಿತು ಶಾಂತೂ ಹೋಗಿ ಬರಲೇ?"

ಆಕೆ ದೈನ್ಯದಿಂದ ಅವರನ್ನೇ ನೋಡುತ್ತಿದ್ದಳು.

"ಹೋಗಲು ಅಪ್ಪಣೆ ಕೊಡುವುದಿಲ್ಲವೇ ರಾಣೀ?" ಓಡಿ ಹೋಗಿ ಅವರನ್ನಪ್ಪಿಕೊಳ್ಳುವ ಮನಸ್ಸಾಯಿತು. ಆದರೆ ಉದ್ವೇಗವನ್ನು ಹೇಗೋ ತಡೆದುಕೊಂಡಳು.

"ಮತ್ತೆ ಯಾವಾಗ ಬರುವಿರಿ?"

"ನೀನು ಕರೆದಾಗ."

"ನಾನು ಎಲ್ಲಿಗೆಂದು ನಿಮ್ಮನ್ನು ಕರೆಯುವುದು? ನಿಮ್ಮ ರಾಣಿಗೆ ಮನೆ

ಮಾಡಿ ಕೊಡಿರುವಿರಾ ? ”

“ ಬರೀ ಮನೆಯೊಂದೇ ಏಕೇ, ಎಲ್ಲವೂ ಬರುವುದು. ಕೆಲವೇ ದಿನ ತಡೆ ಶಾಂತೂ. ”

ಅವರು ಹೊರಟು ಹೋದರು. ಶಾಂತಾ ಎಷ್ಟೋ ಹೊತ್ತಿನ ವರೆಗೆ ಅವರು ಹೋದ ದಿಕ್ಕನ್ನೇ ನೋಡುತ್ತ ನಿಂತಳು. ಹೃದಯದಲ್ಲಿ ಒಂದು ರೀತಿಯ ಭಯದ ಸಂಚಾರವಾಯಿತು. ‘ ಈ ಸುಖವು ಬದುಕಿರುವಷ್ಟು ಕಾಲ ನನಗೆ ದೊರೆಯುವುದೇ ? ’ ಆಗಲೇ ಕತ್ತಲಾಗತೊಡಗಿತ್ತು. ರಾತ್ರೆಯ ಅಡುಗೆ ಇನ್ನೂ ಆಗಿಲ್ಲವೆಂಬುದು ನೆನಪಿಗೆ ಬಂದೊಡನೆ ಅವಸರವಾಗಿ ಅಡುಗೆ ಮನೆಯತ್ತ ಸಾಗಿದಳು.

## ೧೧

“ ಅಕ್ಕಾ ” ಎಂದು ಕೂಗುತ್ತ ಬಿರುಗಾಳಿಯಂತೆ ಅಡುಗೆಯ ಮನೆಯನ್ನು ಗೋಪು ಪ್ರವೇಶಿಸಿದ. ಅವನ ಕೈಯಲ್ಲಿ ಬಿಳಿಯ ಕವರೊಂದು ಇದ್ದಿದ್ದಿತು.

“ ಏನೋ ಅದು ಗೋಪು ? ”

“ ನಿನಗೊಂದು ಕಾಗದ ಬಂದಿದೆ ಶಾಂತಕ್ಕ. ”

ಶಾಂತಿ ಅದನ್ನು ತೆಗೆದುಕೊಂಡು ಒಡೆದಳು. ಒಳ್ಳೇ ಮುತ್ತಿನಂಥಾ ಅಕ್ಷರಗಳು. ಬರವಣಿಗೆಯ ಗುರುತು ಹಿಡಿಯಲು ಅವಳಿಗೆ ತಡವಾಗಲಿಲ್ಲ. ಅದು ಅವಳ ಗೆಳತಿ ಶಾರದೆಯದು. ಪತ್ರವನ್ನೋದಿ ಅವಳಿಗೆ ಆಶ್ಚರ್ಯವಾಯಿತು.

“ ನನ್ನ ಮುದ್ದು ಶಾಂತು, ಹೇಗೂ ನನ್ನ ಮದುವೆಯಾಯಿತು. ಅಪರಿಚಿತರೊಬ್ಬರು ನನ್ನ ಕೊರಳಿಗೆ ತಾಳಿ ಕಟ್ಟಿದರು. ಲವರ ಹೆಂಡತಿಯಾಗಿ ಅವರ ಮನೆ ಸೇರಿದೆ.

ಅವರು ತುಂಬಾ ಒಳ್ಳೆಯವರು ಶಾಂತೂ, ಅವರ ಸೌಂದರ್ಯವನ್ನು ಕಂಡು ಒಂದೊಂದು ವೇಳೆ ಮುಗ್ಧಳಾಗುತ್ತೇನೆ. ನನ್ನನ್ನು ತುಂಬಾ ಪ್ರೀತಿ

ಸುತ್ತಾರೆ. ನನ್ನನ್ನು ಸ್ವಲ್ಪವೂ ನೋಯಿಸುವುದಿಲ್ಲ. ಜೊತೆಯಲ್ಲಿ ಬೇಕಾದಷ್ಟು ಐಶ್ವರ್ಯವಿದೆ. ನನ್ನನ್ನು ಕೆಲಸ ಮಾಡುವುದಕ್ಕೂ ಬಿಡುವುದಿಲ್ಲ.

ಆದರೂ ನಾನವರನ್ನು ಪ್ರೀತಿಸಲಾರೆ ಶಾಂತೂ. ಅವರ ತೋಳತೆಕ್ಕೆಯಲ್ಲಿ ಮಲಗಿರುವಾಗ ಬೆಂಕಿಯಲ್ಲಿ ಮಲಗಿದ್ದಂತೆ ಭಾಸವಾಗುತ್ತಿದೆ. ಆದರೆ ಅವರು ಒಳ್ಳೆಯವರು, ನನ್ನ ಇಚ್ಛೆಗೆ ವಿರುದ್ಧವಾಗಿ ಏನನ್ನೂ ಮಾಡುವುದಿಲ್ಲ. ಅವರನ್ನು ಪ್ರೀತಿಸಬೇಕು, ನನ್ನ ಹೃದಯವನ್ನು ಅವರಿಗರ್ಪಿಸಬೇಕು, ಎಂದು ಪ್ರಯತ್ನಿಸಿದೆ, ಆದರೆ ಸಾಧ್ಯವಾಗಲಿಲ್ಲ. ಈವರೆಗೆ ಬರೀ ದೇಹವನ್ನಷ್ಟೇ ಅವರಿಗರ್ಪಿಸಲು ಶಕ್ತಳಾದೆ. ಅವರಿಗೆ ದ್ರೋಹ ಬಗೆಯಲು ನಾನು ಸಿದ್ಧಳಿಲ್ಲ ಶಾಂತೂ. ಹೇಗಾದರೂ ನಾನವರನ್ನು ಪ್ರೀತಿಸಲು ಶಕ್ತಳಾದರೆ ನನ್ನಷ್ಟು ಭಾಗ್ಯಶಾಲಿ ಜಗತ್ತಿನಲ್ಲಿ ಯಾರೂ ಇಲ್ಲ.

ನನ್ನೊಡಲು ಅಶಾಂತಿಯಿಂದ ಉರಿಯುತ್ತಿದೆ. ನಿನ್ನನ್ನು ನೋಡುವ ಬಯಕೆಯಾಗುತ್ತಿದೆಯಮ್ಮ—ಆದರೆ ಬರಲಾರೆ. ನಿಮ್ಮಣ್ಣನಿಗೆ ನನ್ನ ನಮಸ್ಕಾರ ತಿಳಿಸು, ಬೇರೇನೂ ಬರೆಯಲಾರೆ.

ನಿನ್ನ ದುರ್ದೈವಿ ಗೆಳತಿ
ಶಾರದೆ. ”

ಸಂಜೆಗೆ ಅಣ್ಣ ಮನೆಗೆ ಬಂದೊಡನೆ ಶಾಂತಿ ಕಾಗದವನ್ನು ಅಣ್ಣನ ಕೈಯಲ್ಲಿರಿಸಿದಳು.

“ ಯಾರ ಕಾಗದ ಶಾಂತೂ ? ”

“ ಶಾರದೆಯದಣ್ಣಾ. ”

ಆ ಹೆಸರು ಕೇಳಿದೊಡನೆ ಅವರ ಮುಖ ಬಿಳಿಚಿಕೊಂಡಿತು. ತಂಗಿಗೆ ತೋರಗೊಡಬಾರದೆಂದು ಪಕ್ಕಕ್ಕೆ ಹೊರಳಿ ತನ್ನ ಕೋಣೆಗೆ ಸಾಗಿದರು. ಆದರೆ ಆಕೆಯ ಕಣ್ಣಿಗೆ ಆ ಬದಲಾವಣೆ ಕಾಣಿಸದಿರಲಿಲ್ಲ. ಆಕೆಯ ಹೃದಯ ಬೆಚ್ಚಿತು. ಪತ್ರದಲ್ಲ ಬರೆದ ವಿಚಾರಕ್ಕೂ ಅಣ್ಣನ ಮುಖದ ಮೇಲಿನ ಬದಲಾವಣೆಗೂ ನಿಜವಾಗಿಯೂ ಸಂಬಂಧವಿದೆಯೆಂದು ಆಕೆಯ ಹೃದಯ ನುಡಿಯಿತು.

ಕಾಗದವನ್ನು ಹಿಡಿದುಕೊಂಡು ಹೋದ ರಾಮರಾಯರು ಎಷ್ಟು ಹೊತ್ತಾದರೂ ಕೋಣೆಯಿಂದ ಹೊರಕ್ಕೇ ಬರಲಿಲ್ಲ. ಶಾಂತಿ ಗೋಪುವಿಗೆ

ಬಡಿಸಿ ಅಣ್ಣನಿಗಾಗಿ ಕಾದು ಕುಳಿತಳು. ಆದರೆ ಎಷ್ಟು ಹೊತ್ತಾದರೂ ಅವರು ಬರುವ ಲಕ್ಷಣ ಕಾಣಿಸಲಿಲ್ಲ. ಮೆಲ್ಲನೆ ಸದ್ದು ಮಾಡದೆ ಅವರ ಕೋಣೆಯತ್ತ ಸಾಗಿದಳು. ಬಾಗಿಲು ಹಾಕಿದ್ದಿತು. ಮೆಲ್ಲನೆ ಬಾಗಿಲ ಸಂದಿನೊಳಗಿನಿಂದ ಇಣಿಕಿದಳು. ಒಳಗಿನ ದೃಶ್ಯ ಆಕೆಯನ್ನು ದಂಗುಬಡಿಸಿತು.

ಅವರು ಕುರ್ಚಿಯ ಮೇಲೆ ಕುಳಿತಿದ್ದರು. ಎದುರಿನ ಚಿಕ್ಕ ಮೇಜಿನ ಮೇಲೆ ದೀಪ ಉರಿಯುತ್ತಿತ್ತು; ಕೈಯಲ್ಲಿ ಕಾಗದವನ್ನು ಬಿಡಿಸಿ ಹಿಡಿದು ಕೊಂಡಿದ್ದರು. ಕಣ್ಣಿನಿಂದ ಒಂದೊಂದೇ ತೊಟ್ಟು ಕಣ್ಣೀರು ಉದುರಿ ಕಾಗದ ವನ್ನು ತೋಯಿಸುತ್ತಿತ್ತು. ಆಕೆಯಿಂದ ನೋಡಲಾಗಲಿಲ್ಲ. " ಅಣ್ಣಾ " ಎಂದು ಗಟ್ಟಿಯಾಗಿ ಕೂಗಿದಳು.

ಕರೆಯನ್ನು ಕೇಳಿ ಆವರು ಒಮ್ಮೆಲೆ ಬೆಚ್ಚಿಬಿದ್ದರು. ಅವಸರವಾಗಿ ಕಾಗದವನ್ನು ಮಡಿಸಿ ಮೇಜಿನ ಮೇಲೆ ಎಸೆದರು ; ಕಣ್ಣೊರಸಿಕೊಂಡರು.

" ಬಂದೆ ಶಾಂತೂ " ಎಂದು ಎದ್ದು ನಿಂತರು. ಶಾಂತಿ ಅವಸರವಾಗಿ ಅಡುಗೆ ಕೋಣೆಯತ್ತ ನಡೆದಳು. ನಿಜಸ್ಥಿತಿ ಆಕೆಗೆ ಹೊಳೆದಿತ್ತು. ತನ್ನ ಊಹೆ ನಿಜವಾಗಿತ್ತು. ಆಕೆಯ ಕಣ್ಣುಗಳಲ್ಲಿಯೂ ನೀರು ಬಾರದಿರಲಿಲ್ಲ. ಅವರು ಅಡುಗೆ ಕೋಣೆಗೆ ಬರುವುದರೊಳಗೆ ಆಕೆ ಸಾವರಿಸಿಕೊಂಡಿದ್ದಳು. ಮಾತ ನಾಡದೆ ಅಣ್ಣನಿಗೆ ಬಡಿಸಿದಳು. ಅವರು ತೀರಾ ಅನ್ಯಮನಸ್ಕರಾಗಿ ಉಣ್ಣುತ್ತಿ ದ್ದರು. ಊಟ ಮಾಡುವುದು ತನಗೆ ಸಾಧ್ಯವೇ ಇಲ್ಲವೆನ್ನುವಂತಿತ್ತು ಅವರ ಸ್ಥಿತಿ. ಬಟ್ಟಲಲ್ಲಿನ ಅನ್ನವನ್ನು ಹಾಗೆಯೇ ಬಿಟ್ಟು ಎದ್ದರು.

" ಇದೇನಣ್ಣ, ಊಟವಾದರೂ ಸರಿಯಾಗಿ ಮಾಡಬಾರದೇ ? "

" ಇಲ್ಲ ಶಾಂತೂ, ಸಂಜೆಗೆ ಪೇಟೆಯ ಕಡೆಗೆ ಹೋಗಿದ್ದೆ. ಕಾಫಿ ಕುಡಿ ದದ್ದು ಕೊಂಚ ಜಾಸ್ತಿಯಾಯಿತು."

ಆಕೆ ಮಾತನಾಡಲಿಲ್ಲ. ಅವರು ಉಣ್ಣದಿರುವುದರ ಕಾರಣ ಆಕೆಗೆ ಚೆನ್ನಾಗಿ ತಿಳಿದಿತ್ತು. ಮತ್ತೆ ಬರಿದೇ ಒತ್ತಾಯ ಮಾಡಲೇಕೆ, ಎಂದು ಸುಮ್ಮ ನಾದಳು. ಆಕೆಯ ಅಂದಿನ ಸಂತಸವೆಲ್ಲವೂ ಹಾರಿಹೋಗಿತ್ತು.

' ನಾನು ಪತ್ರವನ್ನು ಅವರ ಕೈಗೆ ಕೊಡಬಾರದಿತ್ತು. ಎಂಥಾ ತಪ್ಪು ಮಾಡಿದೆ ! ನನ್ನ ಬುದ್ಧಿ ಎಲ್ಲಿಗೆ ಹೋಗಿತ್ತೋ ಏನೋ ? ಇಲ್ಲವಾದರೆ ಅಂದೇ ನನಗೆ ವಿಚಾರವೆಲ್ಲವೂ ತಿಳಿಯಬೇಕಿತ್ತು— ಇಂದು ತಿಳಿದ ಮೇಲೆಯೂ

ಇಂಥಾ ಹುಚ್ಚುತನ ಮಾಡಿದೆ ' ಎಂದು ತನ್ನನ್ನು ಹಳಿದುಕೊಂಡಳು.

ಅಂದು ರಾತ್ರೆ ಅಣ್ಣ-ತಂಗಿಯರಿಬ್ಬರ ಪಾಲಿಗೂ ನಿದ್ದೆ ಬರುವಂತಿಲ್ಲಿಲ್ಲ. ಆಕೆಗೆ ಒಂದು ದಿಕ್ಕಿನಲ್ಲಿ ತನ್ನ ಮುಂದಿನ ಬಾಳಿನ ಸವಿಗನಸುಗಳು ಕಣ್ಣ ಮುಂದೆ ಸುಳಿದು ಹೃದಯವನ್ನು ಅರಳಿಸುತ್ತಿದ್ದರೆ, ಮತ್ತೊಂದು ದಿಕ್ಕಿನಲ್ಲಿ ಅಣ್ಣನ ಭಗ್ನಹೃದಯದ ಸಂತಾಪ ಅದನ್ನು ಸುಟ್ಟು ಸೂರೆ ಮಾಡುತ್ತಿತ್ತು.

ಎಷ್ಟೋ ಮಧುರವಾದ ಕಲ್ಪನೆಗಳು ಆಕೆಯ ಚಿತ್ತಪಟಲದ ಮೇಲೆ ಮಿಂಚಿ ಮಾಯವಾದುವು. ಶಾರದೆ ತನ್ನ ಅತ್ತಿಗೆಯಾಗಿ ಬರುತ್ತಿದ್ದರೆ ? ಎಷ್ಟೊಂದು ಮಧುರ ಕಲ್ಪನೆ ತಾನು ಮೆಚ್ಚಿದ ಪ್ರಿಯತಮನಂತೂ ಬಳಿಯಲ್ಲಿಯೆ ಇದ್ದ. ಬಾಲ್ಯದ ಗೆಳತಿಯೂ ಆತ್ಮೀಯಳಾಗಿ ಜೊತೆಯಲ್ಲಿರಲು ಸಾಧ್ಯವಾಗುತ್ತಿದ್ದರೆ ಆಕೆಯ ಬಾಳು ಸಂತಸದ ನಂದನವನವಾಗುತ್ತಿತ್ತು. ಆದರೆ ಆ ಭಾಗ್ಯ ಆಕೆಯ ಹಣೆಯಲ್ಲಿ ಬರೆದಿಲ್ಲ.

ಒಂದೊಂದಾಗಿ ಎಲ್ಲವೂ ಸ್ಪಷ್ಟವಾಗತೊಡಗಿತು. ಅಣ್ಣನ ಆಕಸ್ಮಿಕ ಪ್ರಯಾಣ; ದಾರಿಯಲ್ಲಿ ಹುಚ್ಚರಂತೆ ಬಡಬಡಿಸಿದ್ದುದು ; ಇಂದಿನ ನಿರಾಶೆ. ಎಲ್ಲವೂ ಒಂದೇ ಎರಕದಲ್ಲಿ ಸಿದ್ಧವಾದ ಪಡಿಯಚ್ಚುಗಳು.

ಎಲ್ಲದಕ್ಕೂ ಕಾರಣ ಒಂದೇ--ಇಷ್ಟಾದರೂ ಎಲ್ಲವನ್ನೂ ಸಹಿಸಿಕೊಂಡು ಅವರು ಶಾಂತವಾಗಿರುವುದನ್ನು ಕಂಡು ಶಾಂತಿಗೆ ಅಣ್ಣನ ಬಗ್ಗೆ ಅಭಿಮಾನವೆನಿಸಿತು.

' ಸಾಮಾನ್ಯರಿಂದ ಸಾಧ್ಯವಿಲ್ಲದ ಕೆಲಸ ಅದು ' ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು.

ಎಷ್ಟೋ ಹೊತ್ತು ಕಳೆದು ಹೇಗೋ ನಿದ್ದೆ ಹತ್ತಿತು.

ರಾಮರಾಯರ ಸ್ಥಿತಿ ಮಾತ್ರ ಬೇರೆಯೇ ಆಗಿತ್ತು. ಊಟವಾದೊಡನೆ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡರು. ಮೇಜಿನ ಮೇಲೆ ದೀಪ ಉರಿಯುತ್ತಲೇ ಇತ್ತು. ಮೂಲೆಯಲ್ಲಿ ಆ ಕಾಗದ ಮುದ್ದೆಯಾಗಿ ಬಿದ್ದಿತ್ತು. ಅದನ್ನು ಕೈಗೆತ್ತಿಕೊಂಡರು ; ಪುನಃ ಬಿಚ್ಚಿ ನೋಡಿದರು. ಕಣ್ಣೀರ ಹನಿಗಳು ಅಲ್ಲಲ್ಲಿ ಬಿದ್ದು ಕೆಲವು ಅಕ್ಷರಗಳು ಮಾಸಿಹೋಗಿದ್ದುವು. ಪುನಃ ಓದಿದರು ; ಮತ್ತೂ ಓದಿದರು. ಒಂದೊಂದು ಶಬ್ದವೂ ತನ್ನನ್ನು ಇರಿಯುವಂತೆ

ಅನಿಸುತ್ತಿತ್ತು.

‘ ಆಕೆ ನನ್ನನ್ನು ಪ್ರೀತಿಸುತ್ತಿದ್ದಳು. ನಾನು ಹೇಡಿ, ಹತ್ತಿರಿದ್ದರೂ ಆಕೆಯನ್ನರಿತುಕೊಳ್ಳಲಿಲ್ಲ. ನನ್ನ ಕಾಲ ಮೇಲೆ ನಾನೇ ಕೊಡಲಿಯೇಟು ಹಾಕಿಕೊಂಡೆ. ಆಕೆಯ ಮನೋಹರ ರೂಪು ಕಣ್ಣ ಮುಂದೆ ಸುಳಿಯಿತು. ಆಕೆ ನನ್ನವಳಾಗಿದ್ದರೆ ? ಛೆ ! ಇನ್ನೇಕೆ ನನಗವಳ ಚಿಂತೆ ? ಇನ್ನವಳು ನನ್ನ ಪಾಲಿಗೆ ಪರಕೀಯಳು. ತಾಳಿ ಕಟ್ಟಿದ ಪುರುಷನ ಹೆಂಡತಿ. ಅವನ ಜೊತೆ ಯಲ್ಲಿಯೇ ಅವಳು ತನ್ನ ಬದುಕನ್ನು ಕಳೆಯಬೇಕು. ಅವನನ್ನು ಪೀತಿಸ ಬೇಕು.’

ಆ ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ಎಷ್ಟೋ ಹೊತ್ತಿನ ವರೆಗೆ ಹಾಗೆಯೇ ನಿಂತಿದ್ದರು. ಮೆಲ್ಲನೆ ಅದರ ಮೇಲಿನ ಬರವಣಿಗೆ ಮಸುಕಾದಂತೆ ಕಂಡಿತು. ಯಾರೋ ಕೂಗಿ ಕರೆದಂತಾಯಿತು. ‘ ಥೂ ಹುಚ್ಚ, ಒಂದು ಹೆಣ್ಣಿಗಾಗಿ ಇಷ್ಟು ಮರುಗುತ್ತಿರುವಿಯಾ ? ಬಯಸಿದ ಹೆಣ್ಣನ್ನು ಪಡೆಯುವು ದೊಂದೇ ನಿನ್ನ ಬಾಳಿನ ಗುರಿಯೇ ?’ ಅದು ಅವರ ಅಂತರಾತ್ಮನ ದನಿ.

‘ ಇನ್ನೇಕೆ ಅವಳ ಚಿಂತೆ ? ಅವಳ ವಿಚಾರವಾಗಿ ಯೋಚಿಸುವ ಅಧಿ ಕಾರವೂ ನಿನಗಿಲ್ಲ. ಹೃದಯವನ್ನು ಕಲ್ಲು ಮಾಡಿಕೊ. ಕೊರಗಿ ಸಾಯುವ ದಕ್ಕಾಗಿ ನಿನ್ನ ಸೃಷ್ಟಿಯಾಗಿಲ್ಲ. ಕಣ್ಣು ತೆರೆದು ಸುತ್ತಲೂ ನೋಡು. ನರಳು ತ್ತಿರುವ ಸಾವಿರಾರು ಬಡ ನಿರ್ಗತಿಕರನ್ನು ನೋಡು. ಅವರ ಸೇವೆಯಲ್ಲಿಯೇ ಬಾಳನ್ನು ನವೆಸು. ಅದೊಂದೇ ನಿನಗುಳಿದಿರುವ ಮುಕ್ತಿ ಮಾರ್ಗ.’

ಅವರು ಎಚ್ಚತ್ತರು ; ಕಣ್ಣರಳಿಸಿ ಸುತ್ತಲೂ ನೋಡಿದರು ; ಯಾರೂ ಇರಲಿಲ್ಲ. ಹಿಡಿದಿದ್ದ ಕಾಗದ ಕೈಯಲ್ಲಿ ಇನ್ನೂ ಹಾಗೆಯೇ ಇತ್ತು. ಪುನಃ ಅದನ್ನೊಮ್ಮೆ ನೋಡಿದರು. ಹೃದಯದಲ್ಲಿ ಯಾವುದೋ ಅವ್ಯಕ್ತ ಶಕ್ತಿ ಸಂಚಾರವಾದಂತಾಯಿತು. ಕೈಯಲ್ಲಿದ್ದ ಕಾಗದವನ್ನು ಹರಿದು ಚೂರು ಮಾಡಿ ದರು. ಅದರಿಂದಲೂ ತೃಪ್ತಿಯಾಗಲಿಲ್ಲ ; ಚೂರುಗಳನ್ನು ಜೊತೆಗೂಡಿಸಿ ಸುಟ್ಟುಬಿಟ್ಟರು. ಮತ್ತೂ ಸಾಲದೆನಿಸಿತು; ಸುಟ್ಟ ಬೂದಿಯನ್ನು ಕೈಯಲ್ಲಿ ಹಿಡಿದುಕೊಂಡು ಗಾಳಿಯಲ್ಲಿ ಊದಿಬಿಟ್ಟರು. ಅದರ ಜೊತೆಯಲ್ಲಿ ತಮ್ಮ ಬಾಳ ಬಯಕೆಗಳೆಲ್ಲವನ್ನೂ ಊದಿಬಿಟ್ಟಿದ್ದರು. ಅಂದಿನ ಅವರ ಅಚಲ ನಿರ್ಧಾರ ಮನಸ್ಸಿಗೆ ಎಷ್ಟೋ ಶಾಂತಿಯನ್ನು ತಂದೊಡ್ಡಿತ್ತು. ಎದುರಿನ ಕಿಟಕಿಯಿಂದ

ತಣ್ಣಗಿನ ಗಾಳಿ ಬೀಸುತ್ತಿತ್ತು. ಎದ್ದು ಕಿಟಕಿಯ ಬಳಿ ಬಂದು ನಿಂತರು. ಅದೇ ಹೊತ್ತಿಗೆ ಸರಿಯಾಗಿ ಬೆಳಗಿನ ಜಾವದ ಕೋಳಿ ಕೂಗಿತು. ' ಓ, ಎಷ್ಟು ಹೊತ್ತಾಯಿತು., ಎಂದುಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡರು. ಮಲಗಿದೊಡನೆ ನಿದ್ದೆ ಬಂದುಬಿಟ್ಟಿತು.

ಮರುದಿನ ಬೆಳಿಗ್ಗೆ ಶಾಂತಿ " ಅಣ್ಣಾ ಅಣ್ಣಾ " ಎಂದು ಕೂಗಿ ನಾಲ್ಕಾರು ಬಾರಿ ಬಾಗಿಲು ತಟ್ಟಿದ ಮೇಲೆಯೇ ಅವರಿಗೆ ಎಚ್ಚರ.

ಎದ್ದು ಕಣ್ಣುಜ್ಜಿಕೊಳ್ಳುತ್ತ ಹೊರಗೆ ಬಂದರು. ತಂಗಿಯನ್ನು ಕಂಡು ಮುಗುಳು ನಕ್ಕರು. ಯಾವ ಬೇಸರವೂ ಇಲ್ಲದಂತಿತ್ತು ಅವರ ಮುಖ ಭಾವ.

" ತುಂಬಾ ಹೊತ್ತಾಯಿತೇನಮ್ಮ " ಎಂದು ನಗುತ್ತ ಬಚ್ಚಲು ಮನೆ ಯತ್ತ ನಡೆದರು.

ಶಾಂತಿಗೆ ಎಲ್ಲಿಲ್ಲದ ಆಶ್ಚರ್ಯ. ಅವಳು ಯೋಚಿಸಿಕೊಂಡದ್ದೇ ಬೇರೆ, ಈಗ ಕಂಡದ್ದೇ ಬೇರೆ. ಅತ್ತು ಅತ್ತು ಕೆಂಪಗಾದ ಕಣ್ಣುಗಳೊಂದಿಗೆ ಬಾಡಿದ ಮೊಗವನ್ನು ಹೊತ್ತುಕೊಂಡ ಅಣ್ಣನನ್ನವಳು ನಿರೀಕ್ಷಿಸಿದ್ದಳು; ಆದರೆ ನಗುತ್ತ ಹೊರಬರುತ್ತಿರುವ ಅವರನ್ನು ಕಂಡು ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ.

ಅಣ್ಣ ಹೊರಟು ಹೋದೊಡನೆ ಶಾಂತಿ ತನ್ನ ಮಧ್ಯಾಹ್ನದ ಅಡುಗೆಯ ಕೆಲಸದಲ್ಲಿ ತೊಡಗಿದಳು. ' ಅವರ ಹೃದಯ ನಿಜವಾಗಿಯೂ ಶಾಂತವಾಗಿದ್ದರೆ ಚಿರಕಾಲವೂ ನೆಮ್ಮದಿ ಉಳಿಯಲಿ ' ಎಂದು ಹಾರೈಸಿದಳು.

ಅಂದು ರಾಮರಾಯರು ಹೊಸ ಉತ್ಸಾಹದಿಂದ ಹೊಸ ಮನುಷ್ಯನಂತೆ ಆಸ್ಪತ್ರೆಯ ಮೆಟ್ಟಲನ್ನೇರಿದರು.

ಅವರ ಅಂದಿನ ಭಂಗಿಯನ್ನು ಕಂಡು ಡಾಕ್ಟರರಿಗೂ ಆಶ್ಚರ್ಯವಾಗದಿರಲಿಲ್ಲ.

" ಏನು ರಾಮರಾಯರೇ, ತುಂಬಾ ಗೆಲುವಾಗಿದ್ದೀರಿ ? ಏನಾದರೂ ವಿಶೇಷವಿದೆಯೇ ? "

" ವಿಶೇಷವೇನೂ ಇಲ್ಲ " ಎಂದು ಅವರು ಮದ್ದಿನ ಕೋಣೆಯತ್ತ ನಡೆದರು.

ಡಾಕ್ಟರರೂ ಹೆಚ್ಚಿಗೆ ಮಾತನಾಡುವ ಗೋಜಿಗೆ ಹೋಗಲಿಲ್ಲ. ಎಷ್ಟೋ

ದಿನಗಳಿಂದ ಅವರ ಗಮನ ಆಸ್ಪತ್ರೆಯ ಕಡೆಗೆ ಇರಲೇ ಇಲ್ಲ. ಶಾಂತಿ ಅವರ ಹೃದಯ ಮನಸ್ಸುಗಳೆಲ್ಲವನ್ನೂ ತುಂಬಿಕೊಂಡಿದ್ದಳು. ರಾಮರಾಯರು ಎಲ್ಲ ಜವಾಬ್ದಾರಿಯನ್ನು ಹೊತ್ತು ಕೆಲಸ ಮಾಡುವುದರಿಂದ ಅವರಿಗೆ ಯಾವ ಯೋಚನೆಯೂ ಇರುತ್ತಿರಲಿಲ್ಲ. ಕನಸಿನ ಲೋಕದಲ್ಲಿ ವಿಹರಿಸುತ್ತಲೇ ವೇಳೆಯನ್ನು ಕಳೆಯುತ್ತಿದ್ದರು.

## ೧೨

ಡಾ| ಮಾಧವರಾಯರ ತಾಯಿ ತೀರಿಕೊಂಡು ಹಲವು ವರ್ಷಗಳು ಕಳೆದು ಹೋದುವು. ತಾಯಿ ಬದುಕಿರುವಾಗಲೇ ಅವರ ಮದುವೆಯ ಪ್ರಯತ್ನ ನಡೆದಿತ್ತು; ಆದರೆ ತಾವು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೆಂದು ಶಪಥ ಹಾಕಿಕೊಂಡು ಬಿಟ್ಟಿದ್ದರು. ಇಂದಿನ ಸ್ಥಿತಿ ತೀರಾ ವಿಪರೀತವಾಗಿತ್ತು. ಶಾಂತಿ ಅವರ ಹೃದಯವನ್ನೆಲ್ಲಾ ವ್ಯಾಪಿಸಿಕೊಂಡುಬಿಟ್ಟಿದ್ದಳು. ಆಕೆಯನ್ನು ಬಿಟ್ಟು ಬದುಕಿರುವುದು ಅವರ ಪಾಲಿಗೆ ಸಾಧ್ಯವಿರಲಿಲ್ಲ; ತಮ್ಮ ಹಳೆಯ ಶಪಥವನ್ನು ನೆನೆದು ಮನಸ್ಸಿನಲ್ಲಿಯೇ ನಕ್ಕರು.

'ನನಗಾಗಿಯೇ ಹುಟ್ಟಿದವಳಿರಬೇಕು ಶಾಂತಿ' ಎಂದಿತು ಮನಸ್ಸು. ಅದನ್ನು ಸುಳ್ಳೆಂದು ಹೇಳಲು ಸಾಧ್ಯವಿರಲಿಲ್ಲ. ಈ ಹಿಂದೆ ಎಷ್ಟೋ ತರುಣಿಯರು ಅವರ ಜೀವನದಲ್ಲಿ ಬಂದು ಹೋಗಿದ್ದರು. ಕಾಲೇಜ ವಿದ್ಯಾರ್ಥಿನಿಯರು, ಪಟ್ಟಣದ ಬೆಡಗುಗಾರ್ತಿಯರು ಎಲ್ಲರನ್ನೂ ಕಂಡಿದ್ದರು; ಶಾಂತಿಗಿಂತ ಎಷ್ಟೋ ಪಾಲು ಸುಂದರಿಯರು ಅವರ ಸಹವಾಸವನ್ನು ಬಯಸಿ ಬಂದಿದ್ದರು; ಆದರೆ ಯಾರ ಕಡೆಗೂ ಅವರ ಗಮನ ಹರಿದಿರಲಿಲ್ಲ.

ಎಲ್ಲವನ್ನೂ ಬಿಟ್ಟು ಈ ಹಳ್ಳಿಗಾಡಿಗೆ ಬಂದ ಶಾಂತಿಯ ಮೇಲೆ ಮುಗ್ಧರಾಗಿದ್ದರು. ಮೊದಲ ಬಾರಿ ಕಂಡಾಗಲೇ ಆಕೆಯಲ್ಲಿ ಮನಸ್ಸು ನೆಟ್ಟು ಹೋಗಿತ್ತು. 'ಇದೇಕೆ ಹೀಗೆ' ಎಂದು ಎಷ್ಟೋ ಬಾರಿ ತನ್ನನ್ನು ತಾನೇ ಪ್ರಶ್ನಿಸಿಕೊಂಡಿದ್ದರು. ಆದರೆ ತಮ್ಮ ಒಲವನ್ನು ಕುರಿತು ಆಳವಾಗಿ ಚರ್ಚೆ ಮಾಡುವ ಸಾಮರ್ಥ್ಯ ಅವರಲ್ಲಿದ್ದಿಲ್ಲ. ಆಗಲೇ ಶಾಂತಿ ಅವರ ಜೀವನಸರ್ವಸ್ವವಾಗಿಬಿಟ್ಟಿದ್ದಳು. ಭಾವಲೋಕದಲ್ಲಿ ವಿಹರಿಸುತ್ತಿದ್ದವರಿಗೆ ರಾಮರಾಯರು ಬಂದು ಎಬ್ಬಿಸಿದಾಗಲೇ ಎಚ್ಚರ.

" ಏನಾಯಿತು ಕಂಪೌಂಡರ್. "

ಅವರಿಂದ ಉತ್ತರ ಬರುವ ಮೊದಲೇ ಆಸ್ಪತ್ರೆಗೆ ಸಂಬಂಧಪಟ್ಟ ಪಕ್ಕದ ಕೋಣೆಯಿಂದ ನರಳುವಿಕೆಯ ದನಿ ಕೇಳಿಸಿತು. ಅದೂ ಹೆಂಗಸಿನದು.

" ಯಾರದು ನರಳುತ್ತಿರುವುದು ? "

" ಯಾರೋ ಹೆಂಗುಸು ಸ್ವಾಮಿ. ಗರ್ಭಿಣಿ, ಹೆರಿಗೆ ಬೇನೆ ಪ್ರಾರಂಭ ವಾಗಿದೆ. "

ಡಾಕ್ಟರರು ಅವಸರವಾಗಿ ಎದ್ದು ಪಕ್ಕದ ಕೋಣೆಯತ್ತ ನಡೆದರು. ಬಿಡಿ ಸಿದ ಚಾಪೆಯೊಂದರ ಮೇಲೆ ಎಳೆ ಪ್ರಾಯದ ಹೆಂಗುಸೊಬ್ಬಳು ಮಲಗಿದ್ದಳು. ಆಗಲೇ ವಿಪರೀತ ನೋವು ಆರಂಭವಾಗಿತ್ತು ; ಸಹಿಸಲಾರದೆ ಕೊರಗುತ್ತಿ ದ್ದಳು ; ಜೊತೆಯಲ್ಲಿ ಬಂದ ಹೆಂಗುಸೊಬ್ಬಳು ಪಕ್ಕದಲ್ಲಿಯೇ ಕುಳಿತಿದ್ದಳು.

" ಎಷ್ಟು ತಿಂಗಳಮ್ಮ ? "

" ಏಳು. "

" ಮೊದಲ ಹೆರಿಗೆಯೇ ಇದು ?

" ಹೌದು ಸ್ವಾಮಿ. "

" ಇಷ್ಟರ ವರೆಗೆ ಯಾಕೆ ಕರೆದು ತರಲಿಲ್ಲ; ವಿಪರೀತಕ್ಕೆ ಹೋದ ಮೇಲೆ ತರುವುದೇ ? "

ಮತ್ತೆ ಹೆಚ್ಚು ಮಾತನಾಡದೆ ರೋಗಿಯ ಪರೀಕ್ಷೆ ನಡೆಸಿದರು. ದೇಹ ತುಂಬಾ ನಿತ್ರಾಣವಾಗಿತ್ತು ; ಸುಲಭದಲ್ಲಿ ಹೆರಿಗೆಯಾಗುವ ಲಕ್ಷಣಗಳು ಕಾಣಿಸ ಲಿಲ್ಲ. ಹುಡುಗಿಯ ಪ್ರಾಯ ಹದಿನಾರಕ್ಕೆ ಮೀರಿರಲಿಲ್ಲ; ಆಗಲೇ ತಾಯಿ ಯಾಗಲು ಹೊರಟಿದ್ದಾಳೆ.

ಮಲಗಿದಲ್ಲಿಯೇ ಕಣ್ಣು ತೆರೆದು ಪರೀಕ್ಷೆ ನಡೆಸುತ್ತಿರುವ ಡಾಕ್ಟರರನ್ನು ನೋಡಿದಳು. ' ಸುಮ್ಮನೆ ಪರೀಕ್ಷೆಯೇಕೆ ? ನೋವು ಕಡಿಮೆಯಾಗಲು ಏನಾದರೂ ಔಷಧಿ ಕೊಡಬಾರದೇ ? ' ಎಂದು ಕೇಳುವಂತಿತ್ತು ಆಕೆಯ ನೋಟ.

" ತುಂಬಾ ನಿತ್ರಾಣವಿದೆ, ಮಗುವನ್ನು ಆಪರೇಶನ್ ಮಾಡಿ ತೆಗೆಯ ಬೇಕಾದೀತು " ಎಂದರು ಮೆಲ್ಲನೆ. ಎರಡೂ ಕೈಗೆ ಎರಡು ಇಂಜೆಕ್ಷನ್ ಕೊಟ್ಟರು. ಆಕೆಯನ್ನು ಬಿಟ್ಟು ಅತ್ತಿತ್ತ ಹೋಗುವಂತಿರಲಿಲ್ಲ. ಕ್ಷಣಕ್ಷಣಕ್ಕೆ

ನೋವು ನರಳಾಟ ಹೆಚ್ಚಾಗತೊಡಗಿತು.

ನೋವು ತಡೆಯಲಾಗದೆ ಹುಡುಗಿ ಒಂದೇಸವನೆ ಕೂಗುತ್ತಿದ್ದಳು. ಒಂದೇ ಬಾರಿ ಗಟ್ಟಿಯಾಗಿ ಕೂಗಿ ಮೂರ್ಛೆ ಹೋದಳು.

“ ಇವಳು ಕಷ್ಟದಿಂದ ಬದುಕಬಹುದು ಕಂಪೌಂಡರ್, ಆದರೆ ಮಗು ಬದುಕುವುದಕ್ಕೆ ಸಾಧ್ಯವಿಲ್ಲ ” ತುಂಬಾ ಹೊತ್ತು ಕಳೆದು ಬಹು ಕಷ್ಟದಿಂದ ಮಗುವನ್ನು ಹೊರಕ್ಕೆ ತೆಗೆಯಲಾಯಿತು.

ತಾಯ ಹೊಟ್ಟೆಯಲ್ಲಿಯೇ ಅದು ತೀರಿ ಹೋಗಿತ್ತು. ಹುಡುಗಿ ಇನ್ನೂ ಎಚ್ಚೆತ್ತಿರಲಿಲ್ಲ. ನಾಲ್ಕು ಗಂಟೆ ಕಳೆದು ಅವಳು ಮೆಲ್ಲನೆ ಕಣ್ದೆರೆದಳು ; ದೇಹವನ್ನು ಅತ್ತಿತ್ತ ಚಲಿಸುವುದಕ್ಕೆ ಸಾಧ್ಯವಿರಲಿಲ್ಲ. ಹೊಸ ಜನ್ಮ ತಳೆದು ಬಂದಂತಾಗಿತ್ತು ಅವಳಿಗೆ. ಕಂಪೌಂಡರರೊಡನೆ ಒಂದು ಡೋಜು ಮದ್ದು ಕುಡಿಸುವುದಕ್ಕೆ ಹೇಳಿ ಡಾಕ್ಟರರು ಹೊರಗೆ ಬಂದರು. ಬಟ್ಟೆಯೆಲ್ಲವೂ ಬೆವರಿನಿಂದ ತೊಯ್ದು ಹೋಗಿತ್ತು ; ಆದರೂ ಮುಖದ ಮೇಲೆ ಸಮಾಧಾನದ ಕಳೆಯಿತ್ತು.

ಮುಖ ತೊಳೆದುಕೊಂಡು ಆಫೀಸಿಗೆ ಬಂದರು ; ಅವರಿಗೆ ಆಶ್ಚರ್ಯ. ಶಾಂತಾ ಪಕ್ಕದಲ್ಲಿದ್ದ ಬೆಂಚಿನ ಮೇಲೆ ಕುಳಿತಿದ್ದಳು.

“ ಏನು ಬಂದೆ ಶಾಂತಾ ? ”

“ ಅಣ್ಣನನ್ನು ಊಟಕ್ಕೆ ಕರೆಯಲು. ”

“ ಓ, ಅದರ ನೆನಪೇ ಇಲ್ಲ ” ಎಂದು ಕೈಗಡಿಯಾರದ ಕಡೆಗೆ ದೃಷ್ಟಿ ಹೊರಳಿಸಿದರು ; ಗಂಟೆ ಎರಡು ಕಳೆದು ಹೋಗಿತ್ತು.

“ ನಿಮ್ಮದೂ ಊಟವಾಗಿಲ್ಲವೇ ? ”

“ ಇಲ್ಲ ಶಾಂತಾ. ಈಗ ತಾನೇ ರೋಗಿಯ ಕೋಣೆಯಿಂದ ಹೊರ ಬರುತ್ತಿರುವೆ ; ಡೆಲಿವರಿ ಕೇಸ್ ; ಇನ್ನೂ ಚಿಕ್ಕ ಹುಡುಗಿ ; ತುಂಬಾ ಕಷ್ಟವಾಯಿತು. ತುಂಬಾ ಪ್ರಯಾಸದಿಂದ ಜೀವ ಉಳಿಸಲಾಯಿತು ; ಮಗು ತೀರಿಕೊಂಡಿತು. ”

ಅಷ್ಟು ಹೊತ್ತಿಗೆ ರಾಮರಾಯರೂ ಅಲ್ಲಿಗೆ ಬಂದರು.

“ ಇನ್ನು ಹೊರಡಿ ರಾಮರಾಯರೇ, ನಿಮ್ಮ ತಂಗಿ ಆಗಿನಿಂದ ಕಾದು ಕುಳಿತಿದ್ದಾಳೆ. ”

“ ನೀನೇ ಬರುವ ಅವಶ್ಯಕತೆಯೇನಿತ್ತು ಶಾಂತೂ, ಗೋಪು ಇರಲಿಲ್ಲವೇ ? ” ಎಂದು ಮದ್ದಿನ ಕೋಣೆಗೆ ನಡೆದರು. ಶಾಂತಿ ಡಾಕ್ಟರರ ಮುಖವನ್ನು ನೋಡಿ ಮುಗುಳು ನಕ್ಕಳು. ‘ಗೋಪು ಬಂದಿದ್ದರೆ ನನ್ನ ದೇವರ ದರ್ಶನವಾಗುತ್ತಿತ್ತೇ ? ’ ಎನ್ನುವಂತಿತ್ತು ಅವಳ ನೋಟ. ತನ್ನ ಪ್ರೇಯಸಿಯ ನಗುಮುಖವನ್ನು ಕಂಡು ಅವರ ದಣಿವೆಲ್ಲವೂ ಹಾರಿಹೋಗಿತ್ತು.

“ ನಡೆ ಶಾಂತೂ ” ಎಂದು ಕಂಪೌಂಡರರು ಹೊರಗೆ ಬಂದರು; ಇನ್ನು ಮನೆಗೆ ಹೋಗಿ ಸ್ನಾನ ಮಾಡಿ ಊಟ ಮುಗಿಸಬೇಕಿತ್ತು.

“ ಡಾಕ್ಟರೆ, ನಿಮ್ಮ ಊಟ ? ”

“ ನನಗೆ ಹಸಿವೆಯೇ ಇಲ್ಲ. ” ಶಾಂತಿ ದೈನ್ಯದಿಂದ ಅವರನ್ನೇ ನೋಡಿದಳು.

“ ನಿಮಗೆ ಬೇಸರವೆನಿಸದಿದ್ದರೆ ನಮ್ಮ ಮನೆಯಲ್ಲಿಯೇ ಊಟದ ವ್ಯವಸ್ಥೆ ಮಾಡುವೆ. ”

“ ಬೇಡ, ಸುಮ್ಮನೆ ತೊಂದರೆ ತೆಗೆದುಕೊಳ್ಳಬೇಡಿ; ನನ್ನ ಊಟ ಆಗಲೇ ಸಿದ್ಧವಿರಬೇಕು. ಆದರೆ ದಣಿದು ಹೋದ ಮೇಲೆ ಸ್ವಾಭಾವಿಕವಾಗಿ ನಾನು ಊಟ ಮಾಡುವುದೇ ಇಲ್ಲ. ”

“ ನೀವೇನೂ ಯೋಚಿಸಬೇಡಿ ಡಾಕ್ಟರ್, ನಿಮಗಾಗಿ ಕೂಡಲೆ ಬಿಸಿ ಊಟದ ವ್ಯವಸ್ಥೆ ಮಾಡಿಸುವೆ. ” ಅವರ ಉತ್ತರ ಬರುವ ಮೊದಲೇ ಇಬ್ಬರೂ ಹೊರಟು ಹೋದರು.

ಶಾಂತಿಯಿಲ್ಲದಿರುತ್ತಿದ್ದರೆ ಪ್ರಾಯಶಃ ಅವರಿದಕ್ಕೆ ಒಪ್ಪುತ್ತಿರಲಿಲ್ಲ; ಒಂದಿಷ್ಟು ಹೊತ್ತು ಅವಳ ಜೊತೆಯಲ್ಲಿ ಇರುವುದಕ್ಕಾಯಿತು ಎಂದು ಸುಮ್ಮನಾದರು. ಅರ್ಧ ಗಂಟೆ ಕಳೆದು ರಾಮರಾಯರು ಬಂದು ಡಾಕ್ಟರನ್ನು ಕಳಿಸಿದರು. ಶಾಂತಿ ಬಾಗಿಲಲ್ಲಿ ನಿಂತು ಉತ್ಸಾಹದಿಂದ ಅವರ ಬರವನ್ನೇ ಕಾಯುತ್ತಿದ್ದಳು. ದೂರದಿಂದ ಅವರು ಬರುವುದನ್ನು ಕಂಡೊಡನೆ ಅವಳ ಹೃದಯ ಆನಂದದಿಂದ ಕುಣಿಯಿತು; ಅಂದು ಮೊದಲ ಬಾರಿಗೆ ತನ್ನ ಕೈಯಡುಗೆಯನ್ನು ಅವರಿಗೆ ಉಣ್ಣಿಸುವ ಸೌಭಾಗ್ಯ ಅವಳ ಪಾಲಿಗೆ ದೊರೆತಿತ್ತು.

“ ನನ್ನಿಂದಾಗಿ ತುಂಬಾ ತೊಂದರೆ ಶಾಂತಿ. ”

“ ಹುಂ, ಸುಮ್ಮನಿರಿ. ಅದನ್ನೆಲ್ಲಾ ನಿಮ್ಮೊಡನೆ ಕೇಳಿದವರಾರು ? ”

“ ಮೈಯೆಲ್ಲ ಮೈಲಿಗೆಯಾಗಿದೆ, ಸ್ನಾನ ಮಾಡದೆ ಊಟ ಮಾಡು ವಂತಿಲ್ಲ. ”

“ ಅದನ್ನೆಲ್ಲ ನನಗೆ ಹೇಳಿ ಕೊಡಬೇಕೆ ನೀವು ? ನಡೆಯಿರಿ, ಬಚ್ಚಲು ಮನೆಯಲ್ಲಿ ನೀರು ಕಾದು ನಿಂತಿದೆ. ”

“ ಮರೆತೇ ಹೋಯಿತು ‘ ಬಾತ್‌ಟಾವೆಲ್ ’ ತರಲೇ ಇಲ್ಲ. ”

“ ನನ್ನದಿದೆ, ಆಗಬಹುದಲ್ಲವೇ ? ”

“ ಇನ್ನೂ ನನ್ನದು ನಿನ್ನದು ಎಂದಿದೆಯೇ, ಬೇಗ ಕೊಡು ; ಹಸಿವೆ ಯಾಗುತ್ತಿದೆ. ”

ಅವಳು ಅವಸರವಾಗಿ ಟವೆಲನ್ನು ತಂದು ಅವರ ಕೈಗಿತ್ತಳು. ಅವರು ಸ್ನಾನ ಮುಗಿಸಿ ಬರುವ ಹೊತ್ತಿಗೆ ಬಡಿಸುವ ಸಿದ್ಧತೆ ಮಾಡಿದ್ದಳು. ಅಂದಿನ ಊಟ ಅವರ ಪಾಲಿಗೆ ಮೃಷ್ಟಾನ್ನ ಭೋಜನವಾಯಿತು. ಅವಳ ಒತ್ತಾಯ ದಿಂದ ದಿನವೂ ಊಟ ಮಾಡುವುದಕ್ಕಿಂತ ಕೊಂಚ ಹೆಚ್ಚಾಗಿಯೇ ಊಟ ಮಾಡಿದ್ದರು.

“ ನಿನ್ನ ಊಟವಾಯಿತೇ ಶಾಂತೂ ? ”

“ ಇಲ್ಲ. ”

“ ಇನ್ನೂ ಊಟ ಮಾಡದೆ ಕುಳಿತಿರುವೆಯಾ ? ”

“ ನನ್ನ ದೇವರು ಹಸಿದಿರುವಾಗ ನನ್ನಿಂದ ಊಟ ಮಾಡಲು ಸಾಧ್ಯ ವಿದೆಯೇ ? ” ಎಂದು ಹೇಳಬೇಕೆನಿಸಿತು, ಆದರೆ ಹಾಗೆ ಹೇಳಲಿಲ್ಲ.

“ ಗಂಡಸರ ಊಟವಾಗುವ ಮೊದಲು ಹೆಂಗಸರು ಊಟ ಮಾಡ ಕೂಡದು. ”

“ ನೀನು ಜಾಣೆ ಶಾಂತೂ, ನಿನ್ನ ಬಳಿ ಮಾತನಾಡಿ ಗೆಲ್ಲುವುದಕ್ಕೆ ಸಾಧ್ಯವಿದೆಯೇ ? ”

“ ನನ್ನನ್ನೇ ಗೆದ್ದಿರುವಿರಲ್ಲ. ”

ಅವರು ಏನು ಹೇಳಿದರೂ ಅದಕ್ಕೆ ಸರಿಯಾದ ಮಧುರ ಉತ್ತರ ಅವಳ ಬಳಿ ಸಿದ್ಧವಾಗಿಯೇ ಇರುತ್ತಿತ್ತು.

“ ಇದೇ ರೀತಿ ದಿನವೂ ಊಟ ಮಾಡಿದರೆ ಒಂದೇ ತಿಂಗಳಲ್ಲಿ ನಾನು ಪೈಲ್ವಾನನಾಗುವೆ. ”

" ಸಾಕು ಸುಮ್ಮನಿರಿ. ಚಿಕ್ಕ ಮಕ್ಕಳು ಕೂಡ ನಿಮಗಿಂತ ಹೆಚ್ಚಿಗೆ ಊಟ ಮಾಡಬಲ್ಲರು! "

" ಚೆನ್ನಾಗಿ ಹೇಳಿದೆ. ನಿನ್ನ ಮಾತು ಕೇಳಿದರೆ ಎಲ್ಲವೂ ಸತ್ಯ. "

ಡಾಕ್ಟರರು ಉಂಡು ಬಂದು ಕುರ್ಚಿಯಲ್ಲಿ ಕುಳಿತಿದ್ದರು. ಶಾಂತಿ ಅವರ ತೀರ ಸಮೀಪಕ್ಕೆ ಬಂದು ನಿಂತಳು.

" ಅದೆಲ್ಲ ಆಮೇಲೆ, ಮೊದಲು ಊಟವಾಯಿತೇ ಹೇಳು ? "

" ನನಗೆ ಹಸಿವಿಲ್ಲ ; ಆಗಲೇ ಹೊಟ್ಟೆ ತುಂಬಿತು. "

" ತಮಾಷೆಯೆಲ್ಲಾ ಸಾಕು, ಮೊದಲು ಊಟ ಮಾಡಿ ಬಾ. "

" ನೀವು ತೃಪ್ತಿಯಿಂದ ಊಟ ಮಾಡಿದರೆ ನನ್ನ ಹೊಟ್ಟೆಯೂ ತುಂಬುವುದೆಂದು ಗೊತ್ತಿಲ್ಲವೇ ? "

" ಹೋಗು ಶಾಂತೂ, ಊಟ ಮಾಡಿ ಬಾ. ಸುಮ್ಮನೆ ತಮಾಷೆ ಮಾಡಬೇಡ. ಮತ್ತೆ ಕಾಯಿಲೆ ಬಿದ್ದರೆ ? "

" ನನಗೇನೂ ಭಯವಿಲ್ಲ. ನಿಮ್ಮ ಕೈಯಲ್ಲಿ ಚಿಕಿತ್ಸೆ ಮಾಡಿಸಿಕೊಳ್ಳುವ ಭಾಗ್ಯ ದೊರೆತಂತಾಗುವುದು. "

" ತಮಾಷೆ ಮಾಡಬೇಡ; ಬೇಗನೆ ಊಟ ಮಾಡಿ ಬಾ. ಇಲ್ಲವಾದರೆ ನಾನು ಹೋಗಿಬಿಡುವೆ. '

ಈಗ ಮಾತ್ರ ಅವಳು ಸೋತಳು.

" ನಾನು ಬರುವವರೆಗೆ ಹೋಗಕೂಡದು. " ಎಂದು ಅಡುಗೆ ಮನೆಯತ್ತ ನಡೆದಳು.

ನಿಜವಾಗಿಯೂ ಅವಳಿಗೆ ಹಸಿವಿರಲಿಲ್ಲ. ಆದರೂ ಅವರ ಸಮಾಧಾನಕ್ಕಾಗಿ ಉಣ್ಣಲೇ ಬೇಕಿತ್ತು. ಹೆಸರಿಗೆ ಒಂದಿಷ್ಟು ಬಟ್ಟಲಿಗೆ ಹಾಕಿಕೊಂಡು ಕುಳಿತಳು; ಒಂದು ನಿಮಿಷವೂ ಕಳೆದಿಲ್ಲ; ಅವಳ ದೃಷ್ಟಿ ಬಾಗಿಲ ಕಡೆಗೆ ಹೋಯಿತು. ಅವರು ನಿಂತು ತಾನು ಉಣ್ಣುವುದನ್ನೇ ನೋಡುತ್ತಿದ್ದರು; ಅವಳಿಗೆ ನಾಚಿಕೆಯಾಯಿತು.

" ಇಲ್ಲಿಗೇಕೆ ಬಂದಿರಿ ? ನೀವು ಹಾಗೆ ಮಾಡಿದರೆ ನಾನು ಊಟ ಮಾಡುವುದೇ ಇಲ್ಲ. "

ಚಿಕ್ಕ ಮಕ್ಕಳು ಹಟ ಮಾಡುವಂತಿತ್ತು. ಅವರು ನಗುತ್ತ ತನ್ನ ಜಾಗದಲ್ಲಿ ಬಂದು ಕುಳಿತರು.

ಐದೇ ನಿಮಿಷ ಕಳೆದು ಶಾಂತಿ ಊಟ ಮುಗಿಸಿ ಅವರಿದ್ದಲ್ಲಿ ಬಂದಳು.

"ನನ್ನಿಂದಾಗಿ ನಿನಗೂ ಸರಿಯಾಗಿ ಊಟವಿಲ್ಲ." ಮುಂದೆ ಮಾತ ನಾಡುವಂತಿರಲಿಲ್ಲ; ಅವಳ ಕೈ ಅವರ ಬಾಯಿಯನ್ನು ಮುಚ್ಚಿಬಿಟ್ಟಿತ್ತು.

"ನೀವು ಹಾಗೆಲ್ಲ ಹೇಳಿದರೆ ನಾನು ಅತ್ತುಬಿಡುವೆ."

"ಕಣ್ಣೀರಿನ ಮಟ್ಟಿಗೆ ಹೆಂಗಸರ ಬಳಿ ಬರಗಾಲವಿಲ್ಲ; ಬೇಕಾದಾಗ ಬಂದುಬಿಡುತ್ತೆ ಅಲ್ಲವೇ?"

"ಹೌದು, ನಮ್ಮ ಕಷ್ಟ ನಿಮಗೆ ಹೇಗೆ ತಿಳಿಯಬೇಕು?"

"ತುಂಬಾ ತಡವಾಯಿತು; ರೋಗಿಯ ಅವಸ್ಥೆ ಹೇಗಾಯಿತೆಂಬುದನ್ನು ನೋಡಬೇಕು; ಹೋಗಲೇ?"

"ಈಗಲೇ ಹೋಗಬೇಕೇ?"

"ಹುಚ್ಚು ಹುಡುಗಿ."

"ನಾಳೆ ಬರುವಿರಾ?"

"ಅಷ್ಟೊಂದು ಆತುರವೇಕೆ ಶಾಂತೂ. ಇನ್ನು ಒಂದೇ ತಿಂಗಳ ವರೆಗೆ ತಡೆಯಲಾರೆಯಾ? ಆಮೇಲೆ ಒಂದು ಕ್ಷಣವೂ ನೀನು ನನ್ನನ್ನು ಅಗಲಿ ಇರಬೇಕಾಗಿಲ್ಲ."

ಅವಳಿಗೆ ನಾಚಿಕೆಯೆನಿಸಿತು--ಮೆಲ್ಲನೆ ಅವರಿಂದ ಬಿಡಿಸಿಕೊಂಡು ಎದ್ದು ನಿಂತಳು; ಅವರು ಹೊರಟು ಹೋದರು.

## ೧೩

ಅವರ ಪರಿಚಯವಾದಂದಿನಿಂದ ಒಂದೇ ಹಾಡು; ಒಂದು ದಿನ ಅಡು ಗೆಗೆ ಉಪ್ಪು ಹೆಚ್ಚಾದರೆ ಒಂದು ದಿನ ಕಮ್ಮಿ. ಅಂತೂ ಮನಸ್ಸು ಎಲ್ಲೋ ಇದ್ದರೂ ಯಂತ್ರದಂತೆ ಶಾಂತಿ ಅಡುಗೆ ಮಾಡುತ್ತಿದ್ದಳು. ರಾಮರಾಯರು ಒಂದು ದಿನವೂ ಅಡುಗೆಯ ವಿಷಯವಾಗಿ ಏನೂ ಆಕ್ಷೇಪವೆತ್ತಿದವರಲ್ಲ;

ತಂಗಿಯ ಮನೋಭಾವವನ್ನು ಸೂಕ್ಷ್ಮವಾಗಿ ಅರಿತ ಅವರಿಗೆ ಈ ಹೆಚ್ಚು ಕಡಿಮೆಯ ಕಾರಣ ಚೆನ್ನಾಗಿ ತಿಳಿದಿತ್ತು. ಆದರೆ ಗೋಪು ಮಾತ್ರ ಯಾವಾಗಲೂ ಸುಮ್ಮನಿರುತ್ತಿರಲಿಲ್ಲ; ಅಕ್ಕನನ್ನು ಪ್ರತಿ ಸಲವೂ ಎಚ್ಚರಿಸದಿರುತ್ತಿರಲಿಲ್ಲ.

"ಇದೇನೇ ಅಕ್ಕಾ, ಪಲ್ಯಕ್ಕೆ ಉಪ್ಪೇ ಹಾಕಲಿಲ್ಲ."

"ಏನೋ ಮರೆತಿರಬೇಕು ಗೋಪು; ಅಲ್ಲೇ ಒಂದಿಷ್ಟು ಸೇರಿಸಿಕೊಂಡು ಬಿಡು."

"ಮರವೆಯಾಗಡೇನು? ತಲೆಯಲ್ಲಿ ಯಾರ್‍ಯಾರು ಬಂದು ಕುಳಿತರೆ ಆಗುವ ಗತಿಯೇ ಹಾಗೆ; ಅಣ್ಣನಿಗೆ ಉಪ್ಪಿಲ್ಲದ ಅಡುಗೆ ತಿನ್ನಿಸಿದೆಯಲ್ಲವೇ?"

ತಮ್ಮನ ಮೂದಲಿಕೆ ಅವಳ ಹೃದಯವನ್ನು ಅರಳಿಸುತ್ತಿತ್ತು. ತನ್ನ ಗಮನವನ್ನೆಲ್ಲಾ ಸೆಳೆದುಕೊಂಡ ಪ್ರಿಯತಮನ ನೆನಪಾದೊಡನೆ ಮುಖದ ಮೇಲೆ ನಾಚಿಕೆಯ ಕಳೆ ಮೂಡುತ್ತಿತ್ತು; ಅವನು ಹಾಗೆ ಅಂದಾಗಲೆಲ್ಲ ಕೃತಕ ಕೋಪ ನಟಿಸುತ್ತಿದ್ದಳು.

"ಸಾಕು ಬಿಡೋ, ಒಂದು ದಿನ ಮರೆತು ಹೋದರೆ ಏನೂ ಕೆಟ್ಟು ಹೋಗುವುದಿಲ್ಲ; ನಿನ್ನ ಹೆಂಡತಿ ಬಂದ ಮೇಲೆ ಬೇಕಾದಂತೆ ಮಾಡಿಸಿಕೋ."

"ನಿನ್ನ ಗಂಡ ಬಾರದೆ ನನ್ನ ಹೆಂಡತಿ ಬರುವುದಕ್ಕೆ ಸಾಧ್ಯವೇ ಇಲ್ಲ ಶಾಂತಕ್ಕ. ನಾಳೆ ಗಂಡನ ಮನೆಗೆ ಹೋದ ಮೇಲೆ ಈ ರೀತಿ ಅಡುಗೆ ಮಾಡಿ ಹಾಕಿದರೆ ಪೆಟ್ಟು ತಿನ್ನಬೇಕಾದೀತು." ಪುನಃ ಅವಳು ಸೋಲುತ್ತಿದ್ದಳು.

ಗಂಡನ ಮನೆಗೆ ಹೋದ ಮೇಲೆ ಎಂಥಾ ತಪ್ಪು ಮಾಡಿದರೂ ಪೆಟ್ಟು ತಿನ್ನುವ ಅವಶ್ಯಕತೆಯಿಲ್ಲವೆಂಬುದು ಆಕೆಗೆ ತಿಳಿದಿತ್ತು; ಹಾಗಾಗಿಯೇ ತಮ್ಮನ ಮಾತಿಗೆ ಉತ್ತರವೀಯುವ ಚೈತನ್ಯ ಅವಳಲ್ಲಿರುತ್ತಿರಲಿಲ್ಲ.

"ಸಾಕೋ, ಸುಮ್ಮನೆ ಊಟ ಮಾಡು" ಎಂದು ಸಿಟ್ಟಿನ ಪ್ರದರ್ಶನ ಮಾಡುವ ಪ್ರಯತ್ನ ಮಾಡುತ್ತಿದ್ದಳು.

ಅಲ್ಲಿಯೂ ಅವಳಿಗೆ ಜಯ ಸಿಗುತ್ತಿರಲಿಲ್ಲ. ತಮ್ಮನ ತುಂಟು ನಗು ಅವಳ ಮುಖದ ಮೇಲೆ ಮಂದಹಾಸವನ್ನು ಮೂಡಿಸುತ್ತಿತ್ತು.

"ನನಗೆ ಗೊತ್ತು ಶಾಂತಕ್ಕಾ, ನಿನ್ನ ಮದುವೆ ನಿಶ್ಚಯವಾಗಿದೆ, ಅದಕ್ಕಾಗಿಯೇ ಇಷ್ಟು ಜಂಭ." ಇದಕ್ಕೆ ಅವಳು ಉತ್ತರ ಕೊಡುತ್ತಿರಲಿಲ್ಲ. ಬರೇ ಅವ

ನನ್ನ ಕಂಡು ನಗುತ್ತಿದ್ದಳು.

ದಿನವೂ ಊಟದ ಹೊತ್ತಿನಲ್ಲಿ ಅಕ್ಕ-ತಮ್ಮಂದಿರ ಜಗಳ ಇಲ್ಲದಿರುತ್ತಿರಲಿಲ್ಲ; ಶಾಂತಿ ಎದುರಿನಲ್ಲಿ ಸಿಟ್ಟಿನ ನಟನೆ ಮಾಡಿದರೂ, ಈ ರೀತಿಯ ಜಗಳ ಅವಳಿಗೆ ತುಂಬಾ ಮೆಚ್ಚಿಗೆಯಾಗಿತ್ತು.

ಅವಳು ತನ್ನ ಭಾವೀ ಜೀವನದ ಗಾಳಿಗೋಪುರಗಳನ್ನು ಕಟ್ಟುತ್ತಿದ್ದರೆ ರಾಮರಾಯರು ಬೇರೆಯೇ ದಾರಿಯನ್ನು ಹಿಡಿದು ಸಾಗುತ್ತಿದ್ದರು. ಶಾರದೆಯ ಪತ್ರ ಕಂಡ ಮೇಲೆ ಅವರು ತಮ್ಮ ಜೀವನದ ಗುರಿಯನ್ನು ಪೂರ್ತಿಯಾಗಿ ಬದಲಿಸಿಕೊಂಡಿದ್ದರು; ರೋಗಿಗಳಿಗಾಗಿಯೇ ತಮ್ಮ ಬದುಕನ್ನು ಸವೆಸುವ ನಿರ್ಧಾರ ಮಾಡಿದ್ದರು. ಅವರಿಗೆ ಜೀವನದಲ್ಲಿ ಸುಖಪಡುವ ಬಯಕೆ ಇದ್ದಿಲ್ಲ; ನೆಮ್ಮದಿ ಬೇಕಿತ್ತು. ನಿರಾಶೆಗೊಂಡ ಹೃದಯವನ್ನು ಬಿಗಿದು ಹತೋಟಿಯಲ್ಲಿಡಲು ಶಾಂತಿಯ ಕಡಿವಾಣ ಬೇಕಿತ್ತು. ಅದನ್ನವರು ಆಗಲೇ ಕಂಡುಕೊಂಡಿದ್ದರು; ಜಗತ್ತಿನಲ್ಲಿ ತಮಗಿಂತಲೂ ಹೆಚ್ಚಾಗಿ ನಿರಾಶೆ-ನೋವು-ದುಃಖಗಳ ಹೊಡೆತಕ್ಕೆ ಸಿಲುಕಿ ನುಜ್ಜುಗುಜ್ಜಾದ ಅಸಹಾಯಕರಿಗಾಗಿ ತಮ್ಮ ಬಾಳನ್ನು ಮುಡಿಪಾಗಿಡುವ ನಿರ್ಧಾರ ಮಾಡಿದ್ದರು.

ತಂಗಿಯ ಬದುಕಿನ ದಾರಿಯನ್ನೊಂದು ತೆರವು ಮಾಡಿಕೊಟ್ಟರಾಯಿತು; ಮತ್ತೆ ಅವರು ನಿಶ್ಚಿಂತರು. ಗೋಪು ಹೇಗಿದ್ದರೂ ಗಂಡುಸು; ಆತನಿಗೊಂದು ದಾರಿ ತೋರಿಸಲು ಹೆಚ್ಚು ಕಷ್ಟವಾಗಲಾರದು. ಆತನನ್ನು ತನ್ನ ದಾರಿಯಲ್ಲಿಯೇ ತಯಾರು ಮಾಡುವ ನಿರ್ಧಾರ ಮಾಡಿದ್ದರು; ಅದಕ್ಕಾಗಿ ಹೆಚ್ಚು ಯೋಚನೆ ಮಾಡುವ ಅವಶ್ಯಕತೆಯಿದ್ದಿಲ್ಲ.

ದಿನಗಳು ಸಾಗುತ್ತಲೇ ಇದ್ದುವು; ಯಾರ ಆಶೆ-ನಿರಾಶೆಗಳ ಪರಿವೆಯೂ ಅದಕ್ಕಿದ್ದಿಲ್ಲ. ಒಂದೊಂದು ದಿನವೂ ಕಳೆದಂತೆ ಶಾಂತಿ 'ಅಯ್ಯೋ ಇನ್ನೂ ಎಷ್ಟು ದಿನವಪ್ಪಾ?' ಎಂದು ಚಡಪಡಿಸುತ್ತಿದ್ದರೆ ರಾಮರಾಯರು 'ಅಂತೂ ಒಂದು ದಿನದ ಆಯುಷ್ಯ ಕಳೆಯಿತು' ಎಂದುಕೊಳ್ಳುವರು. ಗೋಪುವಿನ ಪಾಲಿಗೆ ಯಾವುದೂ ಇಲ್ಲ. ಒಂದು ದಿನ ಕಳೆದರೆ ಮತ್ತೊಂದು ದಿನ, ಆಮೇಲೆ ಇನ್ನೊಂದು; ಅವನಿಗೆ ಎಲ್ಲವೂ ಒಂದೇ. ಇನ್ನೂ ಬಾಳುವೆಯ ನಿಶ್ಚಿತ ರೂಪವನ್ನು ಅರಿಯದವನಿಗೆ ಯಾವ ದಿನವಾದರೇನು?

ಹದಿನೈದು ಇಪ್ಪತ್ತು ದಿನಗಳು ಕಳೆದುವು; ಡಾಕ್ಟರರು ಬರೇ ಒಂದೆರಡು

ಬಾರಿ ಮಾತ್ರ ಶಾಂತಿಯನ್ನು ನೋಡಲು ಬಂದಿದ್ದರು. ಅವರ ದಾರಿ ಕಾಯುವು ದೊಂದೇ ಆಕೆಯ ಕೆಲಸ; ನಾಲ್ಕಾರು ದಿನ ಕಳೆದು ಅಂದು ಬಂದಿದ್ದರು. ಅವರು ಎಂದಿಗಿಂತಲೂ ಗೆಲುವಾಗಿರುವುದು ಕಂಡಿತವಳಿಗೆ.

" ಇಂದು ಬಂದೇ ಬರುವಿರೆಂದು ನನಗೆ ತಿಳಿದಿತ್ತು. "

" ಹೇಗೆ? "

" ನನ್ನ ಹೃದಯ ಹೇಳುತ್ತಿತ್ತು. "

" ಹಾಗಾದರೆ ಚೆನ್ನಾಯಿತು, ನಿನ್ನ ಹೃದಯ ಭವಿಷ್ಯ ಹೇಳಬಲ್ಲು ದಲ್ಲವೇ ? ನಾನು ಯಾವುದೋ ಒಂದು ಸುದ್ದಿಯನ್ನು ತಿಳಿಸಲು ಬಂದಿರುವೆ; ಏನೆಂದು ಹೇಳು ನೋಡೋಣ ? "

ಶಾಂತಿ ಒಂದು ಕ್ಷಣ ವಿಚಾರ ಮಾಡಿದಳು; ಏನೂ ಹೊಳೆಯಲಿಲ್ಲ.

" ಏನು, ನೀವೇ ಹೇಳಿ ನೋಡೋಣ? "

" ಹಾಗಾದರೆ ' ಸೋತೆ' ಎನ್ನು. "

" ಅದನ್ನು ಹೇಳುವುದೇನು ? ಎಂದೋ ಸೋತಿದ್ದೇನೆ. "

" ಇಂದಿನ ಸಮಾಚಾರ ತುಂಬಾ ಸಂತೋಷದ ಸಮಾಚಾರ, ಹೇಳಿದರೆ ಏನು ಕೊಡುವೆ ? "

" ನನ್ನ ಬಳಿ ಕೊಡಲು ಏನಿದೆ ಹೇಳಿ ? ನನ್ನನ್ನೇ ನಿಮಗರ್ಪಿಸಿರುವೆ. ನನ್ನದೆಲ್ಲವೂ ನಿಮ್ಮದು, ಮತ್ತೇನು ಕೊಡಲಿ ? ಒಂದಿಷ್ಟು ಕಾಫಿ ತರಲೇ ? "

" ನಾನು ಹೇಳುವುದನ್ನು ಕೇಳುವ ಇಷ್ಟವಿಲ್ಲವೇ ? "

" ಏನು ಹೇಳಿ. "

" ಮತ್ತೆ ಇನಾಮು ? "

ಶಾಂತಿ ತನ್ನ ಕರಮಾಲೆಯನ್ನು ಅವರ ಕೊರಳಸುತ್ತ ಬಳಸಿದಳು. "ಹೂಂ, ಬೇಗ ಹೇಳಿ, ಇನಾಮು ಆಮೇಲೆ. " ಮುಖ ಗೆಲುವಿನಿಂದ ಕೂಡಿತ್ತು; ಕಣ್ಣು ಗಳು ಸಂತಸದಿಂದ ಕುಣಿಯುತ್ತಿದ್ದುವು.

" ಮುಂದಿನ ವಾರ ನಮ್ಮ ಮದುವೆ ಶಾಂತೂ ; ಆಗಲೇ ಮುಹೂರ್ತ ನಿಶ್ಚಯಿಸಿದ್ದೇನೆ. "

ಆಕೆಯಿಂದ ನಿಂತಲ್ಲಿ ನಿಲ್ಲುವುದಾಗಲಿಲ್ಲ; ಆಧಾರ ತಪ್ಪಿದವಳಂತೆ ಅವರ ಎದೆಯ ಮೇಲೆ ಬಿದ್ದುಬಿಟ್ಟಳು. ಅವರ ಕೈಗಳು ಆಕೆಯ ನಡುವನ್ನು

ಬಳಸಿದ್ದುವು; ಶಾಂತಿ ಸ್ವರ್ಗಕ್ಕೇರಿದಳು; ಮೈಮೇಲೆ ಪ್ರಜ್ಞೆಯೇ ಅವಳಿಗುಳಿದಿರಲಿಲ್ಲ.

ಎಷ್ಟು ಹೊತ್ತಿನ ವರೆಗೆ ಇಬ್ಬರೂ ಹಾಗೆಯೇ ಇದ್ದರೋ! ಅವರಿಗೇ ತಿಳಿಯದು. ಶಾಂತಿಗೆ ಮೆಲ್ಲನೆ ಎಚ್ಚರವಾಯಿತು; ಇನ್ನೂ ಅವರೆದೆಯ ಮೇಲೆ ಬಿದ್ದುಕೊಂಡಿದ್ದಳು; ಅವರ ಕೈಗಳು ಆಕೆಯ ಬೆನ್ನಮೇಲೆ ಆಡುತ್ತಿದ್ದುವು. ಹಾಗೆಯೇ ಕಣ್ಣು ಮುಚ್ಚಿದಳು. 'ದೇವಾ, ಈ ಸೌಭಾಗ್ಯ ಏಳೇಳು ಜನ್ಮಕ್ಕೂ ನನ್ನ ಪಾಲಿಗಿರಲಿ.' ಮೆಲ್ಲನೆ ಅವರ ಬಾಹುಬಂಧನದಿಂದ ಬಿಡಿಸಿಕೊಂಡು ಎದ್ದು ನಿಂತಳು; ಅವರ ಕೆದರಿದ ಕ್ರಾಪನ್ನು ನೇವರಿಸಿದಳು.

"ಕಾಫಿ ತರಲೇ?"

ಅವರು ಮಾತನಾಡಲಿಲ್ಲ; ಬರೇ ಮುಗುಳುನಗೆ ನಕ್ಕರು; ಅವಳು ನಗುತ್ತ ಕಾಫಿ ತರಲು ಹೋದಳು. ಐದೇ ನಿಮಿಷ,—ಕಾಫಿ ಸಿದ್ಧವಾಗಿತ್ತು; ಒಂದು ಲೋಟಿಯಲ್ಲಿ ತುಂಬಿಸಿಕೊಂಡು ಬಂದಳು.

"ಬರೀ ಕಾಫಿಯೇ ಶಾಂತೂ?"

"ಹೂಂ, ಬರೇ ಕಾಫಿ, ತಿಂಡಿ ಆಗಲೇ ಕೊಟ್ಟೆನಲ್ಲ?"

"ಕೆಟ್ಟ ಹುಡುಗಿ!" ಎಂದು ಅವಳ ಕಡೆ ಕೈ ಚಾಚಿದರು. ಆದರೆ ಆಕೆ ಕೈಗೆ ಸಿಗಲಿಲ್ಲ.

"ಇನ್ನು ಒಂದೇ ವಾರ, ಆಮೇಲೆ ಎಲ್ಲಿ ಓಡುವಿಯೋ ನೋಡೋಣ?"

"ಒಂದು ವಾರವೇಕೆ ಈಗಲೂ ನಾನು ಓಡುವುದಿಲ್ಲ. ಬೇಕಾದಂತೆ ಹಿಡಿದಿಟ್ಟುಕೊಳ್ಳಿ." ಅವರ ತೀರ ಸಮೀಪಕ್ಕೆ ಬಂದು ನಿಂತಳು. ಕಾಫಿ ಕುಡಿದರು. ಆಗಲೇ ಅವರು ಬಂದು ಸಾಕಷ್ಟು ಹೊತ್ತಾಗಿತ್ತು. ಹೊರಡಲು ಎದ್ದು ನಿಂತರು.

"ಇನ್ನು ಹೋಗಲೇ ಶಾಂತೂ?"

"ಮತ್ತೆ ಯಾವಾಗ ಬರುವಿರಿ?"

"ಹುಚ್ಚಿ, ಇನ್ನು ನಾನು ನಿನ್ನನ್ನು ನೋಡುವುದು ಮದುವೆ ಮಂಟಪದಲ್ಲಿ."

ಮದುವೆ ಮಂಟಪದಲ್ಲಿ! ಇನ್ನು ಎಂಟೇ ದಿನ, ಆಮೇಲೆ ನಾನು ಅವರ ಹೆಂಡತಿ. ಆಮೇಲೆ ಯಾವ ತೊಂದರೆಯೂ ಇಲ್ಲ. ಕುಣಿದಾಡಬೇಕೆನಿಸಿತು. ಒಂದು ಗಳಿಗೆಯ ಮಟ್ಟಿಗೆ ಚಿಕ್ಕ ಮಗುವಾಗುವುದು ಸಾಧ್ಯವಿರುತ್ತಿದ್ದರೆ ಕುಣಿ

ದಾಡುತ್ತ ಊರೆಲ್ಲ ಅಲೆದಾಡಿಕೊಂಡು ಬರುತ್ತಿದ್ದಳು. ಈರೀತಿ ಒಮ್ಮೆಲೇ ಸುಖದ ಬಾಗಿಲು ತನ್ನ ಪಾಲಿಗೆ ತೆರೆಯಬಹುದೆಂದು ಅವಳು ಭಾವಿಸಿರಲಿಲ್ಲ.

ಇಷ್ಟು ದಿನವೂ ಒಂದಿಲ್ಲೊಂದು ವಿಚಾರ ತಲೆಯಲ್ಲಿ ಸುಳಿದು ಆಕೆಯ ನೆಮ್ಮದಿಯನ್ನು ಹಾಳುಮಾಡುತ್ತಿತ್ತು. ಅವರು ಶ್ರೀಮಂತರು, ತನ್ನ ಮೇಲಿನ ಅವರ ಪ್ರೀತಿ ಸ್ಥಿರವಾಗಿ ನಿಲ್ಲಬಹುದೇ? ಎಂಬ ಸಂದೇಹ ಆಕೆಯ ಮನಸ್ಸಿನಲ್ಲಿ ಮೂಡದಿರುತ್ತಿರಲಿಲ್ಲ. ಇನ್ನು ಯಾವ ಯೋಚನೆಯೂ ಇಲ್ಲ, ಮುಹೂರ್ತ ನಿಶ್ಚಯವಾಗಿದೆ. ಬೇಕಾದವರಿಗೆ ಆಮಂತ್ರಣವನ್ನೂ ಕೊಟ್ಟಿರಬಹುದು. ಇನ್ನು ಸಂಶಯಕ್ಕೆಡೆಯಿಲ್ಲ.

ಸಂಜೆಯಾಯಿತು, ಕತ್ತಲಾಯಿತು. ರಾಮರಾಯರು ಮನೆಗೆ ಬಂದರು. ತಂಗಿ ಅಣ್ಣನ ಮುಖವನ್ನು ಕಂಡಳು; ಎಂದೂ ಕಾಣದ ಗೆಲುವು ಅಲ್ಲಿ ಕಾಣಿಸುತ್ತಿತ್ತು.

" ಶಾಂತೂ, ಒಂದು ಯೋಚನೆ ಹರಿಯಿತಮ್ಮ." ಆಕೆಯ ಎದೆ ಸಂತಸದಿಂದ ಜೋರಾಗಿ ಹೊಡೆದುಕೊಳ್ಳಲಾರಂಭಿಸಿತು. ಆ ಯೋಚನೆ ಏನೆಂದು ಆಕೆಗೆ ತಿಳಿದಿತ್ತು; ಆದರೂ ಸಾವರಿಸಿಕೊಂಡು ಕೇಳಿದಳು:

" ಏನಣ್ಣಾ, ಏನಾಯಿತು ? "

" ನಿನ್ನ ಮದುವೆಯ ಮುಹೂರ್ತ ನಿಶ್ಚಯವಾಯಿತಮ್ಮ" ಎಂದು ಸ್ನೇಹದಿಂದ ತಂಗಿಯ ಬೆನ್ನ ಮೇಲೆ ಕೈಯಾಡಿಸಿದರು; ಆಕೆ ಮಾತನಾಡಲಿಲ್ಲ, ಸುಮ್ಮನೆ ತಲೆತಗ್ಗಿಸಿಕೊಂಡು ನಿಂತಳು.

"ಎಷ್ಟೋ ದಿನದಿಂದ ಈ ಸಂತಸದ ಗಳಿಗೆಗಾಗಿ ಹಾತೊರೆಯುತ್ತಿದ್ದೆ ಶಾಂತು, ಇನ್ನು ನಾನು ನಿಶ್ಚಿಂತ."

" ಹಾಗೆಂದರೇನಣ್ಣ, ನನಗೊಬ್ಬಳು ಅತ್ತಿಗೆ ಬರಬೇಡವೇ ? "

"ಅದರ ಯೋಚನೆ ಎಂದೋ ಮುಗಿದು ಹೋಯಿತು ಶಾಂತೂ, ಗೋಪು ದೊಡ್ಡವನಾಗಲಿ, ನಿನಗೆ ಬೇಕಾದವಳನ್ನು ಆರಿಸಿ ಅವನ ಮದುವೆ ಮಾಡಿಸು."

ಶಾಂತಿ ಅಣ್ಣನ ಮುಖವನ್ನೇ ನೋಡಿದಳು; ಹೃದಯವನ್ನು ಹೊಕ್ಕು ಅಲ್ಲಿನ ಭಾವನೆಗಳನ್ನೆಲ್ಲಾ ಹೊರಗೆಡಹಬೇಕೆನ್ನುವ ಹಠವಿತ್ತು ಆ ನೋಟದಲ್ಲಿ.

ಆದರೆ ಅವಳಾಸೆ ಕೈಗೂಡಲಿಲ್ಲ; ಅಣ್ಣನ ಮುಖದ ಮೇಲೆ ಯಾವ ಬದಲಾವಣೆಯೂ ಕಾಣಿಸಲಿಲ್ಲ; ನಿಶ್ಚಲ ಶಾಂತತೆ ನೆಲೆಸಿತ್ತು ಅಲ್ಲಿ; ಆ ವಿಚಾರವಾಗಿ ಇನ್ನೂ ಹೆಚ್ಚು ಚರ್ಚಿಸುವ ಮನಸ್ಸಾಗಲಿಲ್ಲ.

" ಊಟಕ್ಕೇಳಿರಣ್ಣ. "

ಅಣ್ಣನ ವರ್ತನೆ ತುಂಬಾ ವಿಚಿತ್ರವಾಗಿದೆ. ಅಂದು ಅಷ್ಟು ಕಣ್ಣೀರು ಹಾಕಿದವರು ಇಂದು ಎಷ್ಟು ಶಾಂತವಾಗಿರುವರು! ಏಕೋ ಅವರ ರೀತಿ ನನಗೆ ಅರ್ಥವೇ ಆಗುವುದಿಲ್ಲಪ್ಪ, ಎಂದುಕೊಂಡು ಇಬ್ಬರಿಗೂ ಬಡಿಸುವ ಸಿದ್ಧತೆ ಮಾಡಿದಳು.

## ೧೪

ಎರಡು ಮೂರು ದಿನಗಳು ಬಹುಬೇಗ ಕಳೆದುವು. ಇನ್ನು ನಾಲ್ಕು ದಿನಗಳನ್ನು ಆಕೆ ಕಳೆಯಬೇಕು— ಮದುವೆಯ ತಯಾರಿಯನ್ನು ನೋಡುವಾಗಲೆಲ್ಲ ಅವಳಿಗೆ ತನ್ನ ಸಂತಸವನ್ನು ತಡೆದುಕೊಳ್ಳುವುದು ತನಗೇ ಕಷ್ಟವಾಗುತ್ತಿತ್ತು.

' ಛೀ! ಎಂಥಾ ಹುಚ್ಚಿ ನಾನು ' ಎಂದುಕೊಂಡು ನಗುತ್ತಿದ್ದಳು.

ನಾಲ್ಕನೇ ದಿನ ಮಧ್ಯಾಹ್ನದ ಹೊತ್ತಿಗೆ ರಾಮರಾಯರು ಅವಸರವಾಗಿ ಓಡಿ ಬಂದರು. ಅವರ ಮುಖದ ಮೇಲೆ ಗಾಬರಿಯು ಕಳೆಯಿತ್ತು.

" ಶಾಂತು, ಶಾಂತೂ.... " ಎಂದು ಬಿರುಗಾಳಿಯಂತೆ ಒಳಗೆ ನುಗ್ಗಿದರು. ಅಣ್ಣನ ಗಾಬರಿಯನ್ನು ಕಂಡು ಶಾಂತಿಯ ಹೃದಯ ನಡುಗಿತು; ಓಡಿ ಬಂದು ಅಣ್ಣನನ್ನು ಗಟ್ಟಿಯಾಗಿ ಹಿಡಿದುಕೊಂಡಳು.

" ಏನಾಯಿತಣ್ಣ ? "

ರಾಮರಾಯರು ತಡವರಿಸಿದರು. ಸ್ಪಷ್ಟವಾಗಿ ಮಾತನಾಡಬೇಕಾದರೆ ಕೆಲವು ನಿಮಿಷ ಕಳೆಯಿತು.

" ಡಾಕ್ಟರರಿಗೆ ವಿಪರೀತ ಜ್ವರ ಶಾಂತೂ! "

ಅವಳಿಗೆ ಬವಳಿ ಬಂದು ಬೀಳುವಂತಾಯಿತು. "ಯಾವಾಗಿನಿಂದ ಅಣ್ಣ ?"

"ನಿನ್ನೆ ಸಂಜೆಯೇನೋ ತಲೆನೋವು ಎನ್ನುತ್ತಿದ್ದರು. ಒಂದು ಡೋಜು ಮದ್ದನ್ನೂ ಕುಡಿದಿದ್ದರು. ಇಂದು ಬೆಳಿಗ್ಗೆ ನೋಡುವಾಗ ಪರಿಸ್ಥಿತಿ ವಿಪರೀತ ಕ್ಕಿಟ್ಟುಕೊಂಡಿದೆ. ಜ್ವರ ಕಾದು ಮೈ ಕೆಂಡದಂತಾಗಿದೆ."

ಅಣ್ಣನ ಮಾತು ಮುಗಿಯಬೇಕಾದರೆ ಶಾಂತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

"ನಡೆಯಿರಿ ಅಣ್ಣ" ಎಂದು ಆಸ್ಪತ್ರೆಯ ಕಡೆಗೆ ಹೊರಟೇಬಿಟ್ಟಳು. ತನ್ನ ಶಕ್ತಿಯೆಲ್ಲವೂ ಉಡುಗಿ ಹೋದಂತೆನಿಸಿತು. ದಾರಿಯಲ್ಲಿ ನಡೆಯು ವಾಗಲೂ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಏನೇನೋ ಅಶುಭ ಚಿಂತನೆಗಳು ಹೃದಯವನ್ನು ನಡುಗಿಸಿದುವು.

"ಅವರನ್ನು ನನ್ನಿಂದ ಕಸಿದುಕೊಳ್ಳಬೇಡ ದೇವಾ" ಎಂದು ಮನಕರಗು ವಂತೆ ಅನಾಥ ರಕ್ಷಕನಲ್ಲಿ ಮೊರೆಯಿಟ್ಟಳು.

ಡಾಕ್ಟರರು ಮಲಗುವ ಕೋಣೆಯ ಬಾಗಿಲು ತೆರೆದಿತ್ತು. ಶಾಂತಿ ಬಿರು ಗಾಳಿಯಂತೆ ಕೋಣೆಯನ್ನು ಪ್ರವೇಶಿಸಿದಳು. ಅವರು ಮಂಚದ ಮೇಲೆ ರಗ್ಗು ಹೊದ್ದುಕೊಂಡು ಮಲಗಿದ್ದರು. ಶಾಂತಿ ಮಂಚದ ಮೇಲೆ ಕುಳಿತು ಮೆಲ್ಲನೆ ಹಣೆಯ ಮೇಲೆ ಕೈಯಾಡಿಸಿದಳು. ಹಣೆ ಕಾದು ಕೆಂಡವಾಗಿತ್ತು. ಇವಳ ತಣ್ಣನೆಯ ಕೈಯ ಸ್ಪರ್ಶಕ್ಕೆ ಅವರು ಕಣ್ತೆರೆದರು. ಮುಖದ ಮೇಲೆ ಕ್ಷೀಣ ಮಂದ ಹಾಸ ಮಿನುಗಿತು.

"ಬಂದೆಯಾ ಶಾಂತೂ!" ಆಕೆಯಿಂದ ಅಳು ತಡೆದುಕೊಳ್ಳಲು ಸಾಧ್ಯ ವಾಗಲಿಲ್ಲ. ಕಣ್ಣುಗಳಿಂದ ನೀರು ಒಂದೇಸವನೆ ಹರಿಯುತ್ತಿತ್ತು.

"ಈಗ ಹೇಗಿದೆ ?"

"ತಲೆ ತುಂಬಾ ಭಾರವಾಗಿದೆ ಶಾಂತೂ. ಎದ್ದು ಕೂಡಲೂ ಸಾಧ್ಯ ವಿಲ್ಲ. ಈ ಆಕಸ್ಮಿಕ ಕಾಯಿಲೆಯನ್ನು ಕಂಡು ನನಗೂ ಆಶ್ಚರ್ಯವಾಗಿದೆ."

ಶಾಂತಿಯ ಒಂದು ಕೈ ಅವರ ಹಣೆಯ ಮೇಲಿತ್ತು. ಮತ್ತೊಂದು ಕೈ ಮೆಲ್ಲಗೆ ಅವರ ಎದೆಯ ಮೇಲೆ ಆಡುತ್ತಿತ್ತು. "ಈಗೇನು ಮಾಡಲಿ ?" ಅಳುತ್ತಲೇ ಇದ್ದಳು.

" ಅಳಬೇಡ ಶಾಂತೂ, ಬೇಗನೇ ಗುಣವಾಗುವುದು. ಇಷ್ಟಕ್ಕೆಲ್ಲ ಅಳುತ್ತಾರೆಯೇ ? "

ಸಮಾಧಾನ ಹೇಳುವುದು ಸುಲಭ. ಅವಳ ನೋವು ಎಂತಹುದೆಂದು ಅದನ್ನು ಅನುಭವಿಸಿದವರಿಗೇ ಗೊತ್ತು.

ಮತ್ತೆ ಕಂಪೌಂಡರರ ಕಡೆಗೆ ತಿರುಗಿ ಯಾವುದೋ ಮದ್ದು ತರುವುದಕ್ಕೆ ಹೇಳಿದರು.

" ಹಣೆ ಸಿಡಿದು ಹೋಗುತ್ತಿದೆ ಶಾಂತೂ. ಹಣೆಯ ಮೇಲೆ ಒಂದಿಷ್ಟು ಒದ್ದೆ ಬಟ್ಟೆ ಇಡುವಿಯಾ ? "

ಅವಳು ಎದ್ದು ಬಟ್ಟೆಯನ್ನು ತಣ್ಣೀರಲ್ಲಿ ತೊಯ್ಸಿ ಹಣೆಯ ಮೇಲಿರಿಸಿದಳು. ಒಂದೇ ಕ್ಷಣದಲ್ಲಿ ನೀರು ಆರಿ ಬಟ್ಟೆ ಒಣಗಿ ಹೋಗಿತ್ತು. ಪುನಃ ಒದ್ದೆ ಮಾಡಿ ಇಟ್ಟಳು.

" ನಿಮ್ಮ ಕಾಯಿಲೆಯನ್ನು ನಾನು ಹೊತ್ತುಕೊಳ್ಳುವಂತಿದ್ದರೆ? "

" ಹಾಗನ್ನಬಾರದು ಶಾಂತೂ, ಬಂದದ್ದು ಹೋಗಲಿ ಎನ್ನಬೇಕಲ್ಲದೆ ಇಲ್ಲದ್ದನ್ನು ಎಂದೂ ಬಯಸಬಾರದು. "

" ಹೂಂ. ಹೌದು, ನನ್ನ ನೋವು ನಿಮಗೆ ಹೇಗೆ ತಿಳಿಯಬೇಕು ? "

ಹಣೆಯ ಮೇಲಿನ ಬಟ್ಟೆ ಒಣಗಿತ್ತು. ಪುನಃ ತೋಯಿಸಿ ಇಟ್ಟಳು. ತಲೆಯ ಸಿಡಿತವನ್ನು ಸಹಿಸಲಾರದೆ ಅವರು ನರಳುತ್ತಿದ್ದರು. ಶಾಂತಿಗೆ ಕರುಳು ಕಿತ್ತು ಬರುವಂತಾಗುತ್ತಿತ್ತು. ' ದೇವರೇ, ನನ್ನ ಮಾಂಗಲ್ಯವನ್ನು ಕಸಿದುಕೊಳ್ಳಬೇಡ.' ಎಂದು ಬೇಡುವುದಕ್ಕಿಂತ ಬೇರೇನನ್ನೂ ಮಾಡುವಂತಿರಲಿಲ್ಲ. ಶಾಂತಿ ಅವರ ಆರೈಕೆಗಾಗಿ ಅಲ್ಲಿಯೇ ಉಳಿದಳು. ' ಅವರಿಗೆ ಗುಣವಾಗದೆ ತಾನು ಏಳುವಂತಿಲ್ಲ ' ಎಂದು ನಿರ್ಧಾರ ಮಾಡಿಬಿಟ್ಟಳು.

ಒಂದು ದಿನ ಕಳೆಯಿತು. ಗುಣವಾಗುವ ಚಿಹ್ನೆಯೊಂದೂ ಕಾಣಿಸಲಿಲ್ಲ. ಒಂದೇ ದಿನದಲ್ಲಿ ತೀರಾ ಸೋತು ಹೋಗಿದ್ದರು. ಶಾಂತಿ ಒಂದು ಕ್ಷಣವೂ ಅವರ ಪಕ್ಕದಿಂದ ಏಳಲಿಲ್ಲ. ನಿದ್ದೆ ಊಟ ಎರಡೂ ಇಲ್ಲದೆ ಕುಳಿತಿದ್ದಳು.

ರಾಮರಾಯರೂ ತಮಗೆ ತಿಳಿದ ಮಟ್ಟಿಗೆ ಚಿಕಿತ್ಸೆ ನಡೆಸಿದರು. ಇಂಜೆಕ್ಶನ್ ಚುಚ್ಚಿದರು. ಡಾಕ್ಟರರು ಏನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ಒಮ್ಮೊಮ್ಮೆ

ಕಣ್ಣು ತೆರೆದು ಅತ್ತಿತ್ತ ನೋಡುತ್ತಿದ್ದರು. ಎದುರಿಗೆ ಶಾಂತಿಯನ್ನು ಕಂಡೊಡನೆ ಮತ್ತೆ ಕಣ್ಣು ಮುಚ್ಚುವರು.

ನಾಲ್ಕನೇ ದಿನವೂ ಬಂದಿತು; ಆದರೂ ಜ್ವರ ಇಳಿಮುಖವಾಗಲಿಲ್ಲ. ಶಾಂತಿ ನಾಲ್ಕು ದಿನವೂ ಉಪವಾಸ; ರಾತ್ರೆಯಿಡೀ ನಿದ್ದೆಯಿಲ್ಲದೆ ಇಳಿದು ಹೋಗಿದ್ದಳು. ರಾಮರಾಯರು ತಂಗಿಯ ಅವಸ್ಥೆಯನ್ನು ಕಂಡು ಮರುಗುತ್ತಿದ್ದರು.

"ಒಂದಿಷ್ಟು ಊಟವಾದರೂ ಮಾಡಬಾರದೇ ಶಾಂತೂ." ಎಂದರೆ ಸಾಕು, ಅಳುವಿನ ಹೊಳೆಯನ್ನೇ ಹರಿಸಿಬಿಡುತ್ತಿದ್ದಳು.

"ನಾನು ಮನುಷ್ಯಳಲ್ಲವೇ ಅಣ್ಣ? ಅವರು ಮಲಗಿರುವಾಗ ನನ್ನಿಂದ ಊಟ ಮಾಡಲು ಸಾಧ್ಯವಿದೆಯೆ?" ಇದಕ್ಕೆ ಉತ್ತರ ಕೊಡುವುದು ಯಾರಿಂದಲೂ ಸಾಧ್ಯವಿರಲಿಲ್ಲ.

"ಹೀಗೆಯೇ ಎಷ್ಟು ದಿನ ಉಪವಾಸವಿರುವಿಯಮ್ಮ?"

"ಅವರಿಗೆ ಗುಣವಾಗುವ ವರೆಗೆ."

ಮೂರು ದಿನಗಳಿಂದಲೂ ಆಕೆ ಒಂದು ರೀತಿಯ ವ್ರತವನ್ನೇ ಆರಂಭಿಸಿದ್ದಳು; ರಾತ್ರೆಯಿಡೀ ಅವರ ಪಕ್ಕದಲ್ಲಿಯೇ ಕುಳಿತಿರುವುದು; ನಸುಕಿನಲ್ಲಿ ಎದ್ದು ಸ್ನಾನ ಮಾಡಿ ದೇವರ ಪೂಜೆ ಮಾಡುವುದು. 'ಅವರಿಗೆ ಗುಣವಾಗಿ ಅವರ ಕಾಯಿಲೆ ನನಗೆ ಬರುವಂತಾಗಲಿ ದೇವರೇ' ಎಂದು ಕಣ್ಣೀರು ಸುರಿಸುವುದು. ಆಮೇಲೆ ಬಂದು ಅವರ ಪಕ್ಕದಲ್ಲಿ ಕುಳಿತರೆ ದಿನವಿಡೀ ಅಲ್ಲಿಯೇ. ಮೂರೇ ದಿನಗಳಲ್ಲಿ ಕಣ್ಣುಗಳು ಒಳಸೇರಿ ರೋಗಿಯಂತಾಗಿಬಿಟ್ಟಿದ್ದಳು. ಅದು ತನ್ನ ಸ್ವಾಮಿಯ ಪ್ರಾಣ ಉಳಿಸಿಕೊಳ್ಳಲು ಮಾಡುತ್ತಿರುವ ತಪಸ್ಸು.

ಮೂರು ದಿನ ಕಳೆದು ನಾಲ್ಕನೇ ದಿನ ಬಂದಿತು; ಅಂದು ಶಾಂತಿಯ ಮದುವೆ ಆಗಬೇಕೆಂದಿದ್ದ ದಿನ. ಆಕೆ ಶೃಂಗಾರವಾಗಿ ಮೆರೆದಾಡಬೇಕಾದ ದಿನವದು. ಆದರೆ ಅಂದೇ ವಿಧಿ ಅವಳ ಬದುಕನ್ನು ಮಣ್ಣುಗೂಡಿಸಿತು. ಅವಳ ತಪಸ್ಸು ಫಲಿಸಲಿಲ್ಲ; ಮಾಂಗಲ್ಯ ಕಂಠವನ್ನು ಬಳಸುವ ಮೊದಲೇ ಹರಿದುಹೋಗಿತ್ತು.

ಸಂಜೆಯಾಗುವಾಗ ಡಾಕ್ಟರರು ಮೆಲ್ಲನೆ ಕಣ್ದೆರೆದರು. ಕಣ್ಣುಗಳಲ್ಲಿ ನಿರಾಶೆ ತುಂಬಿತ್ತು.

"ಶಾಂತೀ" ಎಂದರು ಮೆಲ್ಲನೆ. ಅವಳು ಕಣ್ಣರಳಿಸಿ ಅವರನ್ನೇ ನೋಡಿದಳು. ಎರಡು ದಿನ ಕಳೆದು ಮೊದಲ ಬಾರಿ ಅವರು ಮಾತನಾಡುತ್ತಿರುವುದು. "ಇಂದು ಯಾವ ವಾರ ಶಾಂತೂ?"

"ಮಂಗಳವಾರ." ಹೇಳುವಾಗಲೂ ಅವಳ ನಾಲಗೆ ತಡವರಿಸುತ್ತಿತ್ತು.

"ಮಂಗಳವಾರ--ಇಂದು ನಮ್ಮ ಮದುವೆಯಲ್ಲವೇ ಶಾಂತೂ?" ಅಷ್ಟು ಹೇಳಿ ಒಂದು ಕ್ಷಣ ಕಣ್ಣು ಮುಚ್ಚಿದರು. ಮತ್ತೆ ಮೆಲ್ಲನೆ ಕಣ್ದೆರೆದು ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡರು; ತುಟಿಗೊತ್ತಿಕೊಂಡರು; ಎಷ್ಟೋ ಹೊತ್ತಿನ ವರೆಗೆ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ. ಕೊನೆಗೆ ಮೆಲ್ಲನೆ ಮಾತನಾಡಿದರು.

"ನಾನು ದುರ್ದೈವಿ ಶಾಂತೂ; ನಿನ್ನಂತಹ ದೇವತೆಯನ್ನು ಬಾಳಲ್ಲಿ ನಗಿಸುವ ಭಾಗ್ಯ ನನ್ನ ಪಾಲಿಗೆ ಇಲ್ಲದೆ ಹೋಯಿತು. ನೀನು....ನೀನು ಬೇರೆ ಮದುವೆ ಮಾಡಿಕೊ...."

ಶಾಂತಿ ಅವಸರವಾಗಿ ಅವರ ತುಟಿಗಳ ಮೇಲೆ ಕೈಯಿರಿಸಿದಳು. ಮೂರು ದಿನಗಳ ಹಿಂದೆ ಹರಿಯಲು ಪ್ರಾರಂಭವಾದ ಅವಳ ಕಣ್ಣೀರ ಪ್ರವಾಹ ಇನ್ನೂ ನಿಂತಿರಲಿಲ್ಲ. "ಹಾಗನ್ನಬೇಡಿ ಸ್ವಾಮೀ. ಅದಕ್ಕಿಂತಲೂ 'ನೀನು ಸತ್ತು ಹೋಗು' ಎಂದು ಆಶೀರ್ವದಿಸಿ."

ಅವರ ಮುಖದ ಮೇಲೆ ಕ್ಷೀಣ ಮಂದಹಾಸ ಮಿನುಗಿತು. ಅತೀವ ವೇದನೆಯು ಕಳೆ ತುಂಬಿತ್ತು ಅದರಲ್ಲಿ.

"ಇನ್ನು ಎಲ್ಲವೂ ವ್ಯರ್ಥ ಶಾಂತೂ—ನಾನು ಬದುಕುವಂತಿಲ್ಲ. ನನ್ನನ್ನು ಮರೆಯುವ ಪ್ರಯತ್ನ ಮಾಡು." ಮಾತುಗಳು ಕ್ಷೀಣವಾಗಿ ಹೊರಡುತ್ತಿದ್ದವು. ಅದನ್ನು ತಡೆಯಬೇಕೆಂದು ಶಾಂತಿ ಪ್ರಯತ್ನ ಮಾಡಿದಳು; ಸಾಧ್ಯವಾಗಲಿಲ್ಲ. ಗಾಬರಿಯಾಗಿ ಅಣ್ಣನನ್ನು ಕೂಗಿದಳು.

"ನೋಡಿ ಅಣ್ಣ, ಅವರು ಏನೆಲ್ಲಾ ಮಾತನಾಡುತ್ತಾರೆ."

"ನಾನು ಭಾಗ್ಯಹೀನ ಕಂಪೌಂಡರ್, ಈ ಆಸ್ಪತ್ರೆಯನ್ನು ನೀವು ನಡೆಸಿ ಮತ್ತು ನಿಮ್ಮ ತಂಗಿಯನ್ನು ಯೋಗ್ಯ ವರನಿಗೆ ಕೊಟ್ಟು ಮದುವೆ ಮಾಡಿಸಿ...."

ತುಂಬಾ ಆಯಾಸವಾದಂತೆ ಕಂಡಿತು. ಪುನಃ ಕಣ್ಣು ಮುಚ್ಚಿದರು.

ಶಾಂತಿ ಗಾಬರಿಯಾಗಿ ಅವರ ಮುಖದ ಸಮೀಪಕ್ಕೆ ತನ್ನ ಮುಖವನ್ನೊಯ್ದಳು. ಅವರು ಕಣ್ದೆರೆದರು.

"ಗಾಬರಿಯಾದೆಯಾ ಶಾಂತೂ ? ಇನ್ನು ಏನು ಮಾಡಿದರೂ ಉಪಯೋಗವಿಲ್ಲ."

ಮಾತನಾಡಿ ಗಂಟಲಾರಿತ್ತು. "ನೀರು" ಎಂದರು ಮೆಲ್ಲನೆ. ಶಾಂತಿ ಬಾಯಿಗೆ ಒಂದಿಷ್ಟು ನೀರು ಹೊಯ್ದಳು. ಅವಳ ಕೈಗಳು ನಡುಗುತ್ತಿದ್ದುವು.

"ನನ್ನನ್ನು ಮರೆತುಬಿಡು ಶಾಂತೂ....ನಿನಗೆ....ಕಲ್ಯಾಣ...." ಮುಂದೆ ಮಾತು ಹೊರಡಲಿಲ್ಲ. ನಾಲಗೆ ಮುಗುಚಿತು. ಕಣ್ಣುಗಳು ಮುಚ್ಚಿದುವು. ಕತ್ತು ಪಕ್ಕಕ್ಕೆ ವಾಲಿತು. ಅವರ ಆತ್ಮಜ್ಯೋತಿ ನಂದಿಹೋಗಿತ್ತು. ಶಾಂತಿ ಮಂಕಳಂತೆ ಒಂದು ಕ್ಷಣ ಕುಳಿತಳು. ಇದೆಲ್ಲವೂ ಕನಸಿನಂತೆ ಕಂಡಿತು. ಮರುಕ್ಷಣದಲ್ಲಿ ಎಚ್ಚತ್ತಳು. ತನ್ನ ಬಾಳು ಮುಗಿಯಿತೆಂಬುದು ತಿಳಿಯಿತು. ಕಣ್ಣು ಮುಚ್ಚಿ ಶಾಂತವಾಗಿ ಮಲಗಿದ್ದ ತನ್ನ ಸ್ವಾಮಿಯನ್ನು ನೋಡಿದಳು. ಅದು ಇನ್ನು ಎಚ್ಚರವಾಗಲು ಸಾಧ್ಯವಿಲ್ಲದ ಚಿರನಿದ್ರೆಯೆನ್ನುವುದು ತಿಳಿದೊಡನೆ ಎಚ್ಚರ ತಪ್ಪಿ ಅವರೆದೆಯ ಮೇಲೆ ಬಿದ್ದುಬಿಟ್ಟಳು.

ಅವರು ಹೀಗಾಗದೆ ಸೌಖ್ಯವಾಗಿರುತ್ತಿದ್ದರೆ, ಅಂದು ರಾತ್ರೆ ಶಾಂತಿ ಅವರ ತೋಳತೆಕ್ಕೆಯಲ್ಲಿ ಮೈಮರೆಯುತ್ತಿದ್ದಳು. ಅವರ ಬದುಕನ್ನು ತನ್ನೆದೆಯಲ್ಲಿ ತುಂಬಿಕೊಳ್ಳುತ್ತಿದ್ದಳು. ಆದರೆ ವಿಧಿಯ ಕ್ರೂರ ಹಾಸ್ಯ ಅವಳ ಬಾಳ ಕುಡಿಯನ್ನು ಕಿವುಚಿತು. ಆನಂದದ ಪ್ರೇಮಾಲಿಂಗನದಲ್ಲಿ ಮೈಮರೆಯಬೇಕಾದವಳು, ವಿಧಿಯ ಕ್ರೂರ ಅಪ್ಪುಗೆಯಲ್ಲಿ ಮೈಮರೆತಳು. ನಿರಾಶೆಯ ನೋವನ್ನು ಎದೆಯಲ್ಲಿ ತುಂಬಿಸಿಕೊಂಡಳು.

ಇಂದಿನ ಶುಭಮುಹೂರ್ತದಲ್ಲಿ ಸುಮಂಗಲೆಯಾಗಿ ಮೆರೆಯಬೇಕಾದವಳು ವಿಧವೆಯಾದಳು. ಜಗತ್ತಿನ ದೃಷ್ಟಿಯಲ್ಲಿ ಅವಳು ವಿಧವೆಯಲ್ಲ. ಆದರೆ ಇನ್ನು ಈ ಜನ್ಮದಲ್ಲಿ ಅವಳು ಮುತ್ತೈದೆಯಾಗಿ ಬದುಕಲು ಸಾಧ್ಯವಿರಲಿಲ್ಲ. ಸುಖದ ಛಾಯೆಯನ್ನು ಮಾತ್ರ ಕಂಡು ಅನಾಥೆಯಾದ ವಿಧವೆಯಾದಳು ಶಾಂತಿ.

ರಾಮರಾಯರು ಕಣ್ಣೆದುರಿನ ದೃಶ್ಯವನ್ನು ಕಂಡು ಒಂದು ಕ್ಷಣ ನಿಶ್ಚಲವಾಗಿ ನಿಂತರು. ಏನು ಮಾಡಬೇಕೆಂಬುದೇ ಅವರಿಗೆ ತಿಳಿಯದಾಯಿತು—

ಆದರೆ ಅವರು ಅಳುತ್ತಿರಲಿಲ್ಲ. ತನ್ನ ಸುತ್ತಲಿನ ಜಗತ್ತೆಲ್ಲವೂ ತಿರುಗುತ್ತಿರುವಂತೆ ಭಾಸವಾಯಿತು.

ಹೆಚ್ಚು ಹೊತ್ತಿನ ವರೆಗೆ ಹಾಗೆಯೇ ಇರುವುದಕ್ಕೆ ಸಾಧ್ಯವಿರಲಿಲ್ಲ. ಮೆಲ್ಲನೆ ತಂಗಿಯ ಬಳಿಗೆ ಹೋದರು. ಅವಳ ಬೆನ್ನಮೇಲೆ ಕೈಯಾಡಿಸಿದರು. ಅವರ ಕೈ ನಡುಗುತ್ತಿತ್ತು.

ಮೆಲ್ಲನೆ ತಂಗಿಯನ್ನು ಹಿಡಿದು ಅಲುಗಿಸಿದರು. ಆದರೆ ಅವಳಿಗೆ ಎಚ್ಚರವಿರಲಿಲ್ಲ. ಅವಳನ್ನೆತ್ತಿ ಪಕ್ಕದ ಚಾಪೆಯ ಮೇಲೆ ಮಲಗಿಸಿದರು. ಮೂರು ದಿನಗಳ ಪರಿಶ್ರಮದಿಂದ ಮೊದಲೇ ಸೊರಗಿ ಹೋಗಿದ್ದಳು. ಅದರ ಮೇಲೆ ಈ ವಿಡಂಬನೆ.

## ೧೫

"ನೀನು ಮಾನವಿಯಲ್ಲ ತಂಗಿ, ಶಾಪಗ್ರಸ್ತ ದೇವತೆ. ಈ ಭಾಗ್ಯ ಹೀನನ ಮನೆಯಲ್ಲಿ ಹುಟ್ಟಿದ್ದರಿಂದಲೇ ನಿನ್ನ ಅವಸ್ಥೆ ಹೀಗಾಯಿತು." ಮೆಲ್ಲನೆ ಅವಳ ಹಣೆಯ ಮೇಲೆ ಕೈಯಾಡಿಸಿದರು. ತುಂಬಾ ಹೊತ್ತಿನ ಮೇಲೆ ಆಕೆ ಕಣ್ತೆರೆದಳು. ಅವುಗಳಲ್ಲಿ ಜೀವಕಳೆ ಇದ್ದಂತಿರಲಿಲ್ಲ. ಏಳುವಷ್ಟು ತ್ರಾಣವೂ ಅವಳಲ್ಲಿದ್ದಿಲ್ಲ. ಕಣ್ಣರಳಿಸಿ ಅಣ್ಣನನ್ನು ನೋಡಿದಳು. ಮತ್ತೆ ಏನೋ ನೆನಪಾದಂತಾಗಿ ಪಕ್ಕದ ಮಂಚದ ಕಡೆಗೆ ಕಣ್ಣು ಹೊರಳಿಸಿದಳು.

"ಅಣ್ಣಾ ಅವರು...." ಎಂದು ಹುಚ್ಚಿಯಂತೆ ಕೂಗಿ ಏಳುವ ಪ್ರಯತ್ನ ಮಾಡಿದಳು. ಆದರೆ ಸಾಧ್ಯವಾಗಲಿಲ್ಲ. ಪುನಃ ಎಚ್ಚರ ತಪ್ಪಿ ಬಿದ್ದು ಬಿಟ್ಟಳು.

ಪುನಃ ಎಚ್ಚರವಾಗಬೇಕಾದರೆ ಒಂದೆರಡು ಗಂಟೆಗಳ ಕಾಲ ಹಿಡಿಯಿತು. ಆದಿನ ಅವರಿಗೂ ಊಟವಿಲ್ಲ. ಗೋಪುವನ್ನು ಹೋಟೇಲಿಗೆ ಕಳುಹಿಸಿದ್ದರು.

ತಂಗಿಗೆ ಕುಡಿಯಲೆಂದು ಒಂದಿಷ್ಟು ಹಾಲು ತರಿಸಿದರು.

"ಅಣ್ಣಾ, ಅವರು ಹೊರಟು ಹೋದರೇ? ನನ್ನನ್ನು ಕರೆದುಕೊಂಡು ಬರಲು ಹೇಳಲಿಲ್ಲವೇ?" ಮೈಮೇಲಿನ ಪ್ರಜ್ಞೆಯಿಲ್ಲದವರಂತೆ ಮಾತನಾಡುತ್ತಿದ್ದಳು.

" ಒಂದಿಷ್ಟು ಹಾಲು ಕುಡಿ ಶಾಂತೂ, ಮೂರು ದಿನದಿಂದ ಉಪವಾಸ ಇರುವಿಯಲ್ಲವೇ ? "

" ಊಹುಂ, ಅವರು ಸಿಟ್ಟಾಗಿ ಹೋದರು ; ನಾನು ಕುಡಿಯುವುದಿಲ್ಲ. ಅವರೇ ಬಂದು ಕುಡಿಸಿದರೆ ಕುಡಿಯುವೆ. ಇಲ್ಲವಾದರೆ ಹೀಗೇ ಸತ್ತು ಹೋಗುವೆ. "

" ಹುಚ್ಚಿಯ ಹಾಗೆ ಆಡಬೇಡ ಶಾಂತೂ, ಇಗೋ ಹಾಲು ಕುಡಿ. " ಅವರಿಗೂ ಅಳು ಬಾರದಿರಲಿಲ್ಲ.

" ನಾನು ಹಾಲು ಕುಡಿಯಬೇಕಾದರೆ ಅವರು ಬರಬೇಕು. ಅವರು ಬಂದೇ ಬರುತ್ತಾರೆ. ನನ್ನ ಮೇಲೆ ಅವರಿಗೆ ಎಷ್ಟು ಪ್ರೀತಿ ಗೊತ್ತೇ ಅಣ್ಣಾ ? ನಾನು ಅವರ ರಾಣಿಯಂತೆ, ಅವರು ನನ್ನ ರಾಜ....ಹ ! ಹ ! ಹ ! ಹ ! " ಆಕೆ ಹುಚ್ಚಿಯಂತೆ ಒಂದೇಸವನೆ ಮಾತನಾಡುತ್ತಿದ್ದಳು.

ರಾಮರಾಯರಿಗೂ ಗಾಬರಿಯಾಗದಿರಲಿಲ್ಲ.— ಇವಳಿಗೇನು ಹುಚ್ಚು ಹಿಡಿಯಿತೇ ?

" ಶಾಂತೂ ಶಾಂತೂ,...." ಮುಂದೆ ಮಾತು ಹೊರಡಲಿಲ್ಲ. ಗಂಟಲು ಕಟ್ಟಿತು. ಶಾಂತಿ ಹುಚ್ಚಳಂತೆ ಕಣ್ಣರಳಿಸಿ ನೋಡುತ್ತಿದ್ದಳು. ' ನಿಮ್ಮ ಮಾತೇ ನನಗೆ ತಿಳಿಯುವುದಿಲ್ಲ ' ಎನ್ನುವಂತಿತ್ತು ಅವಳ ನೋಟ. ಅಣ್ಣನ ಕೈಯನ್ನು ಎತ್ತಿ ಹಣೆಯ ಮೇಲಿರಿಸಿಕೊಂಡಳು. ಮತ್ತೆ ಅದನ್ನು ದೂಡಿಬಿಟ್ಟಳು.

" ಛಿ ! ಇದು ಅವರ ಕೈಯಲ್ಲ. ಅವರ ಕೈ ಎಷ್ಟು ತಣ್ಣಗೆ.... ಓ ! ಎಷ್ಟು ಮಧುರ. ನೀವ್ಯಾರು ಹೋಗಿ, ಬೇಗ ಹೋಗಿ, ಅವರನ್ನು ಬರಹೇಳಿ. ನಿಮ್ಮ ರಾಣಿ ಕರೆಯುತ್ತಾಳೆ ಅನ್ನಿ. ಅವರು ಬಾರದಿರುವುದಿಲ್ಲ. ಹೂಂ, ಓಡಿ " ಎಂದು ಗಟ್ಟಿಯಾಗಿ ಚೀರಿ ಪಕ್ಕಕ್ಕೆ ಹೊರಳಿದಳು. ಕಣ್ಣುಗಳು ಮುಚ್ಚಿದುವು. ರಾಮರಾಯರು ಗಾಬರಿಯಾಗಿ ತಂಗಿಯನ್ನು ಹಿಡಿದು ಅಲುಗಿಸಿದರು. ಆದರೆ ಆಕೆಗೆ ಎಚ್ಚರವಿರಲಿಲ್ಲ. ನಾಡಿಯನ್ನು ಪರೀಕ್ಷಿಸಿದರು. ತುಸು ಧೈರ್ಯವಾಯಿತು.

ಒದ್ದೆ ಬಟ್ಟೆಯನ್ನು ಹಣೆಯ ಮೇಲಿರಿಸಿದರು; ಹಾಗೇ ಮಲಗಲಿ ಎಂದುಕೊಂಡರು. ಅವರಿಗೂ ಊಟ ಬೇಕಾಗಿರಲಿಲ್ಲ. ಅಲ್ಲಿಯೇ ಪಕ್ಕದಲ್ಲಿ ಚಾಪೆಯನ್ನು ಹಾಸಿಕೊಂಡು ಮಲಗಿದರು.

ಶಾಂತಿಗೆ ರಾತ್ರಿ ಬೆಳಗಾಗುವ ವರೆಗೆ ಎಚ್ಚರವಾಗಲಿಲ್ಲ. ಆಯಾಸಗೊಂಡ ರಾಮರಾಯರಿಗೂ ಚೆನ್ನಾಗಿ ನಿದ್ದೆ ಹತ್ತಿಬಿಟ್ಟಿತ್ತು.

ಎಚ್ಚರವಾಗುವಾಗ ಬೆಳಕು ಹರಿದಿತ್ತು. ಕಣ್ಣನ್ನು ತಂಗಿಯ ಚಾಪೆಯ ಕಡೆಗೆ ಹೊರಳಿಸಿದರು, ಅದು ಬರಿದಾಗಿತ್ತು.

ಗಾಬರಿಯಿಂದ ಅವಸರವಾಗಿ ಎದ್ದರು.

"ಶಾಂತೂ ಶಾಂತೂ" ಎಂದು ಕೂಗುತ್ತಾ ಒಳಕೋಣೆಗೆ ಓಡಿದರು. ಅಲ್ಲಿಯ ದೃಶ್ಯವನ್ನು ಕಂಡು ಸ್ತಂಭಿತರಾದರು.

ಶಾಂತಿ ಆಗ ತಾನೇ ತಲೆಗೆ ಸ್ನಾನ ಮಾಡಿ ತನ್ನ ನೀಳವಾದ ಕಪ್ಪು ಕೂದಲನ್ನು ಬೆನ್ನ ಮೇಲೆ ಇಳಿಬಿಟ್ಟಿದ್ದಳು. ಕಣ್ಣು ಮುಚ್ಚಿ ಪದ್ಮಾಸನ ಹಾಕಿಕೊಂಡು ಧ್ಯಾನಮಗ್ನಳಾಗಿದ್ದಳು. ಎದುರಿಗಿದ್ದ ದೇವರ ಪಟವೊಂದು ಒಡೆದು ಚೂರಾಗಿ ಬಿದ್ದಿತ್ತು. ತಂಗಿಯ ಮನೋಭಾವವನ್ನು ತಿಳಿದುಕೊಳ್ಳಲು ಅವರಿಗೆ ತಡವಾಗಲಿಲ್ಲ.

"ಶಾಂತೂ" ಎಂದರು ಮೆಲ್ಲನೆ. ಅವಳು ಮೆಲ್ಲನೆ ಕಣ್ದೆರೆದಳು. ದೃಷ್ಟಿಯನ್ನು ಅಣ್ಣನೆಡೆಗೆ ತಿರುಗಿಸಿದಳು.

'ಇವಳಿನ್ನು ಸಂಸಾರಿಯಲ್ಲ' ಎಂದಿತು ಅವರ ಹೃದಯ. ಅವರ ಕಲ್ಪನೆ ಸುಳ್ಳಾಗಲಿಲ್ಲ. ಡಾಕ್ಟರರ ಜೊತೆಯಲ್ಲಿ ಅವಳ ಪ್ರಾಪಂಚಿಕ ಸುಖದ ಬಯಕೆಗಳೆಲ್ಲವೂ ಸುಟ್ಟು ಬೂದಿಯಾಗಿದ್ದುವು. ಅವಳ ಹಣೆ ಬರಿದಾಗಿದ್ದುದು ಅವರ ಕಣ್ಣಿಗೆ ಕಾಣಿಸದಿರಲಿಲ್ಲ. ಆದರೂ ಅವರು ಅದರ ಕುರಿತು ಪ್ರಶ್ನಿಸುವ ಗೋಜಿಗೆ ಹೋಗಲಿಲ್ಲ.

"ಅಣ್ಣ, ಆಸ್ಪತ್ರೆಯನ್ನೇನು ಮಾಡುವಿರಿ?"

"ಅವರು ಏನಾದರೂ ಹೇಳಿದ್ದರೆ ಶಾಂತೂ?"

"ಹೌದು. ಇಲ್ಲಿಯ ದೀನರ ಸೇವೆಗೆಂದು ಅವರು ಬಂದಿದ್ದರು; ಆಸ್ಪತ್ರೆ ಮುಚ್ಚಬಾರದು; ರೋಗಿಗಳನ್ನು ಇಲ್ಲಿಯೇ ನಿಲ್ಲಿಸಿಕೊಂಡು ಆರೈಕೆ ಮಾಡುವ ವ್ಯವಸ್ಥೆಯನ್ನು ಮಾಡಬೇಕು ಎನ್ನುತ್ತಿದ್ದರು. ಈ ಮನೆ ಅದಕ್ಕಾಗಿಯೇ ಮೀಸಲಾಗಿರಲಿ. ರೋಗಿಗಳ ಆರೈಕೆ ನಾನು ಮಾಡುವೆ. ಅವರ ಕೆಲಸವನ್ನು ನಾನು ಮುಂದುವರಿಸುವೆ."

"ಇದು ನಿನ್ನ ಕೊನೆಯ ನಿರ್ಧಾರವೇ ಶಾಂತೂ?"

" ಹೌದು, ಇದು ನನ್ನ ಮಾತಲ್ಲ ಅಣ್ಣ. ನನ್ನ ಹೃದಯದಲ್ಲಿರುವ ಅವರೇ ಇದನ್ನು ಆಡುತ್ತಿದ್ದಾರೆ. ಅವರು ನನ್ನನ್ನಗಲಿ ಹೋಗಿಲ್ಲ. ಅದು ಅವರಿಂದ ಸಾಧ್ಯವಿಲ್ಲ." ಮತ್ತೆ ಅವಳಲ್ಲಿ ನಿಲ್ಲಲಿಲ್ಲ. ಬಿರುಗಾಳಿಯಂತೆ ಹೊರಟು ಹೋದಳು. ಉಪವಾಸವಿದ್ದರೂ ದೇಹದಲ್ಲಿ ಹೊಸ ಶಕ್ತಿಯ ಸಂಚಾರವಾಗಿತ್ತು.

ರಾಮರಾಯರು ಮಾತನಾಡದೆ ಪ್ರಾತರ್ವಿಧಿಗಳನ್ನು ತೀರಿಸಿದರು. ಗೋಪುವನ್ನು ಹೊಟೇಲಿಗೆ ಕಳುಹಿಸಿ ಬೆಳಗಿನ ಉಪಹಾರವನ್ನು ಅಲ್ಲಿಗೇ ತರಿಸಿದರು. ಶಾಂತಿ ಯಾವ ತಡೆಯೂ ಇಲ್ಲದೆ ಅದನ್ನು ಸ್ವೀಕರಿಸಿದಳು.

" ಮಧ್ಯಾಹ್ನ ಇಲ್ಲಿಯೇ ಅಡುಗೆ ಮಾಡುವೆನಣ್ಣ. ಮನೆಯ ಸಾಮಾನೆಲ್ಲ ಇಲ್ಲಿಯೇ ತರಿಸು."

" ಈಗಲೇ ಏನವಸರ ಶಾಂತೂ ? ತುಂಬಾ ದಣಿದಿರುವೆ. ಒಂದೆರಡು ದಿನ ವಿಶ್ರಾಂತಿ ತೆಗೆದುಕೊ."

" ಇನ್ನು ನನಗೆ ವಿಶ್ರಾಂತಿ ಇಲ್ಲಣ್ಣ. ಈ ದೇಹ ನನ್ನದಲ್ಲ, ಅವರದು. ಅವರ ಕರೆ ಬರುವವರೆಗೆ ಬದುಕಿರುವೆ. ಶಕ್ತಿ ಇದ್ದಷ್ಟು ದಿನ ದೀನ-ದುಃಖಿಗಳ ಸೇವೆ ಮಾಡುವೆ."

" ಅಲ್ಲಿಯೇ ಹೋಗಿ ಅಡುಗೆ ಮಾಡಿದರಾಯಿತು ಶಾಂತೂ, ಗೋಪುವೂ ಜೊತೆಗಿರುವ."

" ಇಲ್ಲಣ್ಣ, ನನ್ನನ್ನು ಒತ್ತಾಯಿಸಬೇಡ. ಇದು ನನ್ನ ಮನೆ. ಅವರು ನನಗಿತ್ತು ಹೋದ ಸಂಪತ್ತು. ಬದುಕಿರುವಷ್ಟು ಕಾಲ ಇದನ್ನು ಬಿಟ್ಟು ಬರಲಾರೆ."

ಅವಳ ಮಾತಿಗೆ ಪ್ರತಿ ಹೇಳುವುದು ಯಾರಿಂದಲೂ ಸಾಧ್ಯವಿರಲಿಲ್ಲ. ಸುಮ್ಮನೆ ಮನೆಯ ಕಡೆಗೆ ಹೋಗಿ ತಮ್ಮನ ಜೊತೆಯಲ್ಲಿ ಸಾಮಾನುಗಳೆಲ್ಲ ವನ್ನೂ ಹೊರಿಸಿಕೊಂಡು ಬಂದರು. ಶಾಂತಿ ಎಲ್ಲವನ್ನೂ ಓರಣವಾಗಿ ಇರಿಸಿ ದಳು. ಮನೆಗೆ ಹೊಂದಿಕೊಂಡು ಎರಡು ಕೋಣೆಗಳು ಪ್ರತ್ಯೇಕವಾಗಿದ್ದುವು. ಅವುಗಳಲ್ಲಿ ಒಂದು ಅಡುಗೆ ಮನೆಯಾಯಿತು. ಮತ್ತೊಂದು ಕೋಣೆಯನ್ನು ತನ್ನ ಉಪಯೋಗಕ್ಕೆಂದು ಇರಿಸಿಕೊಂಡಳು.

ಆಸ್ಪತ್ರೆಯಿದ್ದ ಕೋಣೆಗಳನ್ನುಳಿದು ವಿಶಾಲವಾದ ಇನ್ನೂ ಎರಡು

ಕೋಣೆಗಳಿದ್ದುವು. ಅವುಗಳನ್ನು ಸ್ವಚ್ಛ ಮಾಡಿ ರೋಗಿಗಳಿಗಾಗಿ ತೆರವು ಮಾಡಿಸಿಟ್ಟಳು. ಅಣ್ಣ ತಂಗಿಯ ಕೆಲಸವನ್ನು ನೋಡುತ್ತಿದ್ದರು. ನೋಡಿ ನಿಟ್ಟುಸಿರು ಬಿಡುತ್ತಿದ್ದರು. ಏನು ಬೇಕಾದರೂ ಮಾಡಿಕೊಳ್ಳಲಿ; ಹೇಗೂ ನೆಮ್ಮದಿಯಿಂದ ಇದ್ದರಾಯಿತೆಂದು ಸುಮ್ಮನಿರುತ್ತಿದ್ದರು. ಅವರ ಜೀವನದಲ್ಲಿ ಹೊಸ ಅಧ್ಯಾಯವೊಂದು ಆರಂಭವಾಗಿತ್ತು.

ಮಗ ತೀರಿಹೋದ ಸುದ್ದಿ ಕೇಳಿದೊಡನೆ ಅವರ ತಂದೆ ಪುತ್ತೂರಿನಿಂದ ಓಡಿ ಬಂದರು. ಕೊನೆಗಾಲದಲ್ಲಿ ಅವರಿಗಿದ್ದ ಒಂದೇ ಒಂದು ಆಸರೆಯೂ ಕಳೆದುಹೋಗಿತ್ತು. ಐಶ್ವರ್ಯವೇನೋ ಬೇಕಾದಷ್ಟು ಇದ್ದಿತ್ತು. ಆದರೆ ತಮ್ಮ ಕುಲದೀಪಕನೇ ಇಲ್ಲದ ಮೇಲೆ ಅದರಿಂದೇನು ಉಪಯೋಗ ?

ರಾಮರಾಯರು ವಿವರವಾಗಿ ಎಲ್ಲವನ್ನೂ ಹೇಳಿದರು. ಕೇಳಿ ಅವರು ತುಂಬಾ ಅತ್ತರು.

" ನಿಮ್ಮ ತಂಗಿ ಎಲ್ಲಿ ರಾಮರಾಯರೇ ? " ಅವರು ತಂಗಿಯನ್ನು ಕರೆದರು.

" ಇವರು ಡಾಕ್ಟರರ ತಂದೆ ಶಾಂತೂ."

ಅವರು ಎವೆಯಿಕ್ಕದೆ ಒಂದು ಕ್ಷಣ ಅವಳನ್ನೇ ನೋಡಿದರು. ಬರಿದಾದ ಹಣೆ, ಸೊರಗಿಹೋದ ದೇಹ, ನಿರಾಶೆಗೊಂಡ ದೃಷ್ಟಿ. ಎಲ್ಲವೂ ' ಇವಳು ಯೋಗಿನಿ ' ಎಂದು ಸೂಚಿಸುತ್ತಿದ್ದುವು. ಶಾಂತಿ ಓಡಿ ಬಂದು ಅವರ ಪಾದ ಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಕಣ್ಣೀರಿನ ಅಭಿಷೇಕ ಮಾಡಿದಳು. ಬಾಳ ಸಂತೆಯಲ್ಲಿ ದೀರ್ಘವಾದ ಅವಧಿಯನ್ನು ಕಳೆದವರಿಗೆ ಅವಳ ನೋವನ್ನು ತಿಳಿದುಕೊಳ್ಳಲು ಕಷ್ಟವಾಗಲಿಲ್ಲ.

" ಏಳು ಮಗೂ, ಮಾಧು ನಮ್ಮಿಬ್ಬರನ್ನೂ ಅನಾಥರನ್ನಾಗಿ ಮಾಡಿ ಹೊರಟು ಹೋದ. " ಅವರ ಕಣ್ಣುಗಳೂ ಹನಿಗೂಡಿದ್ದುವು.

" ನನ್ನೊಡನೆ ಬಾ ಮಗೂ, ಇನ್ನು ಈ ಮುದುಕನಿಗೆ ನೀನೇ ದಿಕ್ಕು. "

" ಇದನ್ನೆಲ್ಲ ಬಿಟ್ಟು ಹೇಗೆ ಬರಲಿ ? ಹೋಗುವಾಗ ಇದೆಲ್ಲವನ್ನೂ ನನಗೆ ಕೊಟ್ಟು ಹೋಗಿರುವರು. ಇದೆಲ್ಲವೂ ಅವರದಾಗಿ ನನ್ನ ಬಳಿ ಉಳಿದಿರುವ ಸಂಪತ್ತು. "

" ನೀನು ನನ್ನ ಸೊಸೆಯಲ್ಲಮ್ಮ ಮಗಳು. ಈ ಮುದುಕನನ್ನು ಹಾಗೆಂಬೇ

ಸಾಯಲು ಬಿಡುವೆಯಾ ? ಬೇಕಾದಷ್ಟು ಐಶ್ವರ್ಯವಿದೆ ಮಗೂ, ಆದರೆ ಎಲ್ಲವೂ ವ್ಯರ್ಥ ! ”

ಶಾಂತಿಗೆ ಏನು ಹೇಳುವುದೆಂದು ತಿಳಿಯದಾಯಿತು.

“ ಏನು ಮಾಡಲಿ ಸ್ವಾಮೀ, ನೀವು ಹೇಳಿದಂತೆ ಮಾಡುವೆ ” ಎಂದು ತನ್ನ ಹೃದಯದಲ್ಲಿದ್ದವರನ್ನೇ ಕೇಳಿದಳು. ಯಾರೋ ಅಸ್ಪಷ್ಟವಾಗಿ ನುಡಿದಂತಾಯಿತು. “ ಅಪ್ಪನ ಜೊತೆಯಲ್ಲಿ ಹೋಗು ಶಾಂತೂ, ಕೆಲವು ದಿನವಾದರೂ ಅವರ ಜೊತೆಯಲ್ಲಿ ಇದ್ದು ಬಾ. ನನ್ನ ಪ್ರತಿನಿಧಿಯಲ್ಲವೇ ನೀನು ? ” ಸಮಸ್ಯೆ ತೀರ್ಮಾನವಾಯಿತು ; ಅವರ ಅಪ್ಪಣೆಯಾಗಿತ್ತು. ಮರುದಿನವೇ ಶಾಂತೂ ಅವರ ಜೊತೆಯಲ್ಲಿ ಪುತ್ತೂರಿಗೆ ಹೊರಟಳು.

## ೧೬

ಪುತ್ತೂರಿನ ವ್ಯವಸ್ಥೆಯನ್ನು ಕಂಡರೆ ಶ್ರೀಮಂತರ ಮನೆಯೆಂದು ಹೇಳುವಂತಿತ್ತು. ಆಧುನಿಕ ಕಾಲದ ಚಿತ್ರಗಳಿಂದ ಅಲಂಕೃತವಾದ ಗೋಡೆಗಳು, ಹೊಸ ಮಾದರಿಯ ಸೋಫಾಸೆಟ್ಟು. ಮನೆಯಲ್ಲಿ ನಾಲ್ಕೈದು ಮಂದಿ ಆಳುಗಳಿದ್ದರು. ಇವರು ಬಂದುದನ್ನು ತಿಳಿದೊಡನೆ ವಿಧವೆಯೊಬ್ಬಳು ಹೊರಗೆ ಬಂದಳು.

“ ಇದು ನನ್ನ ಸೊಸೆ ಗೌರಾ.... ” ಅವರ ಗಂಟಲು ಕಟ್ಟಿತು. ಗೌರಮ್ಮ ಅವರ ತಂಗಿ, ಕೆಲವು ವರ್ಷಗಳ ಹಿಂದೆಯೇ ವಿಧವೆಯಾಗಿದ್ದಳು.

“ ಅಂದರೆ ಮಾಧೂಗೆ ಮದುವೆಯಾಗಿತ್ತೇ ? ” ಪ್ರಶ್ನೆಯ ಹಿಂದುಗಡೆ ಅಸೂಯೆ ಒಡೆದು ಕಾಣಿಸುತ್ತಿತ್ತು. ತನ್ನ ಅಧಿಕಾರವನ್ನು ಕಸಿದುಕೊಳ್ಳಲು ಹೊಸಬಳೊಬ್ಬಳು ಬಂದಳಲ್ಲಾ ಎಂದು ಅಸೂಯೆಯಾಗಿರಬಹುದು.

“ ಇಲ್ಲ ಗೌರಾ, ಮದುವೆಯ ದಿನವೇ ಅವನು ತೀರಿಕೊಂಡ. ” ಅವರ ದನಿಯಲ್ಲಿ ಅಪಾರ ವೇದನೆ ತುಂಬಿಕೊಂಡಿತ್ತು.

“ ಥೂ, ರಾಕ್ಷಸಿ, ಮಗುವನ್ನು ತಿಂದಳು. ಯಾವ ಸಂಬಂಧವೂ ಇಲ್ಲದ ಇವಳನ್ನು ಇಲ್ಲಿಗೇಕೆ ಕರೆತಂದಿರಿ ? ಮನೆಯನ್ನು ಮಣ್ಣುಪಾಲು ಮಾಡಿದ

ರಾಕ್ಷಸಿ, ನಡೆ ಇಲ್ಲಿಂದ" ಎಂದು ಅತ್ತು ಕೂಗಾಡಿದಳು ಗೌರಾ. ಶಾಂತಿಗೆ ತನ್ನೆದೆಯಲ್ಲಿ ಯಾರೋ ಚೂರಿಯಿಂದ ತಿವಿದಂತಾಯಿತು.

'ಮಗುವನ್ನು ತಿಂದಳು, ಮನೆಯನ್ನು ಮಣ್ಣುಪಾಲು ಮಾಡಿದ ರಾಕ್ಷಸಿ!' ಹೌದು ನಾನು ರಾಕ್ಷಸಿ. ನನ್ನ ಸಹವಾಸದಿಂದಲೇ ಅವರಿಗೆ ಹಾಗಾಯಿತು. ನನ್ನನ್ನವರು ಪ್ರೀತಿಸದೆ ಇರುತ್ತಿದ್ದರೆ ಬದುಕುತ್ತಿದ್ದರೋ ಏನೋ! ನಿಂತಲ್ಲಿಯೇ ಅವಳ ಕಣ್ಣುಗಳಿಂದ ಒಂದೇಸವನೆ ನೀರು ಸುರಿಯುತ್ತಿತ್ತು.

"ಸುಮ್ಮನಿರು ಗೌರಾ, ಆರೀತಿ ಆಡುವುದಕ್ಕಿಂತ ಕತ್ತಿಯಿಂದ ಅವಳನ್ನು ಕಡಿದುಬಿಡಬಾರದೇ? ಅವನ ಆಯುಷ್ಯ ಮುಗಿದಿತ್ತು. ಅದಕ್ಕೆ ಇವಳು ಹೊಣೆಯೇ? ಈ ದೇವತೆಯ ಪತಿಯಾಗಿ ಬಾಳುವ ಭಾಗ್ಯ ಅವನ ಹಣೆಯಲ್ಲಿ ಬರೆದಿರಲಿಲ್ಲ." ಅವರು ಕಣ್ಣೊರಸಿಕೊಳ್ಳುತ್ತಿದ್ದರು.

ಶಾಂತಿ ಅತ್ತೆಯ ಕಾಲ್ಮುಟ್ಟಿ ನಮಸ್ಕಾರ ಮಾಡಿದಳು. ಆಕೆ ಮತ್ತೂ ಉರಿದು ಬಿದ್ದಳು.

"ಥೂ ಪಾಪಿ, ನನ್ನನ್ನು ಮುಟ್ಟಬೇಡ."

"ಗೌರಾ, ಮಾತು ಸಾಕು; ಈ ಮನೆ ಅವಳದು. ಇಂದಿನಿಂದ ಅವಳೇ ಈ ಮನೆಯೊಡತಿ" ಎಂದು ಸಿಟ್ಟಿನಿಂದ ಕಾಲಪ್ಪಳಿಸುತ್ತ ನಾರಾಯಣರಾಯರು ತಮ್ಮ ಕೋಣೆಯತ್ತ ಸಾಗಿದರು.

ಅವರ ಮಾತು ಕೇಳಿ ಶಾಂತಿ ಸ್ತಬ್ಧಳಾದಳು; ತಾನು ಇಲ್ಲಿರುವುದು ಸರಿಯಲ್ಲವೆಂದುಕೊಂಡಳು. ನೆಟ್ಟಗೆ ಮಾವನಿದ್ದಲ್ಲಿಗೆ ಹೋಗಿ ಅವರ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡಳು.

"ನಾನು ಪಾಪಿ, ಅವರೇ ಇಲ್ಲದ ಮೇಲೆ ನನಗೆ ಇದೆಲ್ಲವೂ ಏಕೆ? ಈ ಮನೆಯ ನೆಮ್ಮದಿ ನನ್ನಿಂದಾಗಿ ಹಾಳಾಗುವುದನ್ನು ನಾನು ನೋಡಲಾರೆ; ನನ್ನನ್ನು ಕಳುಹಿಸಿ ಕೊಡಿ."

"ಈ ಮುದುಕನ ಮೇಲೆ ಸ್ವಲ್ಪವೂ ಕರುಣೆಯಿಲ್ಲವೇ ಮಗೂ ನಿನಗೆ? ಮಾಧೂ ಹೋದ. ತನ್ನ ಪ್ರತಿನಿಧಿಯಾಗಿ ನಿನ್ನನ್ನು ಬಿಟ್ಟು ಹೋಗಿರುವನು. ನೀನೇ ಈ ಮನೆಯ ಗಂಡು ಮಗು. ನನ್ನ ನಂತರ ಈ ಮನೆಯನ್ನುಳಿಸಿ ಕೊಳ್ಳಬೇಕಾದವಳು ನೀನು."

ತಂದೆಯಂತಿರುವ ಅವರ ಮಾತನ್ನು ವಿರೋಧಿಸಲು ಅವಳಿಂದ ಸಾಧ್ಯ

ವಾಗಲಿಲ್ಲ; ಎದ್ದು ನಿಂತು ಕಣ್ಣೊರಸಿಕೊಂಡಳು.

"ಅವಳ ಸ್ವಭಾವವೇ ಹಾಗೆ ಶಾಂತೂ. ತನ್ನ ಪರಿಸ್ಥಿತಿಯನ್ನು ಆಕೆ ವಿಚಾರ ಮಾಡುವುದಿಲ್ಲ. ಚಿನ್ನದಂಥ ಗಂಡನನ್ನು ಬಲಿತೆಗೆದುಕೊಂಡಳು. ಇದ್ದೊಬ್ಬ ಮಗನೂ ಇವಳ ಉಪದ್ರ ಸಹಿಸಲಾರದೆ ಊರು ಬಿಟ್ಟು ಹೋದ. ಗತಿಯಿಲ್ಲದವಳು, ಇದ್ದುಕೊಳ್ಳಲಿಯೆಂದು ಸುಮ್ಮನಿದ್ದೇನೆ. ನಾಳೆಯೇ ಬೇಕಾದರೆ ಮನೆಬಿಟ್ಟು ಓಡಿಸುವೆ." ಶಾಂತಿ ಕೈಗಳಿಂದ ಅವರ ಬಾಯಿ ಮುಚ್ಚಿದಳು.

"ಬೇಡ, ಹಾಗೆ ಮಾಡಬೇಡಿ; ನನ್ನಿಂದ ಅವರಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುವೆ."

ಶಾಂತಿಗೆ ಆಶ್ಚರ್ಯವಾಯಿತು. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಣ್ಣ-ತಂಗಿಯರಲ್ಲಿ ಇಷ್ಟು ವ್ಯತ್ಯಾಸವಿರಲು ಸಾಧ್ಯವೇ? ಒಬ್ಬರ ಹೃದಯ ಮಮತೆಯ ಸಾಗರವಾದರೆ ಮತ್ತೊಬ್ಬರದು ಅಸೂಯೆಯ ವಿಷ ಕುಂಡ.

ಅವಳು ಎದ್ದು ನಿಂತಳು; ಮನೆಯನ್ನೆಲ್ಲಾ ಒಮ್ಮೆ ನೋಡಿಕೊಂಡಳು. ಅಲ್ಲಿಯೇ ಉಳಿಯುವ ಇಚ್ಛೆಯಿಂದ ಆಕೆ ಬಂದಿರಲಿಲ್ಲ. ಆದರೆ ಸ್ನೇಹದ ಬಂಧನ ಆಕೆಯನ್ನು ಬಿಗಿದು ಬಿಟ್ಟಿತ್ತು. ತಂದೆಯಂತಹ ಮಾವನನ್ನು ಬಿಟ್ಟು ಹೊರಡುವುದು ಅವಳ ಪಾಲಿಗೆ ಕಷ್ಟದ ಕೆಲಸವಾಗಿತ್ತು.

ಮರುದಿನದಿಂದಲೇ ತನ್ನನ್ನು ಮನೆಕೆಲಸಕ್ಕೆ ಹೊಂದಿಸಿಕೊಂಡಳು. ಗೌರಮ್ಮ ಸಿಟ್ಟಿನಿಂದ ಕುದಿಯುತ್ತಿದ್ದರೂ ಮಾತನಾಡುವಂತಿರಲಿಲ್ಲ. ಹಿಂದಿನ ದಿನ ಅಣ್ಣನಾಡಿದ ಮಾತನ್ನು ಕೇಳಿ ಹೆದರಿಬಿಟ್ಟಿದ್ದಳು. ಆದರೂ ಆಗೊಮ್ಮೆ ಈಗೊಮ್ಮೆ ಶಾಂತಿಯ ಮೇಲೆ ವಿಷ ಕಾರದಿರುತ್ತಿರಲಿಲ್ಲ. ಶಾಂತಿ ಯಾವುದನ್ನೂ ಲೆಕ್ಕಿಸದೆ ಎಲ್ಲವನ್ನೂ ಸಹಿಸುತ್ತಿದ್ದಳು. ಇದಕ್ಕಿಂತ ಸಾವಿರ ಪಾಲು ಹೆಚ್ಚಿನ ನೋವನ್ನು ಸಹಿಸಿದವಳಿಗೆ ಇದು ಹೆಚ್ಚಿನದಾಗಿರಲಿಲ್ಲ.

ಮಾವನ ಆರೈಕೆಯ ಭಾರವೆಲ್ಲವೂ ಅವಳ ಮೇಲೆಯೇ ಬಿದ್ದಿತ್ತು. ಅವರ ಎಲ್ಲಾ ಕೆಲಸಗಳನ್ನೂ ಶಾಂತಿಯೇ ಮಾಡಬೇಕು. ಮಗಳಂತೆಯೇ ಶಾಂತಿ ಅವರ ಆರೈಕೆ ಮಾಡುತ್ತಿದ್ದಳು. 'ಅಪ್ಪ' ಎಂದೇ ಅವರನ್ನು ಕೂಗುತ್ತಿದ್ದಳು. ಅವಳ ತ್ಯಾಗಮಯ ಜೀವನವನ್ನು ಕಂಡು ಅವರಿಗೂ ಅಳು ಬಾರ

ದಿರುತ್ತಿರಲಿಲ್ಲ. ಅವಳ ಬರಿದಾದ ಹಣೆಯನ್ನು ಕಂಡಾಗಲೆಲ್ಲ ಕರುಳು ಕತ್ತರಿಸಿ ದಂತಾಗುತ್ತಿತ್ತು. 'ಇಂದು ಮಾಧು ಬದುಕಿರುತ್ತಿದ್ದರೆ ಇವಳು ಹೀಗಿರುತ್ತಿದ್ದಳೇ? ಸಂತಸದಿಂದ ನಲಿಯಬೇಕಾದ ಪ್ರಾಯದಲ್ಲಿ ವೈರಾಗ್ಯ.' ಒಮ್ಮೊಮ್ಮೆ 'ಇವಳನ್ನು ಯೋಗ್ಯ ವರನಿಗೆ ಕೊಟ್ಟು ಮದುವೆ ಏಕೆ ಮಾಡಬಾರದು' ಎನಿಸುತ್ತಿತ್ತು. ಆದರೆ ಅವಳ ಒಪ್ಪಿಗೆ ಬೇಕಲ್ಲವೇ?

ಅಂದು ನಾರಾಯಣರಾಯರು ತಮ್ಮ ಕೋಣೆಯಲ್ಲಿ ಕುಳಿತು ಶಾಂತಿಯ ಕುರಿತು ವಿಚಾರ ಮಾಡುತ್ತಲೇ ಇದ್ದರು. ಅದೇ ಹೊತ್ತಿಗೆ ಶಾಂತಿ ಕೈಯಲ್ಲಿ ಹಾಲಿನ ಲೋಟವನ್ನು ಹಿಡಿದುಕೊಂಡು ಬಂದಳು.

ಅವರು ಕುಳಿತಲ್ಲಿಯೇ ಅವಳನ್ನೊಮ್ಮೆ ನೋಡಿದರು.

"ಶಾಂತೂ, ನನಗಾಗಿ ಎಷ್ಟು ಕಷ್ಟಪಡುತ್ತಿರುವಿ ತಾಯಿ."

"ಹಾಗೇಕೆನ್ನುವಿರಿ ಅಪ್ಪ, ನಿಮ್ಮ ಮಗುವಲ್ಲವೇ ನಾನು?"

"ಪೂರ್ವಜನ್ಮದಲ್ಲಿ ನೀನು ನನ್ನ ತಾಯಿಯಾಗಿದ್ದಿರಬೇಕು ಶಾಂತೂ. ಚಿಕ್ಕ ಮಗುವಿನಂತೆ ನನ್ನನ್ನು ನೋಡಿಕೊಳ್ಳುತ್ತಿರುವಿಯಲ್ಲ."

"ಹಾಲು ತಣಿಯಿತು, ಮೊದಲು ಕುಡಿಯಿರಿ" ಎಂದು ಮೇಜಿನ ಮೇಲಿದ್ದ ಲೋಟವನ್ನು ತೆಗೆದು ಅವರ ಕೈಗೆ ಕೊಟ್ಟಳು.

"ಮಗು ಹಾಲು ಕುಡಿಯದಿದ್ದರೆ ತಾಯಿ ಸುಮ್ಮನಿರುವಳೇ?" ಎಂದು ಅವರು ಹಾಲು ಕುಡಿದರು. "ಶಾಂತೂ, ನಿನ್ನನ್ನು ಕಂಡರೆ ಕರುಳು ಕಿತ್ತು ಬರುತ್ತಿದೆ ಮಗು, ಹಣೆಗೆ ಕುಂಕುಮವನ್ನಾದರೂ ಇಟ್ಟುಕೊಳ್ಳಬಾರದೇ? ಒಂದೆರಡು ಆಭರಣಗಳನ್ನಾದರೂ ಹಾಕಿಕೊಳ್ಳಬಾರದೇ?"

"ಆ ಭಾಗ್ಯ ನನ್ನ ಹಣೆಯಲ್ಲಿ ಬರೆದಿಲ್ಲ ಅಪ್ಪ. ನಾನು ಪಾಪಿ, ಅವರೇ ಇಲ್ಲದ ಮೇಲೆ ನನಗೇಕೆ ಅದೆಲ್ಲ?" ಆಕೆ ಹೊರಟು ಹೋದಳು. ಹೋಗುತ್ತಿರುವಾಗ ಸೆರಗಿನ ತುದಿಯಿಂದ ಕಣ್ಣೊರಸಿಕೊಳ್ಳುವುದು ಅವರ ಕಣ್ಣಿಗೆ ಕಾಣಿಸದಿರಲಿಲ್ಲ. ಕುಳಿತಲ್ಲಿಯೇ ನಿಟ್ಟುಸಿರುಬಿಟ್ಟು ಸುಮ್ಮನಾದರು. ಅವರ ಕಣ್ಣಂಚಿನಲ್ಲಿಯೂ ಹನಿಗೂಡಿದ್ದುವು.

ಶಾಂತಿ ತೀರಾ ಆಸ್ಥೆವಹಿಸಿ ಮಾವನ ಸೇವೆ ಮಾಡುತ್ತಿದ್ದಳು. ದಿನವಿಡೀ ವಿಶ್ರಾಂತಿಯಿಲ್ಲದೆ ಮನೆಗೆಲಸದಲ್ಲಿಯೇ ಮಗ್ನಳಾಗಿರುತ್ತಿದ್ದಳು. ಆದರೂ ಯಾವುದೋ ಅವ್ಯಕ್ತ ವ್ಯಥೆಯೊಂದು ಆಕೆಯನ್ನು ಕಾಡುತ್ತಿತ್ತು. ರಾತ್ರಿ

ಒಬ್ಬಂಟಿಗಳಾಗಿ ಮಲಗಿದಾಗಲೆಲ್ಲ ಯಾವುದೋ ಅಪರಿಚಿತ ದನಿಯೊಂದು ತನ್ನನ್ನು 'ಬಾ....ಬಾ' ಎಂದು ಕರೆಯುತ್ತಿರುವಂತೆ ಅನಿಸುತ್ತಿತ್ತು. ಎಷ್ಟೆಷ್ಟು ಪ್ರಯತ್ನಿಸಿದರೂ ರಾತ್ರೆಯಿಡೀ ಆಕೆಗೆ ನಿದ್ದೆ ಹತ್ತುತ್ತಿರಲಿಲ್ಲ. ವಿಧವೆಯರ ಜೀವನವನ್ನೇ ತನ್ನದಾಗಿ ಮಾಡಿಕೊಂಡಿದ್ದಳು. ಒಪ್ಪತ್ತೂಟ, ಆಭರಣ ಗಳ ತ್ಯಾಗ. ಅಂದಿನಿಂದಲೇ ಅವಳು ಎಲ್ಲವನ್ನೂ ತೊರೆದ ತಪಸ್ವಿನಿ ಯಾಗಿದ್ದಳು.

ಕೆಲವು ದಿನಗಳು ಕಳೆದುವು. ಅವಳ ಅಶಾಂತಿ ಹೆಚ್ಚಾಯಿತು; ಯಾವ ನಿರ್ಧಾರಕ್ಕೂ ಬಾರದಾದಳು. ಕೊನೆಗೆ ಉಪಾಯಗಾಣದೆ ತನ್ನ 'ಸ್ವಾಮಿಯ' ಮರೆಹೊಕ್ಕಳು. 'ನನ್ನನ್ನು ಮರೆತುಬಿಟ್ಟೆಯಾ ಶಾಂತೂ? ನನ್ನ ಆದರ್ಶ ಮಣ್ಣುಪಾಲಾಯಿತೇ?' ಎಂದಂತಾಯಿತು. ತನ್ನ ಸಮಸ್ಯೆಗೆ ಉತ್ತರವು ದೊರೆತಿತ್ತು; ಅವರ ಪಾದದ ಮೇಲೆ ಕಣೆಯಿರಿಸಿ ಆಣೆ ಮಾಡಿದಳು. 'ನನ್ನನ್ನು ಕ್ಷಮಿಸಿ, ಇನ್ನು ತಪ್ಪು ಮಾಡುವುದಿಲ್ಲ. ನಿಮ್ಮ ಆದರ್ಶವೇ ನನ್ನ ಬದುಕು.'

ಮರುದಿನ ಬೆಳಗಾಗಬೇಕಾದರೆ ಎದ್ದು ಪ್ರಾತರ್ವಿಧಿಗಳನ್ನೆಲ್ಲ ತೀರಿಸಿ ದಳು. ನಾರಾಯಣರಾಯರು ಇನ್ನೂ ಹಾಸಿಗೆ ಬಿಟ್ಟೇಳುತ್ತಿದ್ದರಷ್ಟೇ. ಶಾಂತಿ ಅವರೆರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು.

"ಏನಾಯಿತು ಮಗೂ?"

"ನೀವು ಅಪ್ಪಣೆ ಕೊಡಬೇಕು ಅಪ್ಪ, ನಾನು ಪಂಜಕ್ಕೆ ಹೋಗುವೆ."

"ನನಗ್ಯಾರು ಗತಿ ತಾಯಿ?"

"ನನ್ನ ಸ್ವಾಮಿ ಕರೆಯುತ್ತಿದ್ದಾರೆ; ನಾನು ಹೋಗಲೇ ಬೇಕು."

"ಹೋಗು ಮಗೂ, ನಿನ್ನನ್ನು ತಡೆಯುವ ಅಧಿಕಾರ ಯಾರಿಗೂ ಇಲ್ಲ. ನೀನು ಮಾನವಿಯಲ್ಲ ದೇವತೆ."

"ನನ್ನನ್ನು ತಪ್ಪು ತಿಳಿಯಬೇಡಿ ಅಪ್ಪ; ನಿಮ್ಮನ್ನು ಬಿಟ್ಟು ಹೋಗ ಲಾರೆ; ನನ್ನ ಜೊತೆ ಬರುವಿರಾ?"

"ಇಲ್ಲ ಮಗೂ, ಸಧ್ಯಕ್ಕೆ ಅದು ಸಾಧ್ಯವಿಲ್ಲ; ತಾಯಿ ಆರೈಕೆ ಬೇಕೆಂದು ಕಂಡಾಗ ಹೊರಟು ಬರುವೆ."

ಅಂದೇ ಅವರಿಂದ ಅಪ್ಪಣೆ ಪಡೆದು ಹೊರಟಳು; ಹೊರಡುವಾಗ ಗೌರಮ್ಮನಿಗೂ ನಮಸ್ಕಾರ ಮಾಡಲು ಮರೆಯಲಿಲ್ಲ.

"ಹೋಗಿ ಬರುವೆ ಅತ್ತೆಮ್ಮ, ಆಶೀರ್ವಾದ ಮಾಡಿ."

"ಇನ್ನು ನಾಲ್ಕು ದಿನ ಇದ್ದು ಹೋದರಾಗದೇ ಮಗೂ?" ಎಂದು ಕೃತಕ ವಾತ್ಸಲ್ಯದ ರಾಗವೆಳೆದರು.

"ಇಲ್ಲ ಅತ್ತೆಮ್ಮ, ಈಗ ಹೋಗಲೇ ಬೇಕು. ಮತ್ತೆ ಬರುವೆ. ನನ್ನ ಮನೆಯಲ್ಲವೇ ಇದು?" ಅವಳ ಮಾತು ಗೌರಮ್ಮನನ್ನು ಉರಿಸಿದರೂ ಅವರು ಉರಿಯನ್ನು ಹೊರಗೆ ತೋರಗೊಡಲಿಲ್ಲ.

ನಾರಾಯಣರಾಯರು ಕಂಬನಿ ತುಂಬಿ ಅವಳನ್ನು ಬೀಳ್ಕೊಟ್ಟರು.

"ಈ ಮುದುಕನನ್ನು ಮರೆಯಬೇಡ ಮಗೂ."

"ಹಾಗೇಕೆ ಹೇಳುವಿರಿ ಅಪ್ಪ, ನಿಮ್ಮ ಮಗುವಲ್ಲವೇ ನಾನು?" ಇಬ್ಬರ ಕಣ್ಣುಗಳಲ್ಲಿಯೂ ಹನಿಗೂಡಿದ್ದುವು.

ಹೊರಡುವಾಗಲೊಮ್ಮೆ ಅವರ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಎದ್ದು ನಿಂತಳು.

ನಾರಾಯಣರಾಯರು ನೂರರ ಹತ್ತು ನೋಟುಗಳನ್ನು ಅವಳ ಕೈಯಲ್ಲಿರಿಸಿದರು.

"ಇದೇಕೆ ಅಪ್ಪ?"

"ಎಲ್ಲವೂ ಮಾಧೂನ ಹಣ ಮಗೂ." ಆಕೆ ಮಾತನಾಡದೆ ಅವನ್ನು ಸ್ವೀಕರಿಸಿದಳು.

## ೧೭

ಒಂದು ವರುಷದ ಹಿಂದೆ ತಾವು ಬರುವಾಗಿನ ಪಂಜದ ಸ್ಥಿತಿಗೂ ಈಗಿನ ಸ್ಥಿತಿಗೂ ಕಣ್ಣಿಗೆ ಕಾಣಿಸುವಂಥಾ ವ್ಯತ್ಯಾಸವೇನೂ ಆಗಿರದಿದ್ದರೂ ಅವಳ ಕಣ್ಣಿಗೆ ಎಲ್ಲವೂ ಹೊಸತಾಗಿ ಕಾಣಿಸಿತು.

'ಪ್ರಕೃತಿ ಮೌನವಾಗಿದೆ' ಎಂದುಕೊಂಡಳು. ತನ್ನ ಬಟ್ಟೆಯ ಗಂಟನ್ನು

ಹೊತ್ತುಕೊಂಡು ಮನೆಯತ್ತ ನಡೆದಳು. ಮಧ್ಯಾಹ್ನದ ಮೂರುಗಂಟೆ ಕಳೆದಿರ ಬಹುದು. ನೆಟ್ಟಗೆ ಆಸ್ಪತ್ರೆಯ ಕಡೆಗೆ ನಡೆದಳು; ಹಿಂದೆ ಅವರಿರುವಾಗ ಆಸ್ಪತ್ರೆಯ ಮೆಟ್ಟಲೇರುವಾಗಲೆಲ್ಲ, ಅವಳ ಹೃದಯ ಆನಂದದಿಂದ ಅರಳುತ್ತಿತ್ತು. ಆದರೆ ಈಗ ಎಲ್ಲವೂ ಶೂನ್ಯ.

ತಂಗಿಯನ್ನು ಕಂಡು ರಾಮರಾಯರು ಹೊರಗೆ ಬಂದರು.

" ಒಬ್ಬಳೇ ಬಂದೆಯಾ ಶಾಂತೂ ? "

ಅಣ್ಣನ ಪ್ರಶ್ನೆಯನ್ನು ಕೇಳಿ ವಿಷಾದದ ನಗುವೊಂದು ಅವಳ ಮುಖದ ಮೇಲೆ ಮೂಡಿ ಮಾಯವಾಯಿತು.

" ಪತ್ರ ಬರೆಯಬಾರದಿತ್ತೇ ? "

" ಈಗೇನೂ ಕೆಟ್ಟು ಹೋಗಿಲ್ಲ " ಎಂದು ಆಕೆ ತನ್ನ ಕೋಣೆಯತ್ತ ಸಾಗಿದಳು.

ಮೊದಲು ಅವರು ಕೊನೆಯುಸಿರೆಳೆದ ಕೋಣೆಯನ್ನು ಹಾದು ಹೋಗ ಬೇಕಾಗಿತ್ತು. ಬಾಗಿಲ ಬಳಿ ಒಂದು ಕ್ಷಣ ನಿಂತಳು. ' ಈಗ ಅವರು ಒಳ ಗಿರುತ್ತಿದ್ದರೆ? ' ಅಣ್ಣನಿಗೆ ತಿಳಿಯದಂತೆ ಕಣ್ಣೊರಸಿಕೊಂಡು ಒಳಕ್ಕೆ ಕಾಲಿರಿಸಿ ದಳು. ಕೋಣೆಯ ಗೋಡೆಗಳೂ ತನ್ನನ್ನು ನುಂಗಲು ಬರುತ್ತಿರುವಂತೆ ಅನಿ ಸಿತು. ' ಈಗಲೇ ಈ ಕ್ಷಣವೇ ತಾನು ಎದೆಯೊಡೆದು ಸತ್ತು ಹೋಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ! ' ಅಳುವುದೂ ಅವಳಿಂದಾಗಲಿಲ್ಲ; ಕಣ್ಣುಗಳು ಇಂಗಿ ಹೋಗಿದ್ದುವು. ಕಣ್ಣು ಮುಚ್ಚಿಕೊಂಡು ಆ ಕೋಣೆಯನ್ನು ಹಾಯ್ದು ತನ್ನ ಕೋಣೆಗೆ ಬಂದುಬಿಟ್ಟಳು.

ಮರುದಿನದಿಂದ ಹೊಸ ಜೀವನಕ್ಕಾರಂಭವಾಯಿತು. ಸಾವಿರ ರೂಪಾಯಿ ಗಳನ್ನು ಅಣ್ಣನ ಕೈಯಲ್ಲಿಟ್ಟಳು.

" ಅಣ್ಣ, ಆಸ್ಪತ್ರೆಗೆ ಬೇಕಾದ ಮದ್ದುಗಳೆಲ್ಲವನ್ನೂ ತರಿಸಿ; ಪಕ್ಕದ ಎರಡು ಕೋಣೆಗಳಲ್ಲಿ ರೋಗಿಗಳನ್ನು ಇರಿಸುವುದಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಿಸಿ. "

" ಇದೆಲ್ಲಿಯದು ಶಾಂತೂ ? "

" ಎಲ್ಲವೂ ನನ್ನದು, ಇನ್ನೂ ಹಣ ಬೇಕಾದರೆ ತಿಳಿಸಿ. "

ಎಂಟೇ ದಿನಗಳಲ್ಲಿ ಬೇಕಾದ ವ್ಯವಸ್ಥೆಯೆಲ್ಲವೂ ಆಯಿತು; ಅಣ್ಣ-ತಂಗಿ

ಯರ ತ್ಯಾಗಜೀವನದ ಆರಂಭವಾಯಿತು. ಡಾಕ್ಟರರು ತೀರಿ ಹೋದರೂ ಜನರಿಗೆ ಆಸ್ಪತ್ರೆಯ ಮೇಲಿನ ನಂಬಿಕೆ ಕಡಿಮೆಯಾಗಲಿಲ್ಲ. ರಾಮರಾಯರ ಮೇಲೆಯೇ ಜನರಿಗೆ ನಂಬಿಕೆ ಹೆಚ್ಚು. ಹಳ್ಳಿಗರಲ್ಲಿ ವಾಸ್ತವಿಕತೆಗಿಂತಲೂ ಹಳೆಯ ಕಾಲದ ಮೂಢ ನಂಬಿಕೆಯೇ ಹೆಚ್ಚು; ಮದ್ದಿನ ಪ್ರಭಾವಕ್ಕಿಂತ ರಾಮರಾಯರ ಕೈಗುಣದ ಪ್ರಭಾವವೇ ಹೆಚ್ಚಾಗಿತ್ತು.

ಅವರು ಬಂದಾಗಿನಿಂದಲೇ ರೋಗಿಗಳು ಬರುವುದು ಹೆಚ್ಚಾಗಿತ್ತು; ಈಗಂತೂ ಅವರದೇ ಆಸ್ಪತ್ರೆ; ಸಹಾಯಕ್ಕೆ ಗೋಪುವನ್ನೂ ತೆಗೆದುಕೊಂಡರು.

“ ಔಷಧಿಗೆ ಹಣ ತೆಗೆದುಕೊಳ್ಳುವಂತಿರಬಾರದಣ್ಣ. ಪಾಪ, ಹಳ್ಳಿಯ ಬಡವರು ಎಲ್ಲಿಂದ ಕೊಡಬೇಕು ? ” ಎಂದು ಶಾಂತಿ ಮೊದಲೇ ಪೀಠಿಕೆ ಹಾಕಿದ್ದಳು. ಆದರೆ ಆ ಭಾವುಕತೆಯಿಂದ ಉಪಯೋಗವಿಲ್ಲವೆಂದು ಅವರಿಗೆ ತಿಳಿದಿತ್ತು. ಮಾತುಗಳಿಂದ ಮನಸ್ಸು ತಣಿಯಬಹುದು, ಹೊಟ್ಟೆ ತುಂಬ ಬಲ್ಲುದೇ ?

“ ಮತ್ತೆ ಜೀವನಕ್ಕೇನು ಮಾಡಲಿ ಶಾಂತೂ ? ”

“ ಆ ಚಿಂತೆ ನನಗಿರಲಿ ” ಎಂದು ಅಣ್ಣನ ಬಾಯಿ ಮುಚ್ಚಿದಳು. ತನ್ನ ಸ್ವಾಮಿಯ ಐಶ್ವರ್ಯವಿದೆ. ಅದಕ್ಕೆ ಉತ್ತರಾಧಿಕಾರಿಗಳಾರೂ ಇಲ್ಲ; ಅದು ಸೇವೆಗಾಗಿ ವಿನಿಯೋಗವಾಗಲಿ ಎಂದೇ ಅವಳ ಬಯಕೆಯಾಗಿತ್ತು. ಆದರೆ ತಾನೆಣಿಸಿದಷ್ಟು ಸುಲಭವಾಗಿ ಅದು ಸಾಧ್ಯವಾಗುವಂತಿಲ್ಲವೆಂಬುದು ಅವಳ ಹುಡುಗು ಬುದ್ಧಿಗೆ ತೋಚಲಿಲ್ಲ.

ಪಂಜದ ಜನಸಂಖ್ಯೆಯೇನೂ ವಿಶೇಷವಾಗಿರಲಿಲ್ಲ; ಅಲ್ಲಿಯ ಜನರೊಡನೆ ಆತ್ಮೀಯ ಪರಿಚಯ ಮಾಡಿಕೊಳ್ಳುವುದು ಒಳಿತೆಂದು ಕಂಡಿತು. ಜಾತಿ-ಮತಗಳಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಅವರ ದೃಷ್ಟಿಯಲ್ಲಿ ಮಾನವ ಪ್ರಾಣಿಗಳೆಲ್ಲ ಒಂದೇ ಜಾತಿ. ಅವರ ವೈದ್ಯವೃತ್ತಿಗೆ ಗಂಡು-ಹೆಣ್ಣುಗಳ ಭೇದವೂ ಅಗತ್ಯವಿರಲಿಲ್ಲ.

ರಾಮರಾಯರು ತಮಗೆ ದೊರೆತ ಕಾಲಾವಧಿಯಲ್ಲಿ ಕೈಗೆ ದೊರೆತ ವೈದ್ಯಕೀಯ ಗ್ರಂಥಗಳೆಲ್ಲವನ್ನೂ ಓದಿದರು. ‘ ಆಪರೇಶನ್ ’ ಮಾಡುವುದು ಬಿಟ್ಟರೆ ಬಾಕಿ ಎಲ್ಲಾ ವಿಚಾರಗಳಲ್ಲಿಯೂ ಅವರು ಯಾವ ಡಾಕ್ಟರರನ್ನೂ ಬಿಟ್ಟುಕೊಡುವಂತಿರಲಿಲ್ಲ. ಹತ್ತಾರು ಮೈಲಿಗಳ ಅಂತರದಲ್ಲಿ ಬೇರೆ ಡಾಕ್ಟರ

ರಾರೂ ಇಲ್ಲದ್ದರಿಂದ ಅವರ ಪ್ರಸಿದ್ಧಿಗೆ ಕಾಲಾವಕಾಶ ಬೇಕಾಗಿರಲಿಲ್ಲ. ಔಷಧಿ ಮುಫತ್ತಾಗಿ ದೊರೆಯುತ್ತಿದೆ ಎಂಬುದು ತಿಳಿದ ಮೇಲಂತೂ ಜನರಿಗೆ ಅವರ ಮೇಲಿನ ಗೌರವ ಮತ್ತೂ ಹೆಚ್ಚಿತು.

ಅವರಿಗೆ ಪಂಜದಲ್ಲಿ ಮೊಟ್ಟಮೊದಲು ದೊರೆತ ಗೆಳೆಯರೆಂದರೆ ನಾರಾಯಣಭಟ್ಟರು. ಬಸ್ಸು ನಿಲ್ಲುವ ಕಡೆಯಲ್ಲಿ ಭಟ್ಟರ ಒಂದು ಹೊಟೇಲಿತ್ತು; ಪಂಜದ ಊರಿಗೆಲ್ಲ ಅದೇ ದೊಡ್ಡ ಹೊಟೇಲು. ಅಲ್ಲಿ ಕಾಫಿ ಕುಡಿಯುವುದೆಂದರೆ ಜನರಿಗೆ ಒಂದು ಹೆಮ್ಮೆ; ಏಕೆಂದರೆ ದುಡ್ಡಿದ್ದವರು ಮಾತ್ರ ಅಲ್ಲಿಗೆ ಹೋಗಲು ಸಾಧ್ಯ. ಬೇರೆ ಚಿಕ್ಕ ಹೊಟೇಲುಗಳಿಗಿಂತ ಅಲ್ಲಿ ಸಿಗುವ ವಸ್ತುಗಳಿಗೆ ದರ ಜಾಸ್ತಿ. ಹಾಗಾಗಿಯೇ ಆ ಊರಿಗೆ ಅದು ದೊಡ್ಡ ಹೊಟೇಲು.

ಊರಿಗೆ ಬಂದ ಪ್ರಾರಂಭದಲ್ಲಿ ರಾಮರಾಯರಿಗೂ ಅವರ ಪರಿಚಯವಿದ್ದಿಲ್ಲ. ಹೀಗೇ ಒಂದೆರಡು ಬಾರಿ ನೋಡಿದ್ದರಷ್ಟೇ. ಅವರು ಹೆಚ್ಚಾಗಿ ಹೊಟೇಲಿಗೆ ಹೋಗುವ ಅಭ್ಯಾಸವನ್ನು ಇಟ್ಟುಕೊಂಡವರಲ್ಲ. ಅಂದೊಮ್ಮೆ ಅಕಸ್ಮಾತ್ ಅವರ ಮನೆಗೆ ಡಾಕ್ಟರರಾಗಿ ಹೋಗುವ ಅವಕಾಶ ದೊರೆಯಿತು.

ಅಂದು ಬೆಳಗಾಗಬೇಕಾದರೆ ಭಟ್ಟರು ಆಸ್ಪತ್ರೆಗೆ ಓಡಿ ಬಂದಿದ್ದರು. ಮುಖದ ಮೇಲೆ ಗಾಬರಿಯ ಕಳೆಯಿತ್ತು.

" ಕಂಪೌಂಡರೆ, ಒಂದು ಬಾರಿ ನಮ್ಮ ಮನೆಯವರೆಗೆ ಬಂದು ಹೋಗಬೇಕು. "

" ಏಕೆ ಏನಾಗಿದೆ ? "

" ಮಗಳು ತವರುಮನೆಗೆ ಹೆರಿಗೆಗೆ ಬಂದಿದ್ದಾಳೆ ಸ್ವಾಮಿ, ಗಂಡನ ಮನೆಯವರು ಬೇಡವೆಂದರೂ ನಾನೇ ಒತ್ತಾಯದಿಂದ ಕರೆದು ತಂದಿದ್ದೆ. ನಿನ್ನೆಯಿಂದ ಒಂದೇಸವನೆ ನರಳುತ್ತಿದ್ದಾಳೆ. ನಮ್ಮ ಹೆಂಗಸರಿಗೆ ತಿಳಿದ ವಿದ್ಯೆಯನ್ನೆಲ್ಲ ಖರ್ಚು ಮಾಡಿದರು ; ಪ್ರಯೋಜನವೇನೂ ಆಗಿಲ್ಲ. "

ರಾಮರಾಯರು ಒಂದು ಕ್ಷಣ ವಿಚಾರ ಮಾಡಿದರು. ಡಾಕ್ಟರರಿರುವಾಗ ಹೆರಿಗೆ ಕೇಸು ಬರೇ ನೋಡಿದ ಅನುಭವವಷ್ಟೇ ಅವರ ಪಾಲಿಗಿದ್ದಿತು. ಬಂದವರಿಗೆ ಏನು ಉತ್ತರ ಹೇಳುವುದೆಂದು ಅವರಿಗೆ ತೋಚಲಿಲ್ಲ.

ಶಾಂತಿ ಒಳಗಿನಿಂದ ಎಲ್ಲವನ್ನೂ ಕೇಳುತ್ತಿದ್ದಳು. ಕರುಳು ಹಿಸುಕಿದಂತಾಯಿತು. ತನ್ನ ಮದುವೆಯಾಗಿರುತ್ತಿದ್ದರೆ ?....ತಾನೂ ತಾಯಿಯಾಗು

ತ್ತಿದ್ದೆ. ಇನ್ನೇಕೆ ಆ ವಿಚಾರ? ಈ ಜನ್ಮದಲ್ಲಿ ಆ ಭಾಗ್ಯ ಹಣೆಯಲ್ಲಿ ಬರೆದಿಲ್ಲ. ಅಣ್ಣನ ಪ್ರಯತ್ನದಿಂದ ಆ ತಾಯಿಯಾದರೂ ಬದುಕಲಿ" ಎಂದು ಹಾರೈಸಿದಳು.

ಅಣ್ಣನ ಊಟವಿನ್ನೂ ಆಗಿರಲಿಲ್ಲ; ಶಾಂತಿ ಬಿರುಗಾಳಿಯಂತೆ ಹೊರಗೆ ಬಂದಳು.

"ವಿಚಾರ ಮಾಡುವುದೇನಣ್ಣ, ಹೋಗಿ ಬರಬಾರದೇ. ಬದುಕು-ಸಾವು ನಮ್ಮ ಕೈಯಲ್ಲಿದೆಯೇ?"

ಅಂದೇ ಮೊದಲ ಬಾರಿ ಅವರು ಸ್ವತಂತ್ರವಾಗಿ ರೋಗಿಯನ್ನು ನೋಡಲು ಹೋದರು. 'ನನ್ನ ಮಾನ ಕಾಯುವ ಭಾರ ನಿನ್ನದು ಸ್ವಾಮಿ' ಎಂದು ದೇವರಲ್ಲಿ ಮೊರೆಯಿಟ್ಟರು. ಅಣ್ಣ ಡಾಕ್ಟರರಂತೆ ಕೈಚೀಲವನ್ನು ಹಿಡಿದುಕೊಂಡು ಹೋಗುತ್ತಿರುವುದನ್ನು ಶಾಂತಿ ಒಂದು ಕ್ಷಣ ನೋಡುತ್ತ ನಿಂತಳು. ಹೃದಯ ಬಿರಿಯುವಂತಾಯಿತು. ಕಣ್ಣುಗಳು ತುಂಬಿಬಂದುವು.

"ಇಂದು ಅವರಿರುತ್ತಿದ್ದರೆ? ಈ ಕೆಲಸವನ್ನು ಅವರೇ ಮಾಡುತ್ತಿದ್ದರು. 'ಹೋಗಿ ಬರಲೇ ಶಾಂತೂ?' ಎಂದು ಸ್ನೇಹದಿಂದ ನನ್ನೊಡನೆ ಕೇಳುತ್ತಿದ್ದರು. 'ಬೇಗ ಬನ್ನಿ' ಎಂದು ನಗುತ್ತ ಅವರನ್ನು ಕಳುಹಿಸಿಕೊಡುತ್ತಿದ್ದೆ. ಅವರು ಜಯಶಾಲಿಯಾಗಿ ಹಿಂತಿರುಗುವುದನ್ನು ನಾನು ಕಾಯುತ್ತ ಕುಳಿತಿರುತ್ತಿದ್ದೆ. ಬಂದವರೇ 'ನಿನ್ನ ಹೇಳಿಕೆಯಂತೆ ಬೇಗನೆ ಬಂದೆ ಶಾಂತೂ' ಎಂದು ನನ್ನನ್ನಪ್ಪಿಕೊಳ್ಳುತ್ತಿದ್ದರು. ಮತ್ತೆ...." ಮುಂದೆ ವಿಚಾರ ಮಾಡಲಾಗಲಿಲ್ಲ. ಬವಳಿ ಬಂದಂತಾಯಿತು. ಬಳಿಯಲ್ಲಿದ್ದ ಗೋಡೆಯನ್ನು ಆಧರಿಸಿಕೊಂಡಳು.

"ನನ್ನೊಬ್ಬಳನ್ನೇ ಏಕೆ ಬಿಟ್ಟಿರುವಿರಿ ಸ್ವಾಮಿ, ಕರೆದುಕೊಂಡು ಹೋಗಬಾರದೇ? ನನ್ನಿಂದ ಸಹಿಸುವುದಕ್ಕೆ ಸಾಧ್ಯವಿಲ್ಲ." ಎಷ್ಟು ಕೂಗಿಕೊಂಡರೂ, ಕಣ್ಣೀರು ಸುರಿಸಿದರೂ ಅವಳ ಸಹಾಯಕ್ಕೆ ಬರುವವರಾರೂ ಇದ್ದಿಲ್ಲ.

* * * *

ರಾಮರಾಯರ ಪಾಲಿಗೆ ಇಂದಿನದು ಅಗ್ನಿ ಪರೀಕ್ಷೆಯಾಗಿತ್ತು. ರೋಗಿಯ ಅವಸ್ಥೆಯನ್ನು ಕಂಡು ಅವರು ಗಾಬರಿಯಾಗಿ ಹೋಗಿದ್ದರು. ಆದರೂ ಅದನ್ನು ತೋರಿಸಿಕೊಳ್ಳಲಿಲ್ಲ. ಚೊಚ್ಚಿಲು ಬಸಿರು ಹುಡುಗಿ ಒಂದೇ ಸವನೆ

ಕೂಗುತ್ತಿದ್ದಳು. ಮೈಮೇಲೆ ಎಚ್ಚರವಿದ್ದಂತಿರಲಿಲ್ಲ.

ರಾಮರಾಯರು ತಮ್ಮ ಅನುಭವದ ಆಳತೆಯಲ್ಲಿ ರೋಗಿಯ ಪರೀಕ್ಷೆ ನಡೆಸಿದರು. ಪರಿಸ್ಥಿತಿ ಕಠಿಣವೆಂಬುದು ತಿಳಿಯಿತು. ಒಂದು ಕ್ಷಣ ವಿಚಾರ ಮಾಡಿದರು ಭಟ್ಟರನ್ನು ಪಕ್ಕಕ್ಕೆ ಕರೆದು, "ಭಟ್ಟರೆ, ಪರಿಸ್ಥಿತಿ ತುಂಬಾ ವಿಪರೀತಕ್ಕಿಟ್ಟಿದೆ. ತಾಯಿ-ಮಕ್ಕಳಿಬ್ಬರನ್ನೂ ಬದುಕಿಸುವುದು ನನ್ನಿಂದಾಗದ ಕೆಲಸ."

ಭಟ್ಟರೂ ಒಂದು ಕ್ಷಣ ಸುಮ್ಮನೆ ನಿಂತು "ತಾಯಿಯನ್ನಾದರೂ ಉಳಿಸಿ."

ರಾಮರಾಯರು ಪುನಃ ಕೋಣೆಯನ್ನು ಹೊಕ್ಕು ಬಾಗಿಲು ಹಾಕಿಕೊಂಡರು. ಎರಡು ಇಂಜೆಕ್ಶನ್ ಚುಚ್ಚಿದರು; ಬಳಿಯಲ್ಲಿ ಹಳ್ಳಿಯ ಸೂಲಗಿತ್ತಿಯೊಬ್ಬಳು ನಿಂತಿದ್ದಳು. ಅವಳ ಸಹಾಯದಿಂದ ಬಹು ಪ್ರಯಾಸಪಟ್ಟು ಮಾಂಸದ ಮುದ್ದೆಯಂತಿದ್ದ ನಿರ್ಜೀವ ಮಗುವನ್ನು ಹೊರಗೆ ತೆಗೆದರು.

ಹುಡುಗಿಯ ಮೈಮೇಲೆ ಪ್ರಜ್ಞೆಯಿರಲಿಲ್ಲ. ಧೈರ್ಯ ಮಾಡಿ ಮತ್ತೂ ಒಂದು ಇಂಜೆಕ್ಷನ್ ಚುಚ್ಚಿದರು. ಹದಿನೈದು ನಿಮಿಷಗಳು ಕಳೆದ ಮೇಲೆ ಅವಳು ಮೆಲ್ಲನೆ ಕಣ್ದೆರೆದಳು. ಸಾವಿನೊಡನೆ ಹೋರಾಡಿ ಬಂದವರಂತಿತ್ತು ಆ ನೋಟ.

ಸಾವಿನೊಡನೆ ಹೋರಾಡಿಯೇ ರಾಮರಾಯರು ಅವಳನ್ನು ಬದುಕಿಸಿದ್ದರು. ಆಕೆ ಕಣ್ಣು ತೆರೆದೊಡನೆ ತುಸು ಧೈರ್ಯವಾಯಿತು. ನಾಡಿ ಪರೀಕ್ಷೆ ಮಾಡಿದರು. 'ಇನ್ನು ಜೀವಕ್ಕೆ ಅಪಾಯವಿಲ್ಲ' ಎಂದು ಸಮಾಧಾನದ ನಿಟ್ಟುಸಿರ್ಗರೆದರು. ಅವರು ಕೋಣೆಯಿಂದ ಹೊರಗೆ ಬರುವಾಗ ಹೊತ್ತು ಮಧ್ಯಾಹ್ನವಾಗಿತ್ತು. ಬಟ್ಟೆಯೆಲ್ಲ ಬೆವರಿನಿಂದ ತೊಯ್ದು ಹೋಗಿತ್ತು.

ಭಟ್ಟರು ಜೀವ ಕೈಯಲ್ಲಿ ಹಿಡಿದುಕೊಂಡು ಕಾದು ಕುಳಿತಿದ್ದರು. ಅವರ ಹೆಂಡತಿಯ ಅಳು ಇನ್ನೂ ನಿಂತಿರಲಿಲ್ಲ. ಇಬ್ಬರೂ ಒಂದೇಸವನೇ ಕೇಳಿದರು.

"ಏನಾಯಿತು ಕಂಪೌಂಡರರೇ ?"

ರಾಮರಾಯರ ಮುಖದ ಮೇಲೆ ಮುಗುಳು ನಗು ಮೂಡಿತು.

" ಹೇಳಿದಂತೆಯೇ ಆಯಿತು. ತಾಯಿ ಬದುಕಿದಳು." ದಂಪತಿಗಳ ಮುಖದಿಂದ ಸಮಾಧಾನದ ನಿಟ್ಟುಸಿರು ಹೊರಬಿದ್ದಿತು.

" ಈ ಜನ್ಮದಲ್ಲಿ ನಿಮ್ಮ ಋಣ ತೀರಿಸಲಾರೆವು."

ಇಬ್ಬರ ಕಣ್ಣುಗಳಲ್ಲಿಯೂ ಕೃತಜ್ಞತೆ ಹೊರಹೊಮ್ಮುತ್ತಿತ್ತು. ಇಬ್ಬರೂ ಮಗಳ ಕೋಣೆಗೆ ಧಾವಿಸಿದರು.

" ಇನ್ನು ಗಾಬರಿಯಿಲ್ಲ ಮಗೂ " ಎಂದು ತಾಯಿ ಮಗಳನ್ನು ಸಂತೈಸಿದಳು. ದೊಡ್ಡ ಹೊರೆಯೊಂದು ತಲೆಯ ಮೇಲಿಂದ ಇಳಿದಂತಾಗಿತ್ತು ಅವರಿಗೆ.

ರಾಮರಾಯರ ಪಾಲಿಗೆ ಇದೊಂದು ದೊಡ್ಡ ವಿಜಯ. ಸ್ವತಂತ್ರವಾಗಿ ಇಷ್ಟು ದೊಡ್ಡ ಗಂಡಾಂತರದಲ್ಲಿ ಕೈಯಿಕ್ಕಿದ ಈ ಮೊದಲ ಅವಕಾಶದಲ್ಲೇ ಅವರು ಯಶಸ್ವಿಯಾಗಿದ್ದರು. ಬೆಳಗಿನಿಂದಲೂ ಉಪವಾಸವಿದ್ದ ರಾಮರಾಯರು ಭಟ್ಟರ ಆಗ್ರಹದ ಮೇರೆಗೆ ಅವರಲ್ಲಿಯೇ ಸ್ನಾನ ಮಾಡಿ ಊಟ ಮುಗಿಸಿದರು.

ಸುಮಾರು ಎರಡು ಗಂಟೆಯ ಹೊತ್ತಿಗೆ ಅವರು ಹೊರಡಲು ಎದ್ದು ನಿಂತರು. ಭಟ್ಟರು ಒಳಗಿಂದ ಒಂದು ಕವರನ್ನು ತಂದು ಅವರ ಕೈಗಿತ್ತರು.

" ನಿಮ್ಮ ಋಣ ಈ ಜನ್ಮದಲ್ಲಿ ತೀರಲಾರದು ಸ್ವಾಮಿ. ಇದು ನಿಮ್ಮ ಕೆಲಸಕ್ಕೆ ಬರೇ ಅಲ್ಪ ಕಾಣಿಕೆ, ಸಂತೋಷದಿಂದ ಸ್ವೀಕರಿಸಬೇಕು."

" ಅದೆಲ್ಲ ಬೇಡ ಭಟ್ಟರೆ, ನಿಮ್ಮ ವಿಶ್ವಾಸವೊಂದು ಇದ್ದರೆ ಸಾಕು." ಎಂದು ಹೊರಟರು. ಭಟ್ಟರಿಗೆ ಆಶ್ಚರ್ಯ ; ಕೊಟ್ಟುದನ್ನು ನಿರಾಕರಿಸಬಹುದೆಂದು ಅವರು ಕನಸಿನಲ್ಲಿಯೂ ಭಾವಿಸಿರಲಿಲ್ಲ. ದುಡ್ಡಿನ ವ್ಯವಹಾರದಲ್ಲಿಯೇ ಜೀವಮಾನ ಕಳೆದ ಅವರಿಗೆ ಇದು ಸಾಧ್ಯವೆಂದು ಒಮ್ಮೆಗೆ ನಂಬಲಾಗಲಿಲ್ಲ.

" ಅವರು ಮನುಷ್ಯರಲ್ಲ ದೇವರು " ಎಂದುಕೊಂಡರು.

ಈ ಘಟನೆಯಿಂದ ಭಟ್ಟರಿಗೆ ರಾಮರಾಯರ ಮೇಲಿನ ಗೌರವ ಹತ್ತು ಪಾಲು ಹೆಚ್ಚಿತು. ಅಂದಿನಿಂದ ಇಬ್ಬರಲ್ಲೂ ಸ್ನೇಹ ಬೆಳೆದು ಬಂದಿತು.

ರಾಮರಾಯರ ಕೈಗುಣದಿಂದ ಭಟ್ಟರ ಮಗಳು ಎಂಟೇ ದಿನಗಳಲ್ಲಿ ಎದ್ದು ಓಡಾಡುವಂತಾದಳು. ಮಗಳಿಗೆ ತನ್ನ ಪ್ರಾಣದಾತರ ಪರಿಚಯ ಮಾಡಿ

ಕೊಡಲು ಅವರು ಮರೆಯಲಿಲ್ಲ.

"ನಿನ್ನ ತಂದೆ ನಾನಲ್ಲ ಮಗೂ ಅವರು. ಅವರಿಲ್ಲದಿರುತ್ತಿದ್ದರೆ ಇಂದು ನಿನ್ನನ್ನು ನೋಡುವ ಭಾಗ್ಯ ನಮ್ಮ ಪಾಲಿಗಿರುತ್ತಿರಲಿಲ್ಲ" ಎಂದು ಯಾವಾಗಲೂ ತಮ್ಮ ಕೃತಜ್ಞತೆಯನ್ನು ತೋರಿಸುತ್ತಿದ್ದರು.

ಅಂತೂ ಭಟ್ಟರ ಮಗಳ ಚಿಕಿತ್ಸೆಯಿಂದ ಬೆಲೆ ಬಾಳುವ ಗೆಳೆತನ ಅವಳ ಪಾಲಿಗೆ ದೊರೆಯಿತು. ಜೊತೆಯಲ್ಲಿ ಅವರ ಕೀರ್ತಿ ನಾಲ್ಕು ದಿಕ್ಕಿಗೂ ಹಬ್ಬಿತು.

## ೧೮

ಅಂದು ಭಟ್ಟರ ಮನೆಯಿಂದ ಹೊರಡುವಾಗ ಅವರು ತುಂಬಾ ಗೆಲು ವಾಗಿದ್ದರು. ಆದರೆ ಮನೆ ಮುಟ್ಟಿದೊಡನೆ ಅವರ ಸಂತಸವೆಲ್ಲವೂ ಹಾರಿ ಹೋಯಿತು.

ಶಾಂತಿ ಬೆಳಗಿನಿಂದ ಉಪವಾಸವಿದ್ದು ಅವರನ್ನು ಕಾಯುತ್ತಿದ್ದಳು. ಅಣ್ಣ ನನ್ನು ಕಂಡೊಡನೆ ಅವಳ ಮುಖವರಳಿತು.

"ಏನಾಯಿತಣ್ಣ ?" ಅವಳ ಮೊದಲ ಪ್ರಶ್ನೆ.

"ಅವಳು ಬದುಕಿದಳು ಶಾಂತೂ, ಆದರೆ ಮಗು ಹೋಯಿತು." ಶಾಂತಿ ಸಮಾಧಾನದ ನಿಟ್ಟುಸಿರ್ಗರೆದಳು.

"ತುಂಬಾ ಹೊತ್ತಾಯಿತಣ್ಣ, ಸ್ನಾನ ಮಾಡಿ ಊಟಕ್ಕೇಳಿ." ರಾಮು ರಾಯರು ತಂಗಿಯ ಮುಖ ನೋಡಿದರು. ಅದು ಬಾಡಿ ಹೋಗಿತ್ತು.

"ನಿನ್ನ ಊಟವಾಯಿತೇ ಶಾಂತೂ ?"

"ಇಲ್ಲಣ್ಣ, ನೀನು ಬರುವುದನ್ನೇ ಕಾದು ಕುಳಿತಿದ್ದೆ."

"ಬೆಳಗ್ಗೆ ?"

ಶಾಂತಿ ಮಾತನಾಡದೆ ತಲೆತಗ್ಗಿಸಿದಳು. ಅಣ್ಣನ ಕಣ್ಣುಗಳು ಹನಿ ಗೂಡಿದುವು. ತಂಗಿಯ ಸಮೀಪಕ್ಕೆ ಬಂದು ಎರಡೂ ಕೈಗಳಿಂದ ಅವಳ ಮುಖ ವನ್ನು ಎತ್ತಿ ಹಿಡಿದರು. ಕಣ್ಣುಗಳಲ್ಲಿ ನೀರು ತುಂಬಿತ್ತು.

" ಶಾಂತೂ, ನಿನ್ನ ಈ ದುರ್ದೈವಿ ಅಣ್ಣನನ್ನು ನೋಯಿಸುವುದೆಂದರೆ ನಿನಗೂ ಇಷ್ಟವೇ ? "

ಶಾಂತಿ ಕೈಯಿಂದ ಅವನ ಬಾಯಿ ಮುಚ್ಚಿದಳು. ಆದರೆ ಮಾತೇನೂ ಆಡಲಿಲ್ಲ.

" ಹೋಗು ಶಾಂತೂ, ನೀನು ಊಟ ಮಾಡು. ನನ್ನ ಊಟ ಆಗಲೇ ಆಗಿದೆ. ಇನ್ನು ಹೀಗೆ ಮಾಡಿದೆಯೆಂದರೆ ನಾನು ಎಲ್ಲಾದರೂ ಹೋಗಿ ಬಿಡುವೆ. "

ರೋಗಿಗಳ ಚಿಕಿತ್ಸೆಗಾಗಿ ರಾಮರಾಯರು ದೂರದ ಹಳ್ಳಿಗಳಿಗೆ ಹೋಗ ಬೇಕಾಗುತ್ತಿತ್ತು. ಹಾಗಾಗಿ ಕಂಪೌಂಡರ್ ವೃತ್ತಿಯನ್ನು ತಮ್ಮನಿಗೆ ಚೆನ್ನಾಗಿ ಕಲಿಸಿದರು. ಅಲ್ಪಾವಧಿಯಲ್ಲಿಯೇ ಅವನು ಆ ಕೆಲಸದಲ್ಲಿ ಪಳಗಿದ. ರಾಮ ರಾಯರಿಗೆ ಹೊರಗಿನ ರೋಗಿಗಳನ್ನು ನೋಡಿಕೊಳ್ಳಲು ಸ್ವಲ್ಪಮಟ್ಟಿಗೆ ಬಿಡು ವಾಯಿತು. ಒಮ್ಮೊಮ್ಮೆ ಹತ್ತಿಪ್ಪತ್ತು ಮೈಲುಗಳ ವರೆಗೂ ಹೋಗಬೇಕಾಗು ತ್ತಿತ್ತು. ಆದರೆ ಯಾರಿಂದಲೂ ಹಣ ತೆಗೆದುಕೊಳ್ಳುತ್ತಿರಲಿಲ್ಲ. ತಿಂಗಳು ತಿಂಗಳಿಗೆ ಪುತ್ತೂರಿನಿಂದ ನಾರಾಯಣರಾಯರು ಇನ್ನೂರು ರೂಪಾಯಿಗಳನ್ನು ಶಾಂತಿಯ ಹೆಸರಿಗೆ ಕಳುಹಿಸುತ್ತಿದ್ದರು. ಅದನ್ನು ಅವಳು ಅಣ್ಣನ ಕೈಯಲ್ಲಿರಿ ಸುತ್ತಿದ್ದಳು. ಅವರ ಎಲ್ಲಾ ಖರ್ಚೂ ಅದರಿಂದಲೇ ಸಾಗುತ್ತಿತ್ತು. ತಂಗಿಗೆ ಬೇಸರವಾಗುವುದೆಂದು ಅವರು ಅದರ ವಿಚಾರವಾಗಿ ಮಾತನಾಡುತ್ತಲೇ ಇರಲಿಲ್ಲ.

ಜೀವನದ ಪರಿವೆಯೂ ಇಲ್ಲದೆ ಅವರು ರೋಗಿಗಳಿಗಾಗಿ ಶ್ರಮಿಸುತ್ತಿ ದ್ದರು. ಒಮ್ಮೊಮ್ಮೆ ಮನೆಯಿಂದ ಹೊರಟರೆ ಎರಡು ದಿನಗಳವರೆಗೂ ಹಿಂತಿ ರುಗುತ್ತಿರಲಿಲ್ಲ. ಊಟ ಮಾಡಿದರೂ ಆಯಿತು, ಇಲ್ಲವಾದರೂ ಆಯಿತು. ಶಾಂತಿ ಅಣ್ಣನಿಗಾಗಿ ಕಾದು ಕಾದು ದಣಿಯುತ್ತಿದ್ದಳು. ಅಣ್ಣ ವಿಶ್ರಾಂತಿಯಿಲ್ಲದೆ ದುಡಿಯುವುದನ್ನು ಕಂಡು ಅವಳಿಗೆ ಬೇಸರವಾಗುತ್ತಿತ್ತು.

" ಅಣ್ಣ, ಜೀವದ ಜಾಗ್ರತೆಯನ್ನಾದರೂ ಮಾಡಬೇಡವೇ ? " ಎಂದರೆ ಅವರು ನಕ್ಕು ಸುಮ್ಮನಾಗುತ್ತಿದ್ದರು. ಇನ್ನು ಯಾರಿಗಾಗಿ ಅವರು ಬದುಕಿ ಉಳಿಯಬೇಕು ? ತನ್ನ ಬದುಕನ್ನು ಕಂಡು ಸಂತಸಪಡುವವರೇ ಇಲ್ಲವಾದ ಮೇಲೆ ಅದರ ಯೋಚನೆ ಏಕೆ ?

ಒಂದೆರಡು ವರ್ಷಗಳು ಕಳೆದುವು. ಅವರ ಜೀವನ ಸಾಗುತ್ತಲೇ ಇತ್ತು. ಶಾಂತಿಗೆ ಮನೆಯಲ್ಲಿಯೇ ಕುಳಿತು ಬೇಸರವಾಗುತ್ತಿತ್ತು. ಅಕ್ಕ ಪಕ್ಕದ ಮಕ್ಕಳನ್ನು ಕಂಡಾಗಲೆಲ್ಲ ಮನಸ್ಸಿಗೆ ತುಂಬಾ ವ್ಯಥೆಯಾಗುತ್ತಿತ್ತು.

" ನಿಮಗೆ ಅಷ್ಟೂ ಕರುಣೆಯಿಲ್ಲ ಸ್ವಾಮಿ. ನಿಮ್ಮ ಪ್ರತಿನಿಧಿಯಾಗಿರಲು ಒಂದು ಮಗುವನ್ನಾದರೂ ಕೊಟ್ಟು ಹೋಗಬಾರದಿತ್ತೇ ? " ಎಂದು ಮರುಗುತ್ತಿದ್ದಳು. " ತಾನು ದುರ್ದೈವಿ " ಎಂದುಕೊಂಡು ಸುಮ್ಮನಾಗುವಳು.

ಅದೊಂದು ದಿನ ಅಪರಿಚಿತ ಹೆಂಗುಸೊಬ್ಬಳು ರಾಮರಾಯರನ್ನು ಕಾಣಲು ಬಂದಳು. ಕಾಯಿಲೆಯ ಲಕ್ಷಣಗಳೇನೂ ಅವಳ ಮುಖದ ಮೇಲೆ ಕಾಣಿಸುತ್ತಿರಲಿಲ್ಲ.

" ಏನಮ್ಮಾ ಏನಾಗಬೇಕು ? "

ಅವಳು ಸಂಕೋಚದಿಂದ ಒಂದು ಕ್ಷಣ ತಲೆತಗ್ಗಿಸಿದಳು. ಕೊನೆಗೆ ಹೇಗೂ ಪ್ರಯಾಸದಿಂದ ಎಂಬಂತೆ ತಲೆ ಎತ್ತಿದಳು.

" ನನ್ನ ಮಾನ ಉಳಿಸಬೇಕು. " ಅವಳ ಕಣ್ಣಲ್ಲಿ ನೀರು ತುಂಬಿತ್ತು.

ಪರಿಸ್ಥಿತಿ ತಿಳಿದುಕೊಳ್ಳಲು ಅವರಿಗೆ ಕಷ್ಟವಾಗಲಿಲ್ಲ.

" ಎಷ್ಟು ತಿಂಗಳು ? "

" ಐದು. "

" ಏನು ಮಾಡಬೇಕೆಂದಿರುವಿರಿ ? "

" ಹೇಗಾದರೂ ನನ್ನ ಮರ್ಯಾದೆ ಉಳಿಸಬೇಕು. "

ಮಾತು ಅರ್ಥ ಮಾಡಿಕೊಳ್ಳಲು ಕಷ್ಟವಿರಲಿಲ್ಲ; ತನ್ನ ಹೊಟ್ಟೆಯೊಳಗಿದ್ದ ಮಗುವಿನ ಪ್ರಾಣ ತೆಗೆಯಬೇಕೆಂದು ಕೇಳಲು ತಾಯಿ ಬಂದಿದ್ದಳು; ಒಮ್ಮೆಲೇ ಅವರ ಮೈ ರೋಮಗಳು ನೆಟ್ಟಗಾದುವು ; ಹೃದಯ ಕಂಪಿಸಿತು.

" ತಾಯೀ, ಮಗುವಿನ ಮೇಲೆ ಪ್ರೇಮವಿಲ್ಲವೇ ನಿಮಗೆ ? "

ಆಕೆ ಅತ್ತುಬಿಟ್ಟಳು ; ಅದು ಕೇಳುವಂತಹ ಪ್ರಶ್ನೆಯೇ ? ಅದೂ ಮಗುವಿನ ತಾಯಿಯೊಡನೆ ಈ ಪ್ರಶ್ನೆಯೇ ?

" ನನ್ನ ನೋವು ನಿಮಗೆ ತಿಳಿಯದು. ಅವರು ಮದುವೆಯಾಗುವೆನೆಂದು ಮೋಸ ಮಾಡಿದರು ; ಮರ್ಯಾದೆ ಉಳಿಸಿಕೊಳ್ಳಲು ಬೇರೆ ದಾರಿ ಏನಿದೆ ಹೇಳಿ. "

ರಾಮರಾಯರು ಒಂದು ಕ್ಷಣ ವಿಚಾರಮಗ್ನರಾದರು. ಆಮೇಲೆ ಎದ್ದು ತಂಗಿಯ ಬಳಿ ಹೋದರು. ಅಣ್ಣನ ಮುಖವನ್ನು ಕಂಡು ಶಾಂತಿ ಏನೋ ವಿಶೇಷವಿರಬೇಕೆಂದು ಊಹಿಸಿದಳು.

“ ಏನಾಯಿತಣ್ಣ ? ”

ಅವರು ಎಲ್ಲವನ್ನೂ ವಿವರಿಸಿ “ ಏನು ಮಾಡಲಿ ಶಾಂತೂ ? ” ಎಂದರು.

“ ಇನ್ನು ನಾಲ್ಕು ತಿಂಗಳು ಇಲ್ಲಿಯೇ ಇರಲಿ, ಮಗುವನ್ನು ನಾವು ಸಾಕೋಣ ; ಅವಳಿಗೂ ನಿಶ್ಚಿಂತೆ. ”

ಸಮಸ್ಯೆ ಬಗೆಹರಿಯಿತು ; ಹೆಂಗುಸೂ ಒಪ್ಪಿದಳು. ಮಗುವೂ ಉಳಿದು ತನ್ನ ಮರ್ಯಾದೆಯೂ ಉಳಿಯುವಂತಾಯಿತೆಂದು ಅವಳ ಮಾತೃಹೃದಯ ಹಿಗ್ಗಿತು. ಅಣ್ಣ-ತಂಗಿಯರಿಬ್ಬರಿಗೂ ಕೃತಜ್ಞತೆ ಸಲ್ಲಿಸಿದಳು ; ರಾಮರಾಯರು ಹೆಂಗುಸಿನ ಮನೆಯ ಪತ್ತೆಹಚ್ಚಿ ಅಲ್ಲಿಗೆ ಸುದ್ದಿ ಮುಟ್ಟಿಸಿದರು; ಯಾರೂ ವಿರೋಧಿಸುವಂತಿರಲಿಲ್ಲ.

ಶಾಂತಿಗೆ ಜೊತೆಯಾಯಿತು ; ಒಬ್ಬಂಟಿಗಳಾದ ಅವಳು ಬಹು ಬೇಗನೆ ಅವಳ ಜೊತೆಯಲ್ಲಿ ಹೊಂದಿಕೊಂಡಳು. ಅವಳ ಹೆಸರು ರುಕ್ಮಿಣಿ ; ಮೈಬಣ್ಣ ಎಣ್ಣೆಗಪ್ಪಾದರೂ ಒಳ್ಳೆಯ ಲಕ್ಷಣವಾಗಿಯೇ ಇದ್ದಳು ; ಇನ್ನೂ ಹದಿನೆಂಟರ ಜವ್ವನೆ. ಅವಳೂ ಆತ್ಮೀಯಳಂತೆ ಶಾಂತಿಯ ಜೊತೆಯಲ್ಲಿ ಅಡುಗೆಯ ಕೆಲಸ ದಲ್ಲಿ ಕೈ ಹಾಕಲಾರಂಭಿಸಿದಳು. ಯಾವ ಜಾತಿಯೋ ! ಎಂದು ಶಾಂತಿ ಒಮ್ಮೆಗೆ ಅಳುಕಿದಳು; ಮತ್ತೆ ನನ್ನದೇ ಜಾತಿ, ಹೆಣ್ಣು ಜಾತಿ ! ಎಂದು ಮನ ಸ್ಸಿನಲ್ಲಿಯೇ ನಕ್ಕು ಸುಮ್ಮನಾದಳು.

ಈಗೀಗ ಅಡುಗೆಯ ಕೆಲಸ ಅಷ್ಟು ಸುಲಭದ್ದಾಗಿರಲಿಲ್ಲ; ದಿನವೂ ಹಲವು ಜನರು ಮನೆಯಲ್ಲಿ ಊಟಕ್ಕಿದ್ದೇ ಇರುತ್ತಿದ್ದರು. ಊರಿಗೆ ಹೊಸಬರಾರು ಬಂದರೂ ರಾಮರಾಯರ ಮನೆಯಲ್ಲಿಯೇ ಅವರ ವಸತಿ. ಶಾಂತಿ ಎಷ್ಟು ಜನ ಬಂದರೂ ಬೇಸರವಿಲ್ಲದೆ ಅವರನ್ನು ಆದರಿಸುತ್ತಿದ್ದಳು. ಅವಳ ಕೈ ಅನ್ನಪೂರ್ಣೆಯ ಕೈ. ಅತಿಥಿಗಳಿಗೆ ಸ್ವಲ್ಪಾದರೂ ಅತೃಪ್ತಿಯಾಯಿತೆಂದು ತಿಳಿದರೆ ನೊಂದು ಕೊಳ್ಳುವಳು.

ರಾಮರಾಯರು ಮನೆಯಲ್ಲಿರಲಿ ಇಲ್ಲದಿರಲಿ ಆತಿಥಿಗಳ ಸಂತೆ ಯಾವಾ ಗಲೂ ಇದ್ದದ್ದೆ ! ರುಕ್ಮಿಣಿ ಈ ಸಮಯದಲ್ಲಿ ಬಂದು ಅವಳಿಗೆ ತುಂಬಾ

ಉಪಕಾರ ಮಾಡಿದ್ದಳು.

ಕೆಲವೊಮ್ಮೆ ರೋಗಿಗಳನ್ನು ಮನೆಯಲ್ಲಿಯೇ ತಂದಿರಿಸಿ ಚಿಕಿತ್ಸೆ ಮಾಡಬೇಕಾಗುತ್ತಿತ್ತು. ಶಾಂತಿ ಸಿದ್ಧವಾಗಿಯೇ ಇರುತ್ತಿದ್ದಳು; ತಾಯಿಯಂತೆ ರೋಗಿಗಳ ಆರೈಕೆ ಮಾಡುತ್ತಿದ್ದಳು. ಒಮ್ಮೊಮ್ಮೆ ಕೆಲಸದ ನಡುವೆ ತನ್ನ ಆರೋಗ್ಯದ ಪರಿವೆಯೂ ಅವಳಿಗಿರುತ್ತಿರಲಿಲ್ಲ.

ರುಕ್ಮಿಣಿ ಅವಳ ದುಡಿತವನ್ನು ಕಂಡು ಆಶ್ಚರ್ಯಪಡುತ್ತಿದ್ದಳು. 'ಹೀಗೆ ದುಡಿದರೆ ಹೇಗವ್ಮಾ?' ಎಂದು ಒಮ್ಮೊಮ್ಮೆ ಕೇಳದಿರುತ್ತಿರಲಿಲ್ಲ. ಶಾಂತಿ ಅವಳ ಮಾತಿಗೆ ನಕ್ಕು ಸುಮ್ಮನಾಗಿಬಿಡುತ್ತಿದ್ದಳು. 'ನಾನು ಬದುಕಿ ಮಾಡಬೇಕಾದುದೇನೂ ಇಲ್ಲ ತಂಗಿ' ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದಳು. ಅವಳು ಪ್ರಶ್ನೆ ಕೇಳಿದಾಗಲೆಲ್ಲ 'ತನ್ನ ಅವರ' ಸಂಬಂಧ ನೆನಪಾಗಿ ಗುಟ್ಟಿನಲ್ಲಿ ಅಳುತ್ತಿದ್ದಳು.

ಗೋಪು ಈಗ ಮಗುವಾಗಿರಲಿಲ್ಲ; ಇಪ್ಪತ್ತು ವರುಷದ ಯುವಕ. ತನ್ನ ಅಣ್ಣ ಮತ್ತು ಅಕ್ಕಂದಿರು ಆ ರೀತಿ ದುಡಿಯುವುದು ಅವನಿಗೆ ಸ್ವಲ್ಪವೂ ಸರಿಬೀಳುತ್ತಿರಲಿಲ್ಲ. 'ಬೇರೆಯವರಿಗಾಗಿ ಇವರೇಕೆ ಸಾಯಬೇಕು' ಎಂದು ತನ್ನಷ್ಟಕ್ಕೇ ಗೊಣಗುತ್ತಿದ್ದ; ಅಣ್ಣನಷ್ಟು ಶಾಂತಪ್ರಕೃತಿ ಅವನದಲ್ಲ. ಅವನು ಕೊಂಚ ಕಟ್ಟುನಿಟ್ಟಿನ ಸ್ವಭಾವದವನು. ಔಷಧಿಯನ್ನು ಮುಫತ್ತಾಗಿ ಕೊಡುವುದೂ ಅವನಿಗೆ ಇಷ್ಟವಿಲ್ಲದ ವಿಚಾರ; ಅಣ್ಣನೊಡನೆ ಅದನ್ನು ಹೇಳಿಯೂ ಬಿಟ್ಟ.

"ಪುಕ್ಕಟೆ ಔಷಧ ಕೊಟ್ಟರೆ ಅದಕ್ಕೆ ಬೆಲೆ ಕಡಿಮೆ ಅಣ್ಣ. ಸ್ವಲ್ಪಾದರೂ ಹಣ ತೆಗೆದುಕೊಳ್ಳಬೇಕು."

ಅವರು ತಮ್ಮನ ಮಾತನ್ನು ವಿರೋಧಿಸಲಿಲ್ಲ. ಒಂದು ದಿನದ ಔಷಧಿಗೆ ಎರಡು ಆಣೆಯಂತೆ ತೆಗೆದುಕೊಳ್ಳುವುದೆಂದು ನಿರ್ಧಾರವಾಯಿತು; ಶಾಂತಿಯೂ ಅದನ್ನು ವಿರೋಧಿಸಲಿಲ್ಲ.

ರುಕ್ಮಿಣಿಗೆ ತಿಂಗಳು ತುಂಬಿತು; ಯಾವುದೋ ಒಂದು ಗಳಿಗೆಯಲ್ಲಿ ಹೆಣ್ಣು ಮಗುವನ್ನು ಹೆತ್ತಳು. ಮಗು ಮುದ್ದಾಗಿತ್ತು; ತಾಯಿಗೇ ಬೇಡದ ಮಗು ಯಾವ ಗಳಿಗೆಯಲ್ಲಿ ಹುಟ್ಟಿದರೇನು? ಹೇಗಿದ್ದರೇನು?

ಶಾಂತಿ ತಾಯಿಯಾಗಿ ಅದನ್ನು ಸಾಕಬೇಕಿತ್ತು. ಎಷ್ಟೋ ದಿನಗಳ ಅವಳ ಬಯಕೆ ಇಂದು ಕೈಗೂಡಿತ್ತು. ಮಗುವನ್ನು ಎದೆಗಪ್ಪಿಕೊಂಡಳು. ಅದು ತನ್ನ ಇರವನ್ನು ಸೂಚಿಸುವಂತೆ ಕೂಗಿತು. ರುಕ್ಮಿಣಿ ತನ್ನ ಮಗುವನ್ನು ನೋಡಿದಳು. ಅವಳ ಕಣ್ಣುಗಳು ತುಂಬಿದ್ದುವು. ಮಮತೆಯ ಎಳೆಯನ್ನು ಕಡಿದು ಅವಳದನ್ನು ಬಿಟ್ಟು ಹೋಗಬೇಕು ; ತನ್ನ ಹೆಣ್ಣುತನದ ಗೌರವವನ್ನು ಉಳಿಸಿಕೊಳ್ಳಲು ಅವಳದನ್ನು ಮಾಡಲೇ ಬೇಕು.

ಹೆತ್ತು ಒಂದು ತಿಂಗಳಲ್ಲಿ ರುಕ್ಮಿಣಿ ಹೊರಟು ನಿಂತಳು. ಮಗುವನ್ನು ಅಪ್ಪಿಕೊಂಡು ಅತ್ತಳು. ಕೊನೆಯ ಬಾರಿ ಎದೆಯ ಹಾಲನ್ನುಣಿಸಿ ಅದನ್ನು ಶಾಂತಿಯ ಕೈಗಿತ್ತಳು.

" ನಾನು ಪಾಪಿ ಅಮ್ಮಾ, ಅದಕ್ಕಾಗಿ ಈ ಶಿಕ್ಷೆ. "

ಯಾರೂ ಈ ಮಾತಿಗೆ ಸಮಾಧಾನ ಹೇಳುವಂತಿರಲಿಲ್ಲ.

" ಈ ಮಗು ನನ್ನದಲ್ಲ ನಿಮ್ಮದು. "

ಮುಂದೆ ಅವಳಿಂದ ಮಾತನಾಡಲಾಗಲಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತ ಹೊರಟು ನಿಂತಳು. ಒಂಬತ್ತು ತಿಂಗಳು ಹೊತ್ತು ಹೆತ್ತು ಮಗುವನ್ನು ತನ್ನ ದೆಂದು ಹೇಳುವ ಅಧಿಕಾರ ತಾಯಿಗಿಲ್ಲ. ಬಹು ಪ್ರಯಾಸದಿಂದ ಕಾಲೆಳೆದು ಕೊಂಡು ಹೊರಟಳು; ಆಕೆಯ ಹೃದಯದ ನೋವು ಎಂತಹುದೆಂದು ತಾಯಿ ಯಾದವರೇ ಊಹಿಸಲು ಸಾಧ್ಯ.

ಶಾಂತಿ ತಾಯಿಯಾದಳು ; ತನ್ನದಲ್ಲದ ಮಗುವಿನ ತಾಯಿಯಾದಳು. ಅಂದಿನ ದಿನವಿಡೀ ತುಂಬಾ ಸಂತೋಷದಿಂದಲೇ ಕಳೆದಳು. ಸಂಜೆಗೆ ಮನೆಗೆ ಬಂದ ರಾಮರಾಯರಿಗೆ ತಂಗಿಯ ಸಂತಸವನ್ನು ಕಂಡು ನಗುಬಾರದಿರಲಿಲ್ಲ. ಆದರೆ ಆ ಸಂತಸದ ಹಿಂದುಗಡೆ ಅಡಗಿದ ಬಯಕೆ, ನೋವು ಎಂತಹುದೆಂಬು ದನ್ನು ಅವರು ಊಹಿಸಬಲ್ಲವರಾಗಿದ್ದರು.

" ಅಣ್ಣಾ, ಮಗುವಿಗೆ ಏನೆಂದು ಹೆಸರಿಡೋಣ ? "

" ಶಾರದಾ " ಎಂದು ಅವರ ನಾಲಗೆಯ ತುದಿಯುವರೆಗೆ ಬಂದಿತು. ಆದರೆ " ನಿನಗಿಷ್ಟವಿದ್ದ ಹೆಸರನ್ನೇ ಇಡು ಶಾಂತೂ ? " ಎಂದು ಹೇಳಿದರು.

" ಶಾರದಾ ಎಂದಿಡುವೆ ; ಆಗಬಹುದೇನಣ್ಣಾ ? "

ಅವರ ಮುಖದ ಮೇಲೆ ನೋವಿನ ಛಾಯೆ ಕಾಣಿಸಿತು. ತಂಗಿ ತನ್ನನ್ನು

ಅಣಕಿಸುತ್ತಿರುವಂತೆ ಕಂಡಿತು. ಮುಖವನ್ನು ಪಕ್ಕಕ್ಕೆ ಹೊರಳಿಸಿಕೊಂಡು ಬಚ್ಚಲು ಮನೆಯತ್ತ ನಡೆದರು. ಶಾಂತಿಯ ಹೃದಯದ ಮೇಲೆ ಬರೆ ಎಳೆದಂತಾಯಿತು. ಅಣ್ಣ ಇನ್ನೂ ಅವಳನ್ನು ಮರೆತಿಲ್ಲ. ಹೌದು, ಮರೆಯಲು ಸಾಧವಿಲ್ಲವೆನ್ನುವುದು ಅವಳಿಗೂ ತಿಳಿದಿತ್ತು. ಇನ್ನೆಷ್ಟು ಸಮಯ ಕಳೆದರೂ ಆಕೆ ಡಾಕ್ಟರರನ್ನು ಮರೆಯಬಲ್ಲಳೇ? ಇಲ್ಲ. ಸತ್ತರೂ ಅವಳಿಂದಾಗದ ಕೆಲಸ ಅದು. ಹಾಗಿರುವಾಗ ಅಣ್ಣ ಹೇಗೆ ಮರೆತಾರು?

ಮಗುವಿಗೆ 'ಶಾರದೆ' ಎಂದೇ ನಾಮಕರಣ ಮಾಡಿದಳು. ತನ್ನ ಚಿಕ್ಕಂದಿನ ಗೆಳತಿ. ಹೆಸರಿನ ಜೊತೆಗೆ ಮನಸ್ಸು ಅವಳ ಕಡೆಗೆ ಹರಿಯಿತು. ಆಕೆ ಹೇಗಿರಬಹುದು? ಎಷ್ಟೋ ಸಮಯದಿಂದ ಅವಳ ಪತ್ರ ಬಂದಿರಲಿಲ್ಲ. ಆಕೆ ಹಿಂದಿನದೆಲ್ಲವನ್ನೂ ಮರೆತಿರಬಹುದು; ಸುಖವಾಗಿರಬಹುದು. ಹಾಗಾಗಿಯೇ ಪತ್ರ ಬರೆಯಲಿಲ್ಲ. ಈ ವಿಚಾರದಿಂದ ಶಾಂತಿಯ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಮತ್ತೂ ಒಂದು ತಿಂಗಳು ಕಳೆಯಿತು. ಕೂಸಿಗೆ ಎರಡು ತಿಂಗಳು ತುಂಬಿ ಮುದ್ದಾಗಿ ಬೆಳೆದಿತ್ತು. ಮನೆಗೆ ಮಗು ಬಂದ ಮೇಲೆ ಕೆಲಸಕ್ಕೆ ಜನವೂ ಬರಬೇಕಾಯಿತು.

## ೧೯

ಪುತ್ತೂರಿನಿಂದ ನಾರಾಯಣರಾಯರ ಅವಸರದ ಪತ್ರ ಬಂದಿತ್ತು. ಶಾಂತಿಗೆ ಕೂಡಲೇ ಹೊರಟು ಬರುವಂತೆ ಬರೆದಿದ್ದರು. ಶಾಂತಿ ಪತ್ರವನ್ನೋದಿದಳು. 'ಇನ್ನು ಹೆಚ್ಚು ದಿನ ಬದುಕಲಾರೆ ಮಗೂ, ಕೂಡಲೇ ಹೊರಟು ಬಾ' ಎಂದು ಬರೆದಿದ್ದರು. ಅವಳ ಹೃದಯ ತಳಮಳಿಸಿತು. ಹೋಗದಿರಲು ಸಾಧ್ಯವಿರಲಿಲ್ಲ; ಆದರೆ ಮಗುವಿನ ಸಮಸ್ಯೆಯೊಂದು ಎದ್ದು ಬಂದಿತು. ಇನ್ನೂ ಎರಡು ತಿಂಗಳು. ಬೇರೆಯವರ ಕೈಯಲ್ಲಿ ಬಿಟ್ಟು ಹೋಗುವಂತಿರಲಿಲ್ಲ.

ಜೊತೆಯಲ್ಲಿ ತೆಗೆದುಕೊಂಡು ಹೋದರೆ? ಕೇಳಿದರೆ ಏನೆಂದು ಹೇಳು

ವುದು ? ನಿಜಸಂಗತಿ ಹೇಳಿದರೆ ಅವರು ನಂಬಬಹುದೇ ? ಅವಳನ್ನು ಕಂಡ ಯಾರಿಗಾದರೂ ಅದನ್ನು ನಂಬುವುದಕ್ಕೆ ಸಾಧ್ಯವಿರಲಿಲ್ಲ.

ತುಂಬಾ ಯೋಚಿಸಿದಳು. ಕೊನೆಗೆ ಮಗುವನ್ನು ತೆಗೆದುಕೊಂಡು ಹೋಗುವುದೆಂದೇ ತೀರ್ಮಾನವಾಯಿತು. 'ಮಗಳಿಗೆ ತಂದೆಯ ಬಳಿಗೆ ಹೋಗಲು ಅನುಮಾನವೇಕೆ ?' ಎಂದುಕೊಂಡು ಎರಡು ತಿಂಗಳ ಶಾರದೆಯನ್ನು ಜೊತೆಯಲ್ಲಿ ಕರೆದುಕೊಂಡೇ ಹೋದಳು.

ಅಡುಗೆಯ ಭಾರ ಕೆಲಸದವಳ ಮೇಲೆಯೇ ಬಿಡದೆ ಬೇರೆ ಉಪಾಯ ವಿರಲಿಲ್ಲ.

"ನಿನಗೊಂದು ಮದುವೆ ಮಾಡಿಸಿದರೆ ಮತ್ತೆ ಚಿಂತೆಯಿಲ್ಲ ಗೋಪೂ !" ಎಂದು ತಮ್ಮನನ್ನು ಮೂದಲಿಸಿ ಹೊರಟು ಹೋದಳು.

ಊರು ಸಮೀಪಿಸುತ್ತಿದ್ದಂತೆ ಅವಳ ಹೃದಯ ಅಳುಕುತ್ತಿತ್ತು. ಮಗುವನ್ನು ಕಂಡು ಅವರು ವಿಪರೀತ ಕಲ್ಪನೆ ಮಾಡಿಕೊಂಡರೆ? ಏನಾದರೂ ಆಗಲಿ. ಬಂದುದನ್ನು ಅನುಭವಿಸುವುದು ಎಂದುಕೊಂಡು ಧೈರ್ಯವಾಗಿ ಮಾವನ ಮನೆಯ ಮೆಟ್ಟಲೇರಿದಳು.

ಜೊತೆಯಲ್ಲಿ ಮಗುವನ್ನು ಹೊತ್ತುಕೊಂಡು ಬಂದ ಶಾಂತಿಯನ್ನು ಕಂಡು ಗೌರಮ್ಮ ಮೂಗು ಮುರಿದಳು. ಆಡುವುದಕ್ಕೆ ಚೆನ್ನಾದ ಎಳೆ ಸಿಕ್ಕಿತ್ತು. 'ಬಂದಳು ಹಾದರಗಿತ್ತಿ !' ಎಂದು ಅವಳಿಗೆ ಕೇಳಿಸುವಂತೆ ಗೊಣಗುಟ್ಟಿದಳು. ಮಾತು ಶಾಂತಿಯ ಎದೆಯನ್ನು ಇರಿಯಿತು. ಕಣ್ಣುಗಳಲ್ಲಿ ನೀರು ತುಂಬಿತು. ಆದರೂ ತೋರಿಸಿಕೊಳ್ಳದೆ ಮಾವನ ಕೋಣೆಯತ್ತ ಸಾಗಿದಳು.

ಕೋಣೆಯ ಬಾಗಿಲು ಅರೆತೆರೆದಿತ್ತು. ಧೈರ್ಯ ಮಾಡಿ ಅದನ್ನು ದೂಡಿ ಒಳಗೆ ಪ್ರವೇಶಿಸಿದಳು. ಮಾವ ಪಲ್ಲಂಗದ ಮೇಲೆ ಮಲಗಿದ್ದರು. ಕಣ್ಣುಗಳು ಮುಚ್ಚಿದ್ದುವು. ಶಾಂತಿ ಮೆಲ್ಲನೆ ಕಾಲ್ಮುಟ್ಟಿ ನಮಸ್ಕರಿಸಿದಳು. ತಣ್ಣನೆಯ ಕೈಯ ಸ್ಪರ್ಶಕ್ಕೆ ಅವರು ಕಣ್ತೆರೆದರು.

"ನಾನು ಬಂದಿದ್ದೇನೆ ಅಪ್ಪ ?"

ಅವರ ಕಣ್ಣು ಮಗುವಿನತ್ತ ಹೋಯಿತು. ಸಂಶಯದ ವಿಷಬೀಜ ಅವರ ಮನಸ್ಸಿನಲ್ಲಿ ನಟ್ಟಿತು. ಮೈ ಬೆವರಿತು. ಅವರಿದನ್ನು ನಿರೀಕ್ಷಿಸಿರಲಿಲ್ಲ. ಕಣ್ಣುಗಳು ತುಂಬಿ ಬಂದುವು.

" ಇದನ್ನೂ ನಾನು ನೋಡಬೇಕಾಯಿತೇ ಶಾಂತೂ ? "

" ಅಂದರೆ, ನಿಮ್ಮ ಮಾತಿನ ಅರ್ಥವೇನಪ್ಪ ? "

" ಕೈಯಲ್ಲಿ ಮಗುವನ್ನು ಹಿಡಿದುಕೊಂಡೂ ನನಗೆ ಈ ಪ್ರಶ್ನೆ ಕೇಳುತ್ತಿರುವೆಯಾ ? "

ಶಾಂತಿ ನಡುಗಿದಳು. ತಲೆತಿರುಗಿ ಬೀಳುವಂತಾಯಿತು. ಹೇಗೋ ಸಾವರಿಸಿಕೊಂಡಳು. ದುಃಖ ಉಮ್ಮಳಿಸಿ ಬಂತು. ಬಹು ಪ್ರಯಾಸದಿಂದ ಹೇಳಿದಳು.

" ಈ ಮಗು ನನ್ನದಲ್ಲ ಅಪ್ಪ; ನನ್ನನ್ನು ನಂಬಿ. " ಮುಂದೆ ಮಾತನಾಡಲಾಗಲಿಲ್ಲ. ಗಂಟಲು ಕಟ್ಟಿತು.

" ಮತ್ತೆ ಸಂತೆಯಲ್ಲಿ ಕೊಂಡುಕೊಂಡೆಯಾ ? "

ಅವಳನ್ನು ನೋಡಿ ನಾರಾಯಣರಾಯರು ವ್ಯಂಗ್ಯವಾಗಿ ನಕ್ಕರು. ಶಾಂತಿ ಗೋಡೆಯನ್ನಾಧರಿಸಿಕೊಂಡು ನಿಂತಳು. ತನ್ನ ಸುತ್ತಲಿನ ಪ್ರಪಂಚ ತಿರುಗುತ್ತಿರುವಂತೆ ಭಾಸವಾಯಿತು. ಕಣ್ಣುಗಳಿಂದ ಒಂದೇಸವನೆ ನೀರು ಹರಿಯುತ್ತಿತ್ತು; ಮಗುವನ್ನು ಎರಡೂ ಕೈಗಳಿಂದ ಬಿಗಿಯಾಗಿ ಎದೆಗಪ್ಪಿಕೊಂಡಳು. ' ಹೌದು, ನಾನೇ ಈ ಅನಾಥೆಯ ತಾಯಿ ' ಎಂದು ಹೇಳಬೇಕೆನಿಸಿತು. ಆದರೆ ಬಾಯಿಂದ ಮಾತುಗಳೇ ಹೊರಡಲಿಲ್ಲ.

ಅದೇ ಹೊತ್ತಿಗೆ ಸರಿಯಾಗಿ ಗೌರಮ್ಮ ಕೋಣೆಯಲ್ಲಿ ಪ್ರತ್ಯಕ್ಷವಾದರು. " ಹೂಂ, ಬಂದಳು ಬಜಾರಿ. ಮಗನನ್ನು ತಿಂದು ಮುಗಿಸಿ ಅಪ್ಪನನ್ನೇ ತಿನ್ನುವ ಬಯಕೆಯುಂಟಾಯಿತೇನು ? "

ಶಾಂತಿ ಸಿಟ್ಟಿನಿಂದ ಗೌರಮ್ಮನನ್ನು ನೋಡಿದಳು. ಮಮತೆಯ ತಂದೆಯಂತೆ ಆಧರಿಸಿದ ನಾರಾಯಣರಾಯರಿಗೇ ನಂಬಿಕೆಯಾಗದಿದ್ದ ಮೇಲೆ ಉಳಿದವರಾದರೂ ಹೇಗೆ ನಂಬಬೇಕು. ಆದರೆ ಇಂಥಾ ಅಪಮಾನವನ್ನು ಸಹಿಸುವುದು ಅವಳಿಂದ ಸಾಧ್ಯವಾಗಲಿಲ್ಲ. ತನಗೆ ಅಪಮಾನವಾದರೆ ಆಕೆ ಸಹಿಸಬಲ್ಲಳು ; ಆದರೆ ತನ್ನ ಸ್ವಾಮಿಯ ಅಪಮಾನವಾಗುವುದನ್ನು ಕಂಡು ಸುಮ್ಮನಿರಲು ಅವಳಿಂದಾಗಲಿಲ್ಲ.

ಬಳಿಯಲ್ಲಿ ಚಾಪೆಯನ್ನು ಹಾಸಿ ಅದರ ಮೇಲೆ ಮಗುವನ್ನಿಟ್ಟು ಮಾವನ ಪಾದದ ಬಳಿ ಬಂದು ಕುಳಿತಳು ; ಅವರ ಪಾದದ ಮೇಲೆ ಹಣೆಯಿರಿಸಿ ಬಿಕ್ಕಿ

ಬಿಕ್ಕಿ ಅತ್ತಳು. "ನನ್ನ ಮೇಲೆ ವಿಶ್ವಾಸವಾಗುವಂತಿಲ್ಲವೇ ಅಪ್ಪಾ ನಿಮಗೆ?" ಎಂದು ಬಿಕ್ಕುತ್ತ ಮಗುವಿನ ಇತಿಹಾಸವನ್ನೆಲ್ಲ ಹೇಳಿದಳು.

ನಾರಾಯಣರಾಯರಿಗೆ ನಂಬಿಕೆಯಾಯಿತೇನೋ. ಮೆಲ್ಲನೆ ಕಣ್ಣು ತೆರೆದರು; ಅವಳ ಮುಖವನ್ನೇ ದಿಟ್ಟಿಸಿದರು. ಆ ಸರಳ ಮುಖವನ್ನು ಹೊತ್ತ ಹೃದಯದಲ್ಲಿ ಕಪಟವಿರುವುದು ಸಾಧ್ಯವಿರಲಿಲ್ಲ; ಆದರೂ ಅವರ ಸಂಶಯ ಪೂರ್ತಿಯಾಗಿ ಹೋಗದಾಯಿತು.

"ನಿನ್ನ ಮಾತು ನಂಬಲೇ, ಯಾ ಬಿಡಲೇ ಎನ್ನುವುದೇ ತಿಳಿಯುವುದಿಲ್ಲ; ನನ್ನ ಮಗು ಚರಿತ್ರಹೀನಳಾದರೆ ಈ ಮುದುಕನ ಹೃದಯ ಯಾವ ರೀತಿ ನೋಯಬಹುದೆಂಬ ಕಲ್ಪನೆಯಿದೆಯೇ ನಿನಗೆ?"

ನಿಜ, ಇದ್ದೊಬ್ಬ ಮಗನನ್ನು ಕಳೆದುಕೊಂಡ ಅವರ ಹೃದಯದ ನೋವನ್ನು ಅರಿಯಲಾರದಷ್ಟು ಮೂರ್ಖಳಾಗಿರಲಿಲ್ಲ ಶಾಂತಿ.

"ಹೌದಪ್ಪ, ನನಗೆಲ್ಲವೂ ತಿಳಿಯುತ್ತದೆ. ಆದರೆ ಮಗುವನ್ನು ಏನು ಮಾಡಲಿ ಬೀದಿಗೆಸೆಯಲೇ?"

ಅವಳ ಅಳು ಇನ್ನೂ ನಿಂತಿರಲಿಲ್ಲ. ನಾರಾಯಣರಾಯರು ಏನೂ ಹೇಳುವಂತಿರಲಿಲ್ಲ. ಆದರೆ ಶಾಂತಿ ತೀರಾ ನಿರ್ದೋಷಿಯೆಂದು ಒಪ್ಪುವುದಕ್ಕೂ ಅವರು ಸಿದ್ಧರಿರಲಿಲ್ಲ. ಆಕೆ ಹೋದಂದಿನಿಂದ ಗೌರಮ್ಮ ಅವಳ ವಿಚಾರವಾಗಿ ಇಲ್ಲದ್ದೊಂದನ್ನು ಹೇಳುತ್ತ ಬಂದಿದ್ದಳು. ಅವರಿಗೂ ಒಮ್ಮೊಮ್ಮೆ ಅದು ಸರಿ ಇರಬಹುದೇನೋ ಎಂದು ಅನಿಸಿತ್ತು.

ನಾರಾಯಣರಾಯರು ತೀರ ಕ್ಷೀಣವಾಗಿದ್ದರು; ಪುತ್ರಶೋಕದಿಂದಲೇ ಕೊರಗಿ ಅವರು ಹಾಸಿಗೆ ಹಿಡಿದಿದ್ದರು. ತಮಗೆ ಉತ್ತರಾಧಿಕಾರಿಯೊಬ್ಬರೂ ಇಲ್ಲವಲ್ಲ ಎಂದು ಅವರ ಹೃದಯ ಮರುಗುತ್ತಿತ್ತು. ಹೇಗೂ ತುಂಬಾ ವಿಚಾರ ಮಾಡಿ ಕೊನೆಯ ನಿರ್ಧಾರವೆಂಬಂತೆ ತಮ್ಮ ಆಸ್ತಿಯ ಅರ್ಧಾಂಶವನ್ನು ಬೇರೆ ಬೇರೆ ಧರ್ಮ ಸಂಸ್ಥೆಗಳಿಗೂ, ಉಳಿದ ಅರ್ಧವನ್ನು ಶಾಂತಿಯ ಹೆಸರಿಗೂ ವೀಲು ಮಾಡಿಸಿದ್ದರು. ಶಾಂತಿ ತಿಂಗಳಿಗೆ ಐವತ್ತು ರೂಪಾಯಿಯಂತೆ ಗೌರಮ್ಮನಿಗೆ ಕೊಡಬೇಕೆಂದೂ ಅದರಲ್ಲಿ ಕಾಣಿಸಿದ್ದರು. ಆದರೆ ಈಗ ಅವರ ಮನಸ್ಸು ಕೊಂಚ ಚಲಿಸಿತು; ಬೇರೆ ವೀಲು ಮಾಡಿಸುವ ಮನಸ್ಸಾಯಿತು.

ದಿನ ದಿನಕ್ಕೆ ಕ್ಷೀಣವಾಗುತ್ತ ನಡೆದಿದ್ದರೂ ಶಾಂತಿ ಒಂದು ಕ್ಷಣವೂ ಬಿಡದೆ ಅವರ ಆರೈಕೆಯಲ್ಲಿಯೇ ಮಗ್ನಳಾಗಿದ್ದಳು.

ಗೌರಮ್ಮನಿಗೆ ಒಂದೇ ಯೋಚನೆ; ಎಲ್ಲಿ ತನ್ನ ಆಸ್ತಿಯನ್ನೆಲ್ಲ ಅವಳ ಹೆಸರಿಗೆ ಮಾಡಿಬಿಡುವರೋ ಎಂದು. ಅದಕ್ಕಾಗಿ ಗಳಿಗೆಗೊಮ್ಮೆ ಬಂದು ಅಣ್ಣನ ಕಿವಿಯೂದುತ್ತಿದ್ದಳು. ಆಸ್ತಿಯ ಹಕ್ಕು ತನಗೋ ತನ್ನ ಮಗ ನಿಗೋ ಬಂದರೆ ತಾನು ಬೇಕಾದಂತೆ ಮೆರೆಯಬಹುದಲ್ಲಾ ಎಂದು ಎಣಿಕೆ ಹಾಕಿಕೊಂಡಿದ್ದಳು.

ನಾರಾಯಣರಾಯರ ಹೃದಯ ತುಂಬಾ ನೊಂದು ಹೋಗಿತ್ತು. ಶಾಂತಿಯ ಮೇಲೆ ಸಂಶಯಪಡುವುದರಿಂದ ಅವರಿಗೆ ನೆಮ್ಮದಿಯೇನೂ ದೊರೆ ಯುತ್ತಿರಲಿಲ್ಲ. ಅವಳು ಅಷ್ಟು ವಾತ್ಸಲ್ಯದಿಂದ ತನ್ನಾರೈಕೆ ಮಾಡುತ್ತಿರುವು ದನ್ನು ಕಂಡು ಅವರಿಗೆ ಕಣ್ಣೀರು ಬರುತ್ತಿತ್ತು.

ಪಕ್ಕದ ಕೋಣೆಯಲ್ಲಿ ಮಗು ಕೂಗುತ್ತಿದ್ದರೂ ಒಮ್ಮೊಮ್ಮೆ ಕುಳಿತಲ್ಲಿಂದ ಆಕೆ ಏಳುತ್ತಿರಲಿಲ್ಲ. ಆಗ ನಾರಾಯಣರಾಯರೇ ಅವಳನ್ನು ಎಚ್ಚರಿಸುತ್ತಿದ್ದರು. " ಮಗುವನ್ನು ನೋಡಿಕೊಳ್ಳಬಾರದೇ ಮಗೂ ? "

ಆದರೂ ಆಕೆ ಹೋಗುತ್ತಿರಲಿಲ್ಲ. " ಅದು ಸಾಯಲಿ ಅಪ್ಪ, ಅವರ ಹೆಸರಿಗೆ ಕಲಂಕ ತಂದ ಮಗು ಸತ್ತರೆ ನನಗೇನೂ ದುಃಖವಿಲ್ಲ. " ನಾರಾಯಣ ರಾಯರಿಗೆ ಚೂರಿಯಿಂದ ತಿವಿದಂತಾಗುತ್ತಿತ್ತು.

ದಿನಕಳೆದಂತೆ ತಾವು ಶಾಂತಿಯ ವಿಚಾರದಲ್ಲಿ ತಳೆದ ಅಭಿಪ್ರಾಯವು ತಪ್ಪು ಎಂಬುದು ಅವರಿಗೆ ತಿಳಿಯತೊಡಗಿತು. ಆದರೆ ಅದನ್ನು ಅವಳೆದುರು ಆಡಿ ತೋರಿಸಲು ವಿಧಿ ಅವಕಾಶ ಕೊಡಲಿಲ್ಲ. ಕಾಯಿಲೆ ವಿಪರೀತಕ್ಕೆ ಹೋಯಿತು. ಬದುಕುವ ಆಶೆ ಉಳಿಯಲಿಲ್ಲ. ಶಾಂತಿ ಅವರ ಪಕ್ಕ ಬಿಟ್ಟು ಏಳಲಿಲ್ಲ. ಅವರ ಬದುಕಿನ ಕೊನೆಯ ಗಳಿಗೆಯೂ ಬಂತು. ಮೆಲ್ಲನೆ ಕಣ್ದೆರೆದು ಶಾಂತಿಯನ್ನು ನೋಡಿದರು. ಅವಳ ಕೈ ಮೃದುವಾಗಿ ಅವರ ಎದೆಯ ಮೇಲೆ ಆಡು ತ್ತಿತ್ತು. ಒತ್ತರಿಸಿ ಬರುತ್ತಿರುವ ಕಣ್ಣೀರನ್ನು ಹೇಗೋ ತಡೆದುಕೊಂಡಳು.

ಅವರ ಕ್ಷೀಣ ಹಸ್ತ ಮೆಲ್ಲನೆ ಚಲಿಸಿತು. ಅವಳ ಕೈಯನ್ನು ಹಿಡಿಯಲು ಪ್ರಯತ್ನಿಸಿತು. ಅವಳೇ ಅದನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ಅವರ ಮುಖದ ಕಡೆಗೆ ಕಣ್ಣು ಹೊರಳಿಸಿದಳು. ಕಣ್ಣಲ್ಲಿ ನೀರಾಡುತ್ತಿತ್ತು.

ಏನನ್ನೋ ಹೇಳಬಯಸುವವರಂತೆ ನಾಲಿಗೆ ಆಡಿಸಿದರು. ಆದರೆ ಮಾತುಗಳೇ ಹೊರಡಲಿಲ್ಲ.

ಕೊನೆಯ ಬಾರಿ ಶಾಂತಿಯನ್ನು ನೋಡಿದರು. ಕಣ್ಣುಗಳು ಮುಚ್ಚಿದುವು. ಮುಚ್ಚಿದ ಕಣ್ಣು ಮತ್ತೆ ತೆರೆಯಲಿಲ್ಲ. ಬಳಿಯಲ್ಲೇ ಇದ್ದ ಡಾಕ್ಟರರು ನಾಡಿ ಪರೀಕ್ಷೆ ಮಾಡಿ ನಿರಾಶೆಯಿಂದ ಮುಖ ಹೊರಳಿಸಿದರು. "ಎಲ್ಲವೂ ಮುಗಿಯಿತಮ್ಮ." ಅವರು ಹೊರಟು ಹೋದರು ಶಾಂತಿಯ ಕಣ್ಣು ಕತ್ತಲು ಕವಿದಂತಾಯಿತು. "ಅಪ್ಪಾ ಅಪ್ಪಾ" ಎಂದು ಕೂಗುತ್ತ ಅವರೆದೆಯ ಮೇಲೆ ಬಿದ್ದುಬಿಟ್ಟಳು. ಒಳಗಡೆ ಮಗು ಕೂಗುತ್ತಿತ್ತು; ಆದರೆ ಅವಳ ಗಮನ ಆ ಕಡೆಗೆ ಹರಿಯಲಿಲ್ಲ.

"ಸಾಯುವಾಗಲೂ ಅನುಮಾನವಿಟ್ಟುಕೊಂಡೇ ಹೋದರು. ತಮ್ಮ ಮಗುವನ್ನು ಕ್ಷಮಿಸಲಿಲ್ಲ. ತಾನೂ ಸಾಯಬಾರದಿತ್ತೇ ?" ಎಂದುಕೊಂಡು ಅತ್ತಳು. ಗೌರಮ್ಮ ಬಂದರು.

"ಅಯ್ಯೋ ಈ ರಾಕ್ಷಸಿ ಅಣ್ಣನನ್ನು ತಿಂದಳು" ಎಂದು ಕೂಗಾಟ ಮಾಡಿದಳು.

ಅಳುತ್ತ ಕೂತರೆ ನಡೆಯುವಂತಿರಲಿಲ್ಲ. ಹೇಗೋ ಅಳುವನ್ನು ತಡೆದು ಕೊಂಡು ಶಾಂತಿ ಎದ್ದು ನಿಂತಳು. 'ನೀನೇ ನನ್ನ ಪಾಲಿಗೆ ಗಂಡು ಮಗು' ಎಂದಿಲ್ಲವೇ ಅವರು. ಗಂಡು ಮಗುವಿನಂತೆ ಧೈರ್ಯದಿಂದ ಅವರ ಅಂತ್ಯ ಸಂಸ್ಕಾರಗಳನ್ನು ಮುಗಿಸಿದಳು.

## ೨೦

ನಾರಾಯಣರಾಯರು ಸತ್ತು ಎರಡನೆ ದಿನಕ್ಕೆ ವಕೀಲರು ಬಂದು ವಿಲನ್ನು ಓದಿ ಹೇಳಿ, ಅದಕ್ಕೆ ತಕ್ಕ ವ್ಯವಸ್ಥೆ ಮಾಡಿದರು. ವಕೀಲರು ಹೇಳಿದ್ದನ್ನು ಕೇಳಿ ಶಾಂತಿ ಸ್ತಬ್ಧಳಾದಳು. ಕನಸಿನಲ್ಲಿಯೂ ಅವಳದನ್ನು ನಿರೀಕ್ಷಿಸಿರಲಿಲ್ಲ. ಬ್ಯಾಂಕಿನಲ್ಲಿರುವ ಎಪ್ಪತ್ತೈದು ಸಾವಿರ ರೂಪಾಯಿಯಲ್ಲಿ ಐವತ್ತು ಸಾವಿರ ರೂಪಾಯಿ ಅವಳಿಗೆ; ಉಳಿದ ಇಪ್ಪತ್ತೈದು ಸಾವಿರ ಧರ್ಮ ಸಂಸ್ಥೆಗಳಿಗೆ.

ಅವರ ಎಲ್ಲಾ ಆಸ್ತಿಯನ್ನು ಅವಳಿಗೆ ಕೊಟ್ಟಿದ್ದರು. ಈಗಿದ್ದ ಮನೆ ಕೂಡಾ ಅವಳ ಹೆಸರಿಗೇ ಮಾಡಲ್ಪಟ್ಟಿತ್ತು.

ಎಲ್ಲವನ್ನೂ ಕೇಳಿ ಶಾಂತಿ ಕಣ್ಣೀರು ಸುರಿಸಿದಳು. "ಇಲ್ಲ, ಅವರು ನನ್ನನ್ನು ಕ್ಷಮಿಸಿದ್ದಾರೆ. ನಾನು ನಿರ್ದೋಷಿ ಎನ್ನುವುದನ್ನು ಒಪ್ಪಿದ್ದಾರೆ." ಅವಳಿಗೆ ತುಂಬಾ ಸಮಾಧಾನವೆನಿಸಿತು.

ವೀಲಿನ ಸುದ್ದಿ ಕೇಳಿ ಗೌರಮ್ಮ ತಣ್ಣಗಾಗಿಬಿಟ್ಟಿದ್ದಳು. ಅವಳ ಯೋಜನೆಗಳೆಲ್ಲವೂ ತಲೆಕೆಳಗಾಗಿದ್ದುವು. ಶಾಂತಿಯ ಮೇಲೆ ಹಲ್ಲು ಕಡಿದಳು. ಆದರೆ ಇನ್ನೇನೂ ಮಾಡುವಂತೆ ಇರಲಿಲ್ಲ. ಎಲ್ಲವೂ ನಿಷ್ಫಲವಾಗಿತ್ತು.

ಶಾಂತಿ ವಕೀಲರೊಡನೆ ಚರ್ಚಿಸಿ ಆಸ್ತಿಯ ಆಡಳಿತೆಯನ್ನು ಅವರ ವಶಕ್ಕೆ ಒಪ್ಪಿಸಿದಳು. ಬ್ಯಾಂಕಿನಲ್ಲಿದ್ದ ಹಣವನ್ನು ತನ್ನ ಹೆಸರಿಗೆ ಮಾಡಿಕೊಂಡಳು. ಅದರಲ್ಲಿಯ ಐದು ಸಾವಿರ ರೂಪಾಯಿಯನ್ನು ಗೌರಮ್ಮನಿಗೆ ಕೊಡಲು ಮರೆಯಲಿಲ್ಲ. ಮನೆಯ ಎಲ್ಲಾ ವ್ಯವಸ್ಥೆಯನ್ನು ಮಾಡಿ ಮುಗಿಸಬೇಕಾದರೆ ಒಂದು ತಿಂಗಳು ಹಿಡಿಯಿತು.

"ಅತ್ತೆಮ್ಮ, ಮನೆಯಲ್ಲಿ ನೀವು ಇದ್ದುಕೊಳ್ಳಿ—ಖರ್ಚಿಗೆ ಬೇಕಾದಷ್ಟು ನಾನು ಕೊಡುತ್ತೇನೆ; ನಾನು ನಿಮ್ಮ ಮಗಳು" ಎಂದು ಶಾಂತಿ ಗೌರಮ್ಮನಿಗೆ ಹೇಳಿದಳು; ಅವರೇನೂ ಮಾತನಾಡಲಿಲ್ಲ.

ಒಂದು ತಿಂಗಳ ಹಿಂದೆ ನಿರ್ಗತಿಕಳಾಗಿದ್ದವಳು ಈಗ ಸಿರಿವಂತೆ. ತನ್ನ ಪರಿಸ್ಥಿತಿ ಎಲ್ಲವನ್ನೂ ಎಣಿಸಿ ಶಾಂತಿಗೆ ಅಳದಿರಲು ಸಾಧ್ಯವಾಗಲಿಲ್ಲ. "ಇಂದು ಅವರಿರುತ್ತಿದ್ದರೆ ಇದೆಲ್ಲವೂ ಅವರದಾಗುತ್ತಿತ್ತು. ನಾನು ದಾಸಿಯಾಗಿ ಅವರ ಪಾದಸೇವೆ ಮಾಡಿಕೊಂಡಿರುತ್ತಿದ್ದೆ. ಆದರೆ ಈಗ....ಎದೆಯೊಡೆದು ಸತ್ತು ಹೋಗುವುದಿಲ್ಲವೇಕೆ ?" ಅದಕ್ಕಿಂತಲೂ ಹೆಚ್ಚಿಗೆ ವಿಚಾರ ಮಾಡುವ ಶಕ್ತಿ ಅವಳಿಗಿದ್ದಿಲ್ಲ.

ಮನೆಗೆ ಬೇಕಾದ ಎಲ್ಲಾ ವ್ಯವಸ್ಥೆಗಳನ್ನು ಮಾಡಿ ಪಂಜಕ್ಕೆ ಹೊರಡುವ ಸಿದ್ಧತೆ ಮಾಡಿದಳು. ಒಳಗೆ ಮಗು ಕೂಗುತ್ತಲೇ ಇತ್ತು. ಓಡಿ ಹೋಗಿ ಅದನ್ನೆತ್ತಿಕೊಂಡಳು. ಮೂರು ತಿಂಗಳ ಮಗು ಸೊರಗಿ ಕಡ್ಡಿಯಾಗಿತ್ತು.

ಅದನ್ನೆತ್ತಿ ಎದೆಗಪ್ಪಿಕೊಂಡಳು. ಈ ಹಸುಗೂಸು ಏನಪರಾಧ ಮಾಡಿದೆ? ನಾನೆಂತಹ ದ್ರೋಹಿ. ತಾಯಿಯಾಗಿದ್ದರೆ ಹೀಗೆ ಮಾಡುತ್ತಿದ್ದಳೇ? ಇಲ್ಲ

ಮಗೂ ನಿನ್ನ ತಪ್ಪಿಲ್ಲ. ತಪ್ಪು ಯಾರದೂ ಇಲ್ಲ; ಅಪ್ಪ ನನ್ನನ್ನು ಕ್ಷಮಿಸಿದ್ದಾರೆ—ಎಂದು ಬಾರಿ ಬಾರಿಗೂ ಅದನ್ನು ಮುದ್ದಿಸಿದಳು.

ಇಷ್ಟು ಸ್ನೇಹದಿಂದ ಮಗುವನ್ನೆತ್ತಿಕೊಳ್ಳದೆ ಒಂದು ತಿಂಗಳು ಕಳೆದು ಹೋಗಿತ್ತು.

" ಛೀ, ನಾನೆಂತಹ ಪಾಪಿ, ಈ ಹಸುಗೂಸಿನ ಮೇಲೆ ಮತ್ಸರವೇ ? "

ಎಲ್ಲವನ್ನೂ ಮುಗಿಸಿಕೊಂಡು ಹೊರಡಬೇಕೆನ್ನುವಾಗ ಶಾರದೆಯ ನೆನಪಾಯಿತು.

" ಪುತ್ತೂರಿನಲ್ಲಿಯೇ ಅಲ್ಲವೇ ಅವಳಿರುವುದು; ಒಮ್ಮೆ ನೋಡಿಯೇ ಹೋಗುವೆ " ಎಂದುಕೊಂಡು ನಿಂತಳು.

ಹೇಗೋ ಪ್ರಯಾಸಪಟ್ಟು ಅವಳ ಮನೆಯ ಪತ್ತೆ ಹಚ್ಚಿ ಹೊರಟಳು. ಬೆಲೆಬಾಳುವ ಒಂದು ಸೀರೆ, ಖಣಗಳನ್ನು ತೆಗೆದುಕೊಂಡಳು. ಅವಳ ಮಗುವಿಗೆಂದು ಎರಡು ಗಜ ಒಳ್ಳೆಯ ಸಿಲ್ಕ ಬಟ್ಟೆ ತೆಗೆದುಕೊಂಡಳು. ಆಕೆ ತಾಯಿಯಾಗಿರಬಹುದೆಂದು ಶಾಂತಿ ಎಣಿಸಿದ್ದಳು. ಶಾರದೆಯ ಮನೆಯೂ ದೊಡ್ಡದೇ, ಅವಳ ಗಂಡ ಸಿರಿವಂತ, ಯಾವುದಕ್ಕೂ ಕೊರತೆ ಇರಲಾರದು, ಆಕೆ ನೆಮ್ಮದಿಯಿಂದಿರಬಹುದು, ಎಂದುಕೊಂಡು ಎದುರುಗಡೆ ಕಾಣುತ್ತಿರುವ ದೊಡ್ಡ ಮನೆಯ ಮೆಟ್ಟಲೇರಿದಳು. ನಡುಹರೆಯದ ಹೆಂಗುಸೊಬ್ಬಳು ಹೊರಜಗುಲಿಯ ಮೇಲೆ ಕೂತಿದ್ದಳು. ಶಾಂತಿಯ ಪರಿಚಯ ಅವರಿಗಾಗಲಿಲ್ಲ.

ಶಾಂತಿಗೂ ಅವರ ಪರಿಚಯವಿಲ್ಲ. ಹುಡುಕುವವಳಂತೆ ಅತ್ತಿತ್ತ ಕಣ್ಣು ಹೊರಳಿಸಿದಳು. ತನ್ನ ಗೆಳತಿ ಎಲ್ಲಾದರೂ ಕಾಣಸಿಗುವಳೆಂದು ನಿರೀಕ್ಷಿಸಿದಳು. ಆದರೆ ಒಬ್ಬಿಬ್ಬರು ಕೆಲಸದವರಲ್ಲದೆ ಯಾರೂ ಕಾಣಿಸಲಿಲ್ಲ. ಅವಳಿಗೆ ಅನುಮಾನವಾಯಿತು. ಮನೆ ತಪ್ಪಿರಬಹುದೇ ? " ಚಂದ್ರಶೇಖರ ರಾಯರ ಮನೆ ಇದೇ ಏನಮ್ಮ ? " ಎಂದು ವಿಚಾರಿಸಿದಳು. ಹೆಂಗುಸು ಹೌದೆಂದು ತಲೆಯಾಡಿಸಿದಳು.

" ಅವರ ಹೆಂಡತಿ ಶಾರದಮ್ಮನವರಿದ್ದಾರೆಯೇ ? "

" ಹೌದು, ಬನ್ನಿ ಕುಳಿತುಕೊಳ್ಳಿ " ಎಂದು ಅವರು ಎದ್ದು ಒಳಗೆ ಹೋದರು. ಒಂದೆರಡು ನಿಮಿಷ ಕಳೆದು ಬಡಕಲು ದೇಹದ ಹೆಂಗುಸೊ

ಬ್ಬಳು ಹೊರಗೆ ಬಂದಳು. ಮುಖ ಕಾಂತಿಹೀನವಾಗಿತ್ತು, ಕಣ್ಣುಗಳು ಒಳ ಸೇರಿದ್ದುವು.

" ಶಾರೀ.... "

" ಶಾಂತೂ. "

ಗೆಳತಿಯರಿಬ್ಬರೂ ಮಂತ್ರಮುಗ್ಧರಂತೆ ಒಂದು ಕ್ಷಣ ಒಬ್ಬರನ್ನೊಬ್ಬರು ನೋಡುತ್ತ ನಿಂತರು. ಶಾರದೆ ಬಾಗಿಲಲ್ಲಿ ನಿಂತೇ ಇದ್ದಳು. ಎಷ್ಟೋ ವರ್ಷ ಗಳ ನಂತರದ ಭೆಟ್ಟಿ. ಇಬ್ಬರೂ ಒಬ್ಬರನ್ನೊಬ್ಬರು ತಬ್ಬಿಕೊಂಡರು. ನಾಲ್ಕು ವರ್ಷಗಳ ಹಿಂದೆ ಹೀಗೆಯೇ ಒಬ್ಬರನ್ನೊಬ್ಬರು ತಬ್ಬಿಕೊಳ್ಳುತ್ತಿದ್ದರು. ಎಷ್ಟೋ ಹೊತ್ತಿನ ವರೆಗೆ ಇಬ್ಬರೂ ಮೌನ. ಇಬ್ಬರ ನುಗ್ಗಾಟದಲ್ಲಿ ಮಗು ಅಳತೊಡ ಗಿತು. ಶಾರದೆ ಅದನ್ನು ಕೈಗೆತ್ತಿಕೊಂಡು ಸಂತೈಸಿದಳು.

" ಹೆಸರೇನೇ ಇವಳದು ? "

" ಶಾರದಾ. " ಒಬ್ಬರನ್ನೊಬ್ಬರು ನೋಡಿಕೊಂಡು ನಕ್ಕರು.

" ಬಹಳ ಕೆಟ್ಟ ಹೆಸರು ಶಾಂತೂ. "

" ನನಗದೇ ಮೆಚ್ಚಿಗೆಯಮ್ಮ. "

ನಾಲಗೆ ನುಡಿಯುವುದಕ್ಕಿಂತಲೂ ಹತ್ತು ಪಟ್ಟು ಹೆಚ್ಚಾಗಿ ಅವರ ಹೃದಯ ಗಳು ನುಡಿಯುತ್ತಿದ್ದುವು.

" ಇದೇನೆ ಶಾರೀ, ಹೀಗೆ ಸೊರಗಿ ಹೋಗಿರುವೆ ? ನಿನ್ನ ಅವರೆಲ್ಲಿ ? "

ಶಾರಿಯ ಕಣ್ಣುಗಳು ಹನಿಗೂಡಿದುವು. " ಅವರಿಗೇನೋ ಕಾಯಿಲೆ ಯಂತೆ ಶಾಂತೂ, ಚಿಕಿತ್ಸೆಗೆಂದು ಮದ್ರಾಸಿಗೆ ಹೋಗಿದ್ದಾರೆ. "

" ಇನ್ನೂ ತಾಯಿಯಾಗಿಲ್ಲವೇ ಶಾರೀ ? "

" ನಿನ್ನ ಭಾಗ್ಯ ನನಗಿಲ್ಲ ಶಾಂತೂ. "

ಶಾಂತಿ ನಾಲಿಗೆ ಕಚ್ಚಿದಳು. ಅವಳಿಗೂ ಅಳು ಬಾರದಿರಲಿಲ್ಲ.

" ನಿನಗಿಂತಲೂ ನಾನು ದುರ್ದೈವಿ ಶಾರಿ, ಈ ಮಗು ನನ್ನದಲ್ಲ ! "

ತನ್ನ ನಾಲ್ಕು ವರುಷಗಳ ಇತಿಹಾಸವನ್ನೆಲ್ಲ ಶಾಂತಿ, ಗೆಳತಿ ಎದುರು ವಿವರಿಸಿ ಹೇಳಿದಳು. ಗೆಳತಿಯರಿಬ್ಬರೂ ಅದೆಷ್ಟೋ ಹೊತ್ತು ಮಾತಾಡುತ್ತ ಕುಳಿತರು. ಇಬ್ಬರಿಗೂ ಇತ್ತಣದ ಪರಿವೆಯೇ ಇದ್ದಿಲ್ಲ.

ಒಳಗಿಂದ ಅತ್ತೆಯ ಕರೆ ಕೇಳಿದಾಗಲೇ ಶಾರದೆಗೆ ಎಚ್ಚರವಾಯಿತು.

" ಅತ್ತೆ ಕರೆಯುತ್ತಾರೆ ಶಾಂತೂ, ಸ್ವಲ್ಪ ಕುಳಿತುಕೊ " ಎಂದು ಒಳಗೆ ನಡೆದಳು. ತುಂಬಾ ಹೊತ್ತಾದರೂ ಹಿಂದಿರುಗಲಿಲ್ಲ. ಒಳಗಡೆ " ಅಡುಗೆ ಇನ್ನೂ ಆಗಿಲ್ಲ. ನೀನು ಹರಟೆ ಹೊಡೆಯುತ್ತ ಕೂತಿರು " ಎಂದು ಅತ್ತೆ ರೇಗಾಡಿದಳು. ಶಾಂತಿಯ ಕಿವಿಗದು ಬೀಳದಿರಲಿಲ್ಲ. ಮನೆಯ ಪರಿಸ್ಥಿತಿಯೆಲ್ಲವೂ ಒಂದೇ ಕ್ಷಣದಲ್ಲಿ ಆಕೆಗೆ ತಿಳಿದುಹೋಯಿತು. ತಾನು ಇನ್ನು ಹೆಚ್ಚು ಹೊತ್ತು ಅಲ್ಲಿರುವುದು ಸರಿಯಲ್ಲವೆಂದು ಕಂಡಿತು.

ತುಂಬಾ ಹೊತ್ತು ಕಳೆದು ಶಾರಿ ಅಪರಾಧಿನಿಯಂತೆ ಹೊರಗೆ ಬಂದಳು. ಕೈಯಲ್ಲಿ ಒಂದು ಲೋಟ ಕಾಫಿಯಿತ್ತು. ಕಣ್ಣುಗಳಲ್ಲಿ ನೀರು ತುಂಬಿತ್ತು.

" ತುಂಬಾ ಕಾಯಿಸಿದೆ ಶಾಂತೂ.... "

" ಶಾರೀ, ನನ್ನೊಡನೆಯೂ ಹೀಗನ್ನಬೇಕೇನೆ? ನನಗೆ ಪರಕೀಯಳೇ ನೀನು? " ಗೆಳತಿ ತಂದಿಟ್ಟ ಕಾಫಿಯನ್ನು ಕುಡಿದಳು.

" ಅಪರೂಪಕ್ಕೆ ಬಂದ ಗೆಳತಿಯನ್ನು ಸತ್ಕರಿಸುವ ಭಾಗ್ಯ ನನ್ನ ಪಾಲಿಗಿಲ್ಲ ಶಾಂತೂ. "

" ಹಾಗನ್ನಬೇಡ ಶಾರೀ, ನನಗೆ ಅಳು ಬರುತ್ತಿದೆ. ನಿನ್ನ ಸತ್ಕಾರಕ್ಕೆ ನಾನು ಬಂದಿಲ್ಲ. ನೋಡಿಕೊಂಡು ಹೋಗಲು ಬಂದೆ,— ನೋಡಿದೆ. ನನ್ನ ಉಳಿದ ನೋವುಗಳ ಜೊತೆಯಲ್ಲಿ ಹೊಸತೊಂದು ಸೇರಿಕೊಂಡಿತು."

" ಶಾರೀ. "

ಪುನಃ ಅತ್ತೆಯ ಕರೆ. ಶಾರಿ ದೈನ್ಯದಿಂದ ಗೆಳತಿಯನ್ನು ನೋಡಿದಳು. ಶಾಂತಿಗೂ ಅಳು ಬಾರದಿರಲಿಲ್ಲ.

" ನನಗೆಲ್ಲವೂ ತಿಳಿಯುತ್ತದೆ ಶಾರೀ, ಹೋಗು; ನನ್ನನ್ನು ಮರೆಯಬೇಡ. "

ಕಣ್ಣೀರು ಸುರಿಸುತ್ತ ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಶಾರಿ ಮಗುವನ್ನು ಮುದ್ದಿಟ್ಟಳು.

" ಎಷ್ಟು ಕರೆಯಬೇಕೇ ನಿನ್ನನ್ನು ? " ಪುನಃ ಅತ್ತೆಯ ಗುಡುಗುದನಿ.

ಶಾರಿ ದೈನ್ಯದಿಂದ ಗೆಳತಿಯನ್ನೊಮ್ಮೆ ನೋಡಿ ಒಳಕ್ಕೆ ಹೊರಟು ಹೋದಳು. ಆಕೆಯ ಆ ದೀನ ನೋಟ ಶಾಂತಿಯ ಹೃದಯವನ್ನಿರಿಯಿತು. " ನಾವಿಬ್ಬರೂ ಸಮಾನ ದುಃಖಿಗಳು ಶಾರೀ. ನಾವಿಬ್ಬರೂ ಈ ಜಗತ್ತಿನಲ್ಲಿ

ಹುಟ್ಟಲೇ ಬಾರದಿತ್ತು."

ಗೆಳತಿಯ ಅವಸ್ಥೆಯನ್ನು ಕಂಡು ಅವಳೊಡಲು ನೊಂದಿತ್ತು. ಪತ್ತಿ ಒಂದು ಕ್ಷಣವೂ ಅಲ್ಲಿ ನಿಲ್ಲುವ ಬಯಕೆಯಾಗಲಿಲ್ಲ. ಕೈಯಲ್ಲಿದ್ದ ಮಗುವನ್ನು ಎದೆಗಪ್ಪಿಕೊಂಡಳು.

"ಯಾರ ಪಾಪದ ಫಲವಾಗಿಯೋ ನೀನು ಹೆಣ್ಣಾಗಿ ಹುಟ್ಟಿರುವಿ ಮಗು. ನಿನ್ನ ಗತಿ ಇನ್ನೇನಾಗಲಿದೆಯೋ ?"

ಆಳನ್ನು ಕರೆದುಕೊಂಡು ಮನೆಗೆ ಹೊರಟಳು. ಹೃದಯ ತುಂಬಾ ಭಾರವಾಗಿತ್ತು. ಆಕೆಯೂ ಜೀವನದಲ್ಲಿ ಸುಖವನ್ನು ಕಂಡವಳಲ್ಲ. ಆದರೂ ದುಃಖಪಡುವ ಸ್ವಾತಂತ್ರ್ಯವಾದರೂ ಅವಳ ಪಾಲಿಗೆ ಇತ್ತು. ಆದರೆ ಶಾರಿ ಆ ಸ್ವಾತಂತ್ರ್ಯವನ್ನೂ ಕಳೆದುಕೊಂಡಿದ್ದಳು.

## ೨೧

"ಗೋಪೂ" ಎಂದು ಮೆಟ್ಟಲೇರುತ್ತಲೇ ಕೂಗಿದಳು ಶಾಂತಿ. ಗೋಪು ದೀಪ ಹಿಡಿದುಕೊಂಡು ಹೊರಗೆ ಬಂದ.

"ಯಾರು ಅಕ್ಕ? ಅದೇನಕ್ಕ ಕತ್ತಲಾಗುವ ಹೊತ್ತಿಗೆ! ಬೆಳಗಿನ ಬಸ್ಸಿಗೆ ಬರಬಾರದಾಗಿತ್ತೇ?"

"ಏನೋ ಬಂದುಬಿಟ್ಟೆ. ಅಣ್ಣ ಎಲ್ಲಿ ?"

"ಅವರ ವಿಚಾರವೇ ನನಗೆ ತಿಳಿಯುವುದಿಲ್ಲಕ್ಕ. ನಿನ್ನೆ ಮಧ್ಯರಾತ್ರಿಯ ಸುಮಾರಿಗೆ ಯಾರೋ ಒಬ್ಬರು ಬಂದಿದ್ದರು. ಏನೋ ಅವರ ಮಗುವಿಗೆ ವಿಪರೀತ ಕಾಯಿಲೆಯಂತೆ. ನನಗೆ ಸಿಟ್ಟು ಬಂದು ಹೋಯಿತು. "ಅಣ್ಣ ಇಲ್ಲ ಹೋಗಿ" ಎಂದು ಗದರಿಸಿದೆ. ಆದರೆ ಕೋಣೆಯಲ್ಲಿ ಮಲಗಿದ ಅಣ್ಣನಿಗೆ ನನ್ನ ಮಾತು ಕೇಳಿಸಿತು. ಎದ್ದು ಹೊರಗೆ ಬಂದರು. ಬಂದವನು ಅವರ ಕಾಲು ಹಿಡಿದು ನಾಟಕವನ್ನೇ ಮಾಡಿದ. ಅವರು ಆ ನಡುರಾತ್ರಿಯಲ್ಲಿ ಕೈಚೀಲ ಹಿಡಿದುಕೊಂಡು ಹೊರಟೇ ಬಿಟ್ಟರು; ಇನ್ನೂ ಬಂದಿಲ್ಲ."

ಶಾಂತಿ ಎಲ್ಲವನ್ನೂ ಕೇಳಿದರು; ಮಾತನಾಡಲಿಲ್ಲ. ನಿಟ್ಟುಸಿರು ಬಿಟ್ಟ

ತನ್ನ ಕೋಣೆಗೆ ಹೋದಳು.

ಅವಳ ಕೈಯಲ್ಲಿದ್ದ ಮಗು ಕೂಗತೊಡಗಿತು. ಮಗುವನ್ನು ತೆಗೆದು ಕೊಂಡು ಒಳಕ್ಕೆ ನಡೆದಳು; ಮನೆಯಲ್ಲೆಲ್ಲೂ ದೀಪದ ಸುಳಿವಿರಲಿಲ್ಲ; ವಸ್ತ್ರ ಬಟ್ಟೆಗಳೆಲ್ಲವೂ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಯಜಮಾನತಿಯಿಲ್ಲದ ಮನೆ ಯೆಂದು ಯಾರೂ ಹೇಳಬಹುದಾಗಿತ್ತು. ಕೆಲಸದವಳು ಅಡುಗೆ ಮಾಡುತ್ತಿರ ಬಹುದು; ಅಡುಗೆಯವಳನ್ನು ಕರೆದು ಹಾಲು ತರಿಸಿ ಮಗುವಿಗೆ ಕುಡಿಸಿದಳು; ತೊಟ್ಟಿಲಲ್ಲಿ ತೂಗಿ ಮಲಗಿಸಿದಳು.

"ನೀರು ಕಾದಿದೆಯೇ ನಿಂಗೀ ?"

"ಹೌದಮ್ಮ."

ಶಾಂತಿ ಸ್ನಾನ ಮುಗಿಸಿ ಅಡುಗೆ ಮನೆಯತ್ತ ನಡೆದಳು. ಅಲ್ಲಿಯೂ ಹಾಗೇ—ಎಲ್ಲವೂ ಅಸ್ತವ್ಯಸ್ತ; ಶಾಂತಿಯ ಮನಸ್ಸಿಗೆ ಏನೋ ಹೊಳೆಯಿತು. ನಿಂಗಿಯನ್ನು ದಿಟ್ಟಿಸಿ ನೋಡಿದಳು. ಇನ್ನೂ ತರುಣಿ; ಮದುವೆಯಾಗಿಲ್ಲ; ಒಂದು ತಿಂಗಳ ಕಾಲಾವಧಿಯಲ್ಲಿ ಅವಳಲ್ಲಿ ತುಂಬಾ ಬದಲಾವಣೆಯಾದಂತೆ ಕಂಡಿತು.

ಅವ್ಯಕ್ತ ಸಂಶಯವೊಂದು ಅವಳ ಹೃದಯವನ್ನು ನಡುಗಿಸಿತು. "ಅಣ್ಣ ಬಂದೊಡನೆ ಗೋಪುವಿನ ಮದುವೆಯ ವ್ಯವಸ್ಥೆ ಮಾಡಿಸಬೇಕು" ಎಂದು ಕೊಂಡಳು.

ರಾತ್ರೆ ಊಟ ಮುಗಿಸಿ ಮಲಗುವ ಸಿದ್ಧತೆ ಮಾಡಿದರೂ ಅಣ್ಣ ಇನ್ನೂ ಬಂದಿರಲಿಲ್ಲ; ಬರುವ ನಿರೀಕ್ಷೆಯೂ ಇರಲಿಲ್ಲ. ಶಾಂತಿ ತುಂಬಾ ದಣಿದಿದ್ದಳು; ನಿದ್ದೆಯೂ ಬೇಗನೆ ಬಂದುಬಿಟ್ಟಿತು.

ಮಧ್ಯರಾತ್ರೆಯ ಸುಮಾರಿಗೆ ಅವಳಿಗೆ ಒಮ್ಮೆಲೇ ಎಚ್ಚರವಾಯಿತು; ಎದ್ದು ಕುಳಿತಳು; ಯಾರೋ ಮಾತನಾಡಿದ ಸದ್ದು ಕೇಳಿಸಿತು. ಅನುಮಾನ ದಿಂದ ದೀಪಹಚ್ಚಿದಳು; ನಿಂಗಿ ಮಲಗಿದಲ್ಲಿಗೆ ಹೋಗಿ ನೋಡಿದಳು; ಅವಳು ಇದ್ದಿಲ್ಲ; ಎದೆ ಧಸಕ್ಕೆಂದಿತು.

ಮೆಲ್ಲನೆ ಗೋಪು ಮಲಗಿದಲ್ಲಿಗೆ ಬಂದಳು. ದೀಪವಿನ್ನೂ ಮಿಣುಕಾಗಿ ಉರಿಯುತ್ತಿತ್ತು. ನಿಂಗಿ ಗೋಪುವಿನ ಹಾಸಿಗೆಯಲ್ಲಿದ್ದಳು. ಮತ್ತೆ ಅಲ್ಲಿ

ನಿಲ್ಲುವುದಾಗಲಿಲ್ಲ; ಓಡಿ ಹೋಗಿ ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡಳು; ಬಿಕ್ಕಿ ಬಿಕ್ಕಿ ಅತ್ತಳು.

ರಾತ್ರಿ ಕಳೆದು ಬೆಳಗಾಯಿತು; ಬೇಗನೇ ಎದ್ದು ಅಡುಗೆ ಮನೆಯತ್ತ ನಡೆದಳು. ನಿಂಗಿ ಇನ್ನೂ ಎದ್ದಿರಲಿಲ್ಲ; ತುಂಬಾ ಆಯಾಸಗೊಂಡವಳಂತೆ ಮಲಗಿ ನಿದ್ರಿಸುತ್ತಿದ್ದಳು; ಶಾಂತಿ ಅವಳನ್ನೆಬ್ಬಿಸುವ ಗೋಜಿಗೆ ಹೋಗಲಿಲ್ಲ. ತನ್ನಷ್ಟಕ್ಕೆ ಅಡುಗೆ ಮಾಡತೊಡಗಿದಳು.

ಬೆಳ್ಳಗೆ ಬೆಳಕಾದೊಡನೆ ನಿಂಗಿ ಯಜಮಾನಿಯಂತೆ ಕಣ್ಣುಜ್ಜಿಕೊಳ್ಳುತ್ತ ಎದ್ದಳು. ಶಾಂತಿಯನ್ನು ಕಂಡು ಹಾರಿಬಿದ್ದಳು. ಅವಳು ಎದ್ದುದನ್ನು ತಿಳಿದರೂ ಶಾಂತಿ ಮಾತನಾಡಲಿಲ್ಲ. ನಿಂಗಿ ಅಂಜುತ್ತಂಜುತ್ತ ಅಡುವೆ ಮನೆಗೆ ಬಂದಳು.

“ ನಮಗಿನ್ನು ಅಡುಗೆಯವಳ ಅಗತ್ಯವಿಲ್ಲ ನಿಂಗೀ, ನಿನ್ನ ಲೆಕ್ಕಾಚಾರ ಮಾಡಿಕೊಂಡು ಹೋಗಿಬಿಡು. ”

ನಿಂಗಿಗೆ ತಲೆಯ ಮೇಲೆ ತಣ್ಣೀರೆರಚಿದಂತಾಯಿತು. “ ಯಾಕವ್ವಾ ನನ್ನಿಂದೇನಾದರೂ.... ” ಶಾಂತಿಯ ಕೆರಳಿದ ನೋಟವನ್ನು ಕಂಡು ಮಾತು ಅರ್ಧಕ್ಕೇ ನಿಲ್ಲಿಸಿದಳು.

ಅಕ್ಕನ ಮಾತು ಗೋಪು ಕೇಳಿದ; ಕೇಳಿಯೂ ಕೇಳಿಸದವನಂತೆ ಸುಮ್ಮನಿದ್ದುಬಿಟ್ಟ. ತಪ್ಪು ಮಾಡಿದ್ದರೂ ಆ ತಪ್ಪಿನ ಹೊರೆಯನ್ನು ತಲೆಯ ಮೇಲೆ ಹೊತ್ತುಕೊಳ್ಳಲು ಆತ ಸಿದ್ಧನಿರಲಿಲ್ಲ.

“ ಹೋದರೆ ಹೋಗಲಿ, ಪೀಡೆ ಕಳೆಯಿತು ” ಎಂದು ಸುಮ್ಮನಿದ್ದುಬಿಟ್ಟ.

ನಿಂಗಿ ತಲೆತಗ್ಗಿಸಿಕೊಂಡು ನಿಂತಿದ್ದಳು; ಕಣ್ಣಲ್ಲಿ ನೀರಾಡುತ್ತಿತ್ತು. ಯಾರೂ ಇಲ್ಲದ ಅನಾಥೆ ಆಕೆ. ಎಲ್ಲೋ ನಾಲ್ಕು ವರುಷಗಳ ಹಿಂದೆ ಮದುವೆಯಾಗಿತ್ತಂತೆ. ಗಂಡ ಗಟ್ಟಕ್ಕೆ ಹೋದವನು ಹಿಂದಿರುಗಿ ಬಂದೇ ಇರಲಿಲ್ಲ. ಅಂದು ಚಿಕ್ಕ ಹುಡುಗಿಯಾಗಿದ್ದವಳು ಈಗ ತರುಣಿಯಾಗಿದ್ದಳು; ತಾರುಣ್ಯದ ಬಯಕೆಗಳನ್ನು ಹತ್ತಿಕ್ಕುವುದು ಅವಳಿಂದಾಗಲಿಲ್ಲ. ಸುಲಭವಾಗಿ ಗೋಪುವಿನ ತೋಳ್ತೆಕ್ಕೆ ಸೇರಿದಳು. ಗೋಪುವಿನ ಸಹವಾಸ ಆಕೆಯ ಪಾಲಿಗೆ ಹೊಸ

ಅನುಭವ; ಬದುಕಿನಲ್ಲಿ ಈವರೆಗೆ ಕಾಣದ ಸುಖವನ್ನು ಅವಳಿಗೆ ದಯ ಪಾಲಿಸಿತ್ತು. ಒಂದು ತಿಂಗಳ ಕಾಲ ಯಾವ ತಡೆಯೂ ಇಲ್ಲದೆ ಸ್ವೇಚ್ಛೆಯಾಗಿ ಅವನನ್ನನುಭವಿಸಿದಳು; ಆದರೆ ಈಗ....ಗೋಪು ಅವಳಿಗೆ ಬೆಂಬಲವಾಗಿ ನಿಲ್ಲು ವುದಕ್ಕೆ ಎಂದೂ ಸಿದ್ಧವಾಗುವಂತಿರಲಿಲ್ಲ.

ನಿಂಗಿಯ ಕಣ್ಣುಗಳಿಂದ ಉದುರಿದ ಕಣ್ಣೀರ ಹನಿಗಳು ಶಾಂತಿಯ ಕಣ್ಣಿಗೆ ಗೋಚರವಾಗದಿರಲಿಲ್ಲ.

ಯಾರ ತಪ್ಪಿಗೆ ನಿಂಗಿ ಶಿಕ್ಷೆ ಅನುಭವಿಸಬೇಕು? ಆದರೂ ಉಪಾಯ ವಿಲ್ಲ; ತಮ್ಮನ ಭವಿಷ್ಯವನ್ನು ನೆನೆದು ಆಕೆ ಕಠೋರವಾಗಲೇ ಬೇಕಾಯಿತು. ಆದರೆ ಒಮ್ಮೆಲೇ ಅವಳನ್ನು ಹೊರಗೆ ಹಾಕಲಿಲ್ಲ.

“ಈ ಬಾರಿ ನಿನ್ನನ್ನು ಕ್ಷಮಿಸಿದ್ದೇನೆ ನಿಂಗಿ; ಇನ್ನು ನನ್ನ ಕೋಣೆಯಲ್ಲಿ ಮಲಗಬೇಕು.” ನಿಂಗಿ ನಡುಗಿದಳು. “ಎಲ್ಲವೂ ಅಮ್ಮನಿಗೆ ಗೊತ್ತಾಗಿದೆ” ಎಂದು ತಿಳಿಯಿತು; ತಲೆತಗ್ಗಿಸಿ ಅವಳ ಮಾತಿಗೆ ಒಪ್ಪಿಗೆಯಿತ್ತಳು.

ಗೋಪು ಸದ್ದಿಲ್ಲದೆ ಗಂಜಿ ಊಟ ಮುಗಿಸಿ ಆಸ್ಪತ್ರೆಗೆ ಹೋಗಿ ಕುಳಿತ. “ತಾನು ತಪ್ಪು ಮಾಡಿದ್ದೇನೆಂಬ ಅಳುಕು ಅವನಿಗದ್ದಿಲ್ಲ; ಆದರೆ ತನ್ನ ತಪ್ಪು ಅಕ್ಕನಿಗೆ ತಿಳಿಯಿತೇನೋ ಎಂಬ ಸಂಶಯ ಮನಸ್ಸಿನ ನೆಮ್ಮದಿ ಯನ್ನು ಕದಡಿತ್ತು. ದಿನವಿಡೀ ಅಕ್ಕನೆದುರು ತಲೆತಗ್ಗಿಸಿಕೊಂಡೇ ಇದ್ದ. ಶಾಂತಿ ತುಂಬ ಜಾಗ್ರತೆ ವಹಿಸಿದ್ದಳು. ಅವನ ವಿಚಾರ ತನಗೆ ತಿಳಿದಿದೆ ಎಂಬು ದನ್ನು ಅವನಿಗೆ ಸ್ವಲ್ಪವೂ ತೋರಗೊಡಲಿಲ್ಲ.

ಸಂಜೆಯಾಗುವಾಗ ರಾಮರಾಯರು ಮನೆಗೆ ಬಂದರು; ಶಾಂತಿ ಅವ ರನ್ನೇ ಕಾಯುತ್ತ ಕುಳಿತಿದ್ದಳು. ಒಂದು ತಿಂಗಳಿಂದ ಕಾಣದ ಅಣ್ಣನನ್ನು ಕಾಣಲು ಆಕೆಯ ಹೃದಯ ತವಕಗೊಂಡಿತ್ತು. ಅವರು ಬಂದವರು ನೆಟ್ಟಗೆ ಮನೆಯೊಳಗೆ ಪ್ರವೇಶಿಸಿದರು. ಎದುರಿಗೆ ಶಾಂತಿ ಕುಳಿತಿರುವುದು ಕಂಡಿತು.

“ಯಾವಾಗ ಬಂದೆ ಶಾಂತೂ?”

ಶಾಂತಿ ಒಂದೇ ಸವನೆ ಅವರನ್ನು ನೋಡುತ್ತಿದ್ದಳು. ಅವರ ಅವಸ್ಥೆ ಯನ್ನು ಕಂಡು ಅವಳ ಬಾಯಿ ಕಟ್ಟಿಹೋಗಿತ್ತು. ಒಂದೇ ತಿಂಗಳಲ್ಲಿ ಗುರುತು ಸಿಕ್ಕದಷ್ಟು ಬಡವಾಗಿದ್ದರು. ಕಣ್ಣುಗಳು ಒಳಸೇರಿದ್ದುವು; ಉಟ್ಟುಕೊಂಡ ಬಟ್ಟೆಯೂ ಹರಿದಿತ್ತು. ಕಂಬದಂತೆ ನಿಂತುಕೊಂಡು ನೋಡಿದಳು. ಕಣ್ಣು

ಗಳು ತುಂಬಿಬಂದುವು.

" ಇದೆಲ್ಲ ಏನಣ್ಣ ?... "

ಕ್ಷೀಣ ನಗುವೊಂದು ಅವರ ಮೊಗದ ಮೇಲೆ ಮೂಡಿತು.

" ಯಾವುದು ಶಾಂತೂ ? "

" ಇದ್ಯಾಕಣ್ಣ ಹೀಗಾಗಿರುವಿರಿ ? ಒಂದು ತಿಂಗಳಿಂದ ಊಟ ಮಾಡಿಲ್ಲವೇ ? ಈ ಹರಕು ಬಟ್ಟೆ ಯಾಕೆ? ಬೇರೆ ಬಟ್ಟೆ ಇದ್ದಿಲ್ಲವೇ ? "

" ಇಷ್ಟು ದಿನ ಕಳೆದಾದರೂ ಬಂದೆಯಲ್ಲ; ನಿನಗೂ ಐಶ್ವರ್ಯದ ನಡುವೆ ನನ್ನ ಮರವೆಯಾಯಿತೇನೋ ಎಂದೆಣಿಸಿದ್ದೆ. "

ಅವಳಿಂದ ಅದನ್ನು ಸಹಿಸಲಾಗಲಿಲ್ಲ; ಅಣ್ಣನ ಈ ಅವಸ್ಥೆಯ ಕಾರಣ ಅವಳಿಗೆ ತಿಳಿಯಿತು.

ತನ್ನ ಕತೆಯೆಲ್ಲವನ್ನೂ ವಿವರಿಸಿದಳು. " ಅಂಥಾ ಸ್ಥಿತಿಯಲ್ಲಿ ನಾನು ಒಮ್ಮೆಲೇ ಹೊರಟು ಬರುವುದು ಸಾಧ್ಯವಿತ್ತೇ ? " ಎಂದಳು.

ರಾಮರಾಯರಿಗೆ ತಮ್ಮ ತಪ್ಪು ತಿಳಿಯಿತು ; ಹಾಗೆಲ್ಲ ಮಾತನಾಡಿ ತಂಗಿಯನ್ನು ನೋಯಿಸಬಾರದಿತ್ತು, ಎಂದಿತು ಹೃದಯ.

" ತಪ್ಪಾಯಿತು ಶಾಂತೂ, ಬೇಸರದಲ್ಲಿ ಏನೋ ಆಡಿಬಿಟ್ಟೆ. "

ಸ್ವಲ್ಪ ಹೊತ್ತಿನ ಮೇಲೆ ಶಾಂತಿ ಎಚ್ಚತ್ತಳು.

" ಊಟವಾಗಿದೆಯೋ ಅಣ್ಣ ? "

" ಇಲ್ಲ ಶಾಂತೂ, ತುಂಬಾ ಹಸಿವಾಗುತ್ತಿದೆ, ಏನಾದರೂ ಕೊಡಮ್ಮ. " ಶಾಂತಿ ಅವಸರವಾಗಿ ಕಾಫಿ ಮಾಡಿ, ಅವಲಕ್ಕಿ ಒಗ್ಗರಿಸಿದಳು.

" ನಿನ್ನ ಮಗು ಎಲ್ಲಿದೆ ಶಾಂತೂ ? "

" ಅವಳು ಆಗಲೇ ಮಲಗಿದ್ದಾಳೆ, ಇನ್ನೂ ಎದ್ದಿಲ್ಲ. " ಅವರು ಕಾಫಿ ಕುಡಿದು ಎದ್ದರು.

ಶಾಂತಿ ಅವಸರವಾಗಿ ಸಂಜೆಯ ಅಡುಗೆಯ ಸಿದ್ಧತೆ ಮಾಡಿದಳು ; ರಾಮರಾಯರು ಸ್ನಾನ ಮುಗಿಸಿ ತಮ್ಮ ಕೋಣೆಯಲ್ಲಿ ಕುಳಿತರು. ಎರಡು ದಿನಗಳ ಓಡಾಟದಿಂದ ತುಂಬಾ ದಣಿದಿದ್ದರು. ಅದರ ಮೇಲೆ ಉಪವಾಸ— ಸ್ವಲ್ಪ ವಿಶ್ರಾಂತಿಗೆಂದು ಹಾಗೆಯೇ ಒರಗಿ ಕುಳಿತರು. ಆದರೆ ವಿಶ್ರಾಂತಿ ಅವರ ಹಣೆಯಲ್ಲಿ ಬರೆದಿಲ್ಲ; ಯಾರೋ ಒಬ್ಬನು ಏದುತ್ತ ಬಂದ.

" ಕಂಪೌಂಡರರಿದ್ದಾರೆಯೇ ? " ಅವನು ಒಂದೇಸವನೆ ಉಬ್ಬಸ ಬಿಡುತ್ತಿದ್ದ.

" ಇಲ್ಲ. " ಎಂದ ಗೋಪು ಸಿಟ್ಟಿನಿಂದ.

ಆದರೆ ರಾಮುರಾಯರು ಆಗಲೇ ಎದ್ದು ಹೊರಗೆ ಬಂದಿದ್ದರು. " ಯಾರು, ಏನಾಗಬೇಕು ? "

ಬಂದವನು ಗಟ್ಟಿಯಾಗಿ ಅವರ ಎರಡೂ ಕಾಲುಗಳನ್ನು ಹಿಡಿದುಕೊಂಡ. " ಒಮ್ಮೆ ಬಂದು ನನ್ನ ಹೆಂಡತಿಯ ಪ್ರಾಣ ಉಳಿಸಬೇಕು ಸ್ವಾಮೀ. ಜ್ವರ ಬಂದು ಎಂಟು ದಿನವಾಯಿತು ; ಒಂದೇಸವನೆ ಬಡಬಡಿಸುತ್ತಿದ್ದಾಳೆ. "

" ಸರಿ ಬಂದೆ " ಎಂದು ಕೈಚೀಲವನ್ನು ಅವನ ಕೈಗಿತ್ತರು. ."ಶಾಂತೂ" ಎಂದು ಕೂಗಿದರು. ಅಡುಗೆಮನೆಯಲ್ಲಿದ್ದ ಶಾಂತಿ ಆ ಕರೆ ಕೇಳಿ ಓಡಿ ಬಂದಳು; ಅಣ್ಣ ಹೊರಟು ನಿಂತಿರುವುದು ಕಂಡಿತು.

" ಎಲ್ಲಿಗಣ್ಣ ? "

" ಇವನ ಹೆಂಡತಿಗೆ ವಿಪರೀತ ಕಾಯಿಲೆಯಂತೆ. "

" ಹೀಗೆ ಮಾಡಿದರೆ ಹೇಗಣ್ಣ ? ನಿಮ್ಮ ಪ್ರಾಣಕ್ಕೂ ಬೆಲೆಯಿದೆ. "

" ಏನು ಮಾಡಲಿ ಶಾಂತೂ.... "

ಅವಳು ಮಾತನಾಡಲಿಲ್ಲ, ಮುಖ ತಿರುಗಿಸಿ ಒಳಕ್ಕೆ ನಡೆದಳು. ಅಪರಿಚಿತನೆದುರು ತನ್ನ ದೌರ್ಬಲ್ಯವನ್ನು ತೋರಿಸಿಕೊಳ್ಳಲು ಅವಳು ಸಿದ್ಧವಾಗಿರಲಿಲ್ಲ. ಆದರೆ ಈ ಬಾರಿ ಅವಳು ಕಣ್ಣೀರು ಸುರಿಸಲಿಲ್ಲ. ನೆಟ್ಟಗೆ ಅಡುಗೆ ಮನೆಯತ್ತ ನಡೆದಳು; ಎಲ್ಲವೂ ಅಲ್ಲಲ್ಲಿ ಬಿದ್ದುಕೊಂಡಿತ್ತು. " ನೀನೇ ಅಡುಗೆ ಮಾಡಿ ಮುಗಿಸು ನಿಂಗಿ, ನನಗೇನೂ ಕೂಡುವುದಿಲ್ಲ " ಎಂದು ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗಿಬಿಟ್ಟಳು. ಅವಳಿಗೆ ಖಚಿತವಾಗಿತ್ತು— " ಅಣ್ಣ ಸಾಯುವ ಇಚ್ಛೆಯಿಂದಲೇ ಹೀಗೆ ಮಾಡುತ್ತಿದ್ದಾರೆ ! " ಅವಳಿಗೂ ಬದುಕುವ ಆಸೆಯೇನೂ ಇರಲಿಲ್ಲ. ಆದರೆ ತನ್ನ ಕಣ್ಣೆದುರಲ್ಲಿ ತನ್ನ ಅಣ್ಣನ ಸಾವಿನ ಕಲ್ಪನೆ ಮಾಡುವುದಕ್ಕೆ ಅವಳು ಸಿದ್ಧವಾಗಿರಲಿಲ್ಲ.

ಕತ್ತಲಾಯಿತು, ಗೋಪು ಊಟ ಮಾಡಿದ. ಶಾಂತಿ ಮಗುವಿಗೆ ಹಾಲು ಕುಡಿಸಿ ಸುಮ್ಮನೆ ಕೂತಳು ; ಊಟ ಮಾಡಲಿಲ್ಲ. " ಸ್ವಲ್ಪಾದರೂ ಊಟ

ಮಾಡಿ ಅಮ್ಮ" ಎಂದು ನಿಂಗಿ ಹತ್ತು ಬಾರಿ ಹೇಳಿ ಹೋದಳು; ಆದರೆ ಶಾಂತಿ ಊಟಕ್ಕೇಳಲಿಲ್ಲ.

"ನೀನು ಊಟ ಮಾಡು ನಿಂಗೀ, ನನಗೆ ಹಸಿವಿಲ್ಲ." ತನ್ನ ಅಣ್ಣ ಮೂರು ದಿನಗಳಿಂದ ಉಪವಾಸವಿರುವುದನ್ನು ತಿಳಿದೂ ಅವಳಿಂದ ಉಣ್ಣುವುದಕ್ಕೆ ಸಾಧ್ಯವೇ ? ಆದರೆ ನಿಂಗಿಗೆ ಆ ಸೂಕ್ಷ್ಮವೆಲ್ಲ ಹೇಗೆ ತಿಳಿಯಬೇಕು ?

ಶಾಂತಿ ಎಚ್ಚರವಾಗಿಯೇ ಇದ್ದಳು; ಅಣ್ಣ ಬಾರದೆ ಅವಳಿಗೆ ನಿದ್ದೆ ಬರುವಂತೆ ಇರಲಿಲ್ಲ. ಸುಮಾರು ಮಧ್ಯರಾತ್ರಿಯ ಹೊತ್ತಿಗೆ ಹೊರಗಡೆಯಿಂದ ಕರೆ ಕೇಳಿಸಿತು. ಅಣ್ಣ ಬಂದಿದ್ದರು; ಶಾಂತಿ ಅವಸರವಾಗಿ ಎದ್ದು ಬಾಗಿಲು ತೆರೆದಳು. ಅಣ್ಣನ ಬಾಡಿದ ಮೋರೆಯನ್ನು ಕಂಡು ಕರುಳು ಕಿತ್ತು ಬರುವಂತಾಯಿತು; ಮಾತನಾಡದೆ ಅವರಿಗೆ ಬಡಿಸಿದಳು. ಬೇಕೆಂದೇ ಅವರೆದುರಲ್ಲಿ ತಾನೂ ಕುಳಿತು ಊಟ ಮಾಡಿದಳು; ತಂಗಿಯ ಸ್ವಭಾವ ತಿಳಿದ ಅವರು ಮಾತನಾಡಲಿಲ್ಲ.

ಊಟ ಮುಗಿಸಿ ಎದ್ದರು; ಶಾಂತಿ ಹಾಸಿಗೆ ಹಾಸಿದಳು; ಆಯಾಸಗೊಂಡ ಅವರಿಗೆ ಮಲಗಲು ಯಾರೂ ಹೇಳಬೇಕಾಗಿರಲಿಲ್ಲ. ಅವಳಿಗೆ ಸ್ವಲ್ಪ ಸಮಾಧಾನವೆನಿಸಿತು. ಚೆನ್ನಾಗಿ ಹೊದ್ದುಕೊಂಡು ಮಲಗಿದಳು; ಚೆನ್ನಾಗಿ ನಿದ್ದೆ ಬಂದುಬಿಟ್ಟಿತು.

ನಸುಕಿನಲ್ಲೊಮ್ಮೆ ಶಾಂತಿಗೆ ಎಚ್ಚರವಾಯಿತು. ಪಕ್ಕಕ್ಕೆ ಹೊರಳಿ ನೋಡಿದಳು; ನಿಂಗಿ ಇರಲಿಲ್ಲ. ಕಣ್ಣುಗಳು ತೂಗುತ್ತಿದುವು; ಪುನಃ ಮಲಗಿದಳು. ಮತ್ತೆ ಬೆಳಗಾಗುವ ವರೆಗೆ ಎಚ್ಚರವಾಗಲಿಲ್ಲ. ಎಚ್ಚರವಾದಾಗ ನಿಂಗಿ ಅಡುಗೆ ಮನೆಯಲ್ಲಿದ್ದಳು; ನಿದ್ದೆಯ ಗುಂಗಿನಲ್ಲಿ ರಾತ್ರೆ ಕಂಡ ವಿಚಾರ ಶಾಂತಿಗೆ ನೆನಪಿನಲ್ಲಿರಲಿಲ್ಲ.

ಗಂಟೆ ಎಂಟಾದರೂ ಅಣ್ಣ ಎದ್ದಿರಲಿಲ್ಲ; 'ಪಾಪ, ಎಷ್ಟು ದಿನಗಳಿಂದ ನಿದ್ದೆಯಿಲ್ಲವೋ, ಮಲಗಿರಲಿ' ಎಂದು ಸುಮ್ಮನಾದಳು. ಅವರಿಗೆ ಎಚ್ಚರವಾಗುವಾಗ ಗಂಟೆ ಒಂಬತ್ತು ಕಳೆದು ಹೋಗಿತ್ತು. ಎಚ್ಚರವಾಗುತ್ತಲೇ

"ಗಂಟೆ ಎಷ್ಟಾಯಿತೇ ಶಾಂತೂ?" ಎಂದು ಕೇಳಿದರು.

"ಎಷ್ಟಾದರೇನಾಯಿತು, ಎದ್ದು ಮುಖ ತೊಳೆಯಿರಿ. ಈಗೇನು ಕರೆ

ದೊಯ್ಯಲು ಯಾರೂ ಬಂದಿಲ್ಲ."

ಅವರು ನಗುತ್ತ ಎದ್ದು ನಿಂತರು; ಒಂದು ತಿಂಗಳ ಹಿಂದೆ ತಂಗಿಯ ಜೊತೆಯಲ್ಲಿ ಹೊರಟು ಹೋದ ಗೆಲವು ಮತ್ತೆ ಹಿಂದಿರುಗಿತ್ತು.

ಬೆಳಗಿನ ಗಂಜಿಯೂಟ ಮುಗಿಸಿ ರಾಮರಾಯರು ಆಸ್ಪತ್ರೆಯ ಕೋಣೆಯ ಕಡೆಗೆ ಹೊರಟಾಗ "ಅಣ್ಣಾ ಸ್ವಲ್ಪ ನಿಲ್ಲಿ" ಎಂದು ಶಾಂತಿ ಪಕ್ಕದ ಕೋಣೆಯಲ್ಲಿ ನಿಂತು ಅವರನ್ನು ಕರೆದಳು.

"ಏಕೆ ಶಾಂತೂ ಏನಾಯಿತು?"

"ನಿಮ್ಮೊಡನೆ ಅಗತ್ಯದ ಕೆಲವು ವಿಚಾರ ಮಾತನಾಡಲಿದೆ."

"ಈಗೇನು ಅವಸರ, ಮತ್ತೆ ಮಾತನಾಡಿದರಾಯಿತು."

"ಮತ್ತೆ ಎಂದರೆ ಇನ್ನೆಷ್ಟು ದಿನ ಕಾಯಬೇಕಾಗುವುದೋ? ಕಾಯಲು ಸಾಧ್ಯವಿರುವ ವಿಚಾರವಲ್ಲವಿದು."

"ಏನು ಶಾಂತೂ ಅಂಥಾ ವಿಚಾರವಾವುದು?"

ಶಾಂತಿ ಒಂದು ಬಾರಿ ಅಡುಗೆ ಮನೆಯತ್ತ ಕಣ್ಣು ಹೊರಳಿಸಿದಳು. ಅಡುಗೆ ಮಾಡುವುದರಲ್ಲಿ ಬಿದ್ದ ನಿಂಗಿ ತಮ್ಮ ಮಾತನ್ನು ಕೇಳುವಂತಿಲ್ಲವೆಂದು ಖಚಿತ ಮಾಡಿಕೊಂಡಳು.

"ಗೋಪುವಿಗೊಂದು ಮದುವೆಯಾಗಬೇಡವೇ ಅಣ್ಣ?"

"ಓಹೋ ಅಷ್ಟೆಯೇ ವಿಚಾರ, ನಾನು ಏನೊ ಎಂದು ಭಾವಿಸಿದ್ದೆ" ಎಂದು ನಗುತ್ತ ಎದ್ದು ನಿಂತರು. ಆದರೆ ಶಾಂತಿ ಬಿಡಲಿಲ್ಲ.

"ತಮಾಷೆಯ ವಿಚಾರವಲ್ಲ ಅಣ್ಣ ಇದು."

"ನಿನ್ನ ಈ ರೀತಿಯ ಅವಸರಕ್ಕೆ ಕಾರಣವೇನು ಶಾಂತೂ?"

"ದಿನವಿಡೀ ಊರು ತಿರುಗುವವರಿಗೆ ಅದು ಹೇಗೆ ತಿಳಿಯಬೇಕು? ಇನ್ನು ಒಂದು ದಿನವೂ ವಿಳಂಬ ಮಾಡುವಂತಿಲ್ಲ. ಕೂಡಲೇ ಅವನ ಮದುವೆಯಾಗಬೇಕು."

"ಏನಾಯಿತು ಶಾಂತೂ? ಅವನೇನಾದರೂ...."

ಶಾಂತಿ ಅವರನ್ನು ತಡೆದು ಎಲ್ಲಾ ವಿಚಾರವನ್ನೂ ಹೇಳಿದಳು. ರಾಮರಾಯರ ಮುಖ ಗಂಭೀರವಾಯಿತು.

" ಇದು ನಿಜವೇ ಶಾಂತೂ ? "

" ಹೀಗೇಕೆ ಕೇಳುವಿರಣ್ಣ ? ಇದು ತಮಾಷೆ ಮಾಡುವ ವಿಚಾರವೇ ? "

" ಅವಳನ್ನು ಕಳುಹಿಸಿ ಬಿಡು ಶಾಂತೂ. "

" ನಿಮ್ಮ ಹುಚ್ಚುತನಕ್ಕೆ ಏನು ಹೇಳಬೇಕೋ ತಿಳಿಯದು. ಅದರಿಂದ ಸಮಸ್ಯೆ ತೀರಿದ ಹಾಗಾಯಿತೇ ? ಕದಿಯುವ ಕಳ್ಳನಿಗೆ ಹಿತ್ತಿಲ ಬೇಲಿ ಅಡ್ಡ ವಾಗುವುದೇ ? "

" ಹಾಗಾದರೆ ಏನು ಮಾಡಬೇಕೆನ್ನುವೆ ? "

" ಎಲ್ಲಿಯಾದರೂ ಒಳ್ಳೆಯ ಹೆಣ್ಣನ್ನು ಗೊತ್ತು ಮಾಡಿ. ಮದುವೆಯಾದ ಮೇಲೆ ಎಲ್ಲವೂ ಸರಿಹೋಗುವುದು. "

## ೨೨

" ಏನು ಭಟ್ಟರೇ ಅಪರೂಪ ? " ಎಂದು ರಾಮರಾಯರು ಬಳಿಯಲ್ಲಿದ್ದ ಕುರ್ಚಿಯನ್ನು ಎಳೆದು ಅವರೆದುರು ಇಟ್ಟರು.

" ನಾನು ಅಪರೂಪವೇ ಸ್ವಾಮಿ, ಒಳ್ಳೆಯ ಮಾತು ಹೇಳಿದಿರಿ. ನಿಮ್ಮನ್ನು ನೋಡದೆ ತುಂಬಾ ಸಮಯವಾಯಿತು ; ಊರಲ್ಲಿದ್ದೀರೋ ಇಲ್ಲವೋ ಎಂದು ನೋಡಿಕೊಂಡು ಹೋಗಲು ಬಂದೆ. "

" ನಮ್ಮದೇನು ಸ್ವಾಮಿ, ಕರೆದಲ್ಲಿಗೆ ಹೋಗಬೇಕಲ್ಲ. "

"ನಿಮ್ಮಂಥವರು ನಮ್ಮ ಊರಿಗೆ ಬಂದದ್ದು ಊರವರ ಪುಣ್ಯ ಸಾಮಿ."

"ಅದೆಲ್ಲ ಸುಮ್ಮನೆ, ಮನುಷ್ಯರಿಂದ ಏನಾಗುತ್ತದೆ? ಎಲ್ಲವೂ ಅಲ್ಲಿ ಮೇಲಿದ್ದಾನಲ್ಲ ಅವನ ಕೆಲಸ. "

" ಮೇಲಿದ್ದವನನ್ನು ಈ ಕಾಲದಲ್ಲಿ ಯಾರು ನಂಬುತ್ತಾರೆ ಸಾಮಿ ? ಅವನನ್ನು ನಂಬಿ ಕುಳಿತರೆ ಭಿಕ್ಷಾಪಾತ್ರೆಯೇ ಗತಿ. "

" ಹಾಗನ್ನಬೇಡಿ ಭಟ್ಟರೇ, ನಮಗೆ ವಿಶ್ವಾಸ ಬೇಕು. ನಮ್ಮಿಂದ ಸಾಧ್ಯವಿಲ್ಲವೆಂದು ಕಂಡಾಗಲೆಲ್ಲ ' ಸ್ವಾಮಿ ನೀನೇ ಗತಿ ' ಎಂದು ಎಲ್ಲ ವನ್ನೂ ಆತನ ಪಾದಕ್ಕರ್ಪಿಸುವಷ್ಟು ಚೈತನ್ಯ ನಮ್ಮಲ್ಲಿದ್ದರೆ, ನಾವು ಯಾರಿಗೂ

ಹೆದರಬೇಕಾಗಿಲ್ಲ. "

"ನಿಮ್ಮ ವಾದ ಚೆನ್ನಾಗಿದೆ. ಅಂದು 'ದೇವರೇ ನೀನೇ ಗತಿ' ಎಂದು ಕೂತಿದ್ದರೆ ನಮ್ಮ ಗೌರಿ ಸ್ಮಶಾನಕ್ಕೆ ಹೋಗುತ್ತಿದ್ದಳು. ನೀವು ದೇವರಂತೆ ಬಂದು ಅವಳ ಪ್ರಾಣ ಉಳಿಸಿದಿರಿ."

"ಅಲ್ಲೇ ನೀವು ತಪ್ಪಿರುವುದು ಭಟ್ಟರೆ, ನಿಮ್ಮ ಮಗಳು ನನ್ನಿಂದ ಬದುಕಿದ್ದು ಎಂದು ಭಾವಿಸಿದ್ದೀರಾ? ಅವಳು ಸಾಯಬೇಕೆಂದು ಆತನಿಚ್ಛೆ ಇರುತ್ತಿದ್ದರೆ ನನ್ನಂತಹ ಹತ್ತು ಜನ ಬಂದರೂ ಅವಳು ಬದುಕುತ್ತಿರಲಿಲ್ಲ. ನಾನು ಕೇವಲ ನಿಮಿತ್ತ ಮಾತ್ರ."

ಶಾಂತಿ ಎರಡು ಲೋಟದಲ್ಲಿ ಕಾಫಿ ಹಿಡಿದುಕೊಂಡು ಬಂದಳು.

"ಇದೇನು ಶಾಂತಮ್ಮ? ಹೊಟೇಲಿನವರಿಗೆ ಕಾಫಿ ಕುಡಿದು ಕುಡಿದು ಸಾಕಾಗಿರುತ್ತದೆ. ಇದೇಕೆ ಸುಮ್ಮನೆ ತೊಂದರೆ ತೆಗೆದುಕೊಂಡಿರಿ?"

"ಏನೋ ಅಪರೂಪಕ್ಕೆ ಬಂದಿದ್ದೀರಿ, ತೆಗೆದುಕೊಳ್ಳಿ."

"ಈಗ ನೋಡಿ ಕಂಪೌಂಡರರೇ, ಶಾಂತಮ್ಮನಂತಹ ದೇವತೆಗಳು ಜಗತ್ತಿನಲ್ಲಿ ಬಹಳ ಮಂದಿ ಇರಲಿಕ್ಕಿಲ್ಲ. ಇವರಿಂದ ದೇವರಿಗೆ ಯಾವ ಅನ್ಯಾಯವಾಗಿದೆ ಎಂದು ಈ ರೀತಿಯ ಶಿಕ್ಷೆ?"

"ಸಹಿಸುವ ಶಕ್ತಿ ಇದ್ದವರನ್ನು ಕಂಡೇ ಆತ ಕಷ್ಟಕೊಡುತ್ತಾನೆ ಸ್ವಾಮಿ. ಬಡವರೂ ದುಃಖಿಗಳೂ ಆತನಿಗೆ ತೀರಾ ಸಮೀಪದವರಂತೆ."

"ಏನು ಸಮೀಪವೋ ನಿಮಗೇ ಗೊತ್ತು. ನಿಮ್ಮ ವಿಶ್ವಾಸ ಕಂಡು ನನಗೇ ಆಶ್ಚರ್ಯವಾಗುತ್ತಿದೆ."

"ಆ ವಿಶ್ವಾಸವೊಂದು ಇರದಿರೆ ನಾನು ಇಷ್ಟು ದಿನವೂ ಬದುಕಿರುತ್ತಿರಲಿಲ್ಲ ಭಟ್ಟರೆ."

"ಅದು ಹೋಗಲಿ, ನಡೆಯಿರಿ, ಹೊಟೇಲಿನತ್ತಕಡೆ ಬರುವಿರೇನು?" ಎಂದು ಭಟ್ಟರು ಮಾತು ಬದಲಿಸಿದರು. ಹೊಟೇಲು ವ್ಯಾಪಾರದಿಂದ ಬೇಕಾದಷ್ಟು ದುಡ್ಡು ಸಂಪಾದಿಸಿದ ಅವರಿಗೆ ದೇವರ ನೆನಪು ಮಾಡಲು ಅವಕಾಶವೇ ಸಿಕ್ಕಿರಲಿಲ್ಲ. ಸದ್ಯಕ್ಕೆ ಅವರಿಗದು ಬೇಕಾಗಿಯೂ ಇರಲಿಲ್ಲ.

"ಅಂದ ಹಾಗೆ ನೀವು ಒಳ್ಳೆಯ ಸಮಯಕ್ಕೆ ಬಂದಿರಿ, ನಿಮ್ಮೊಡನೆ ಒಂದು ಮಾತು ಕೇಳಬೇಕಾಗಿತ್ತು."

" ಅವೇನು ಹೇಳಿಬಿಡಿ, ನಿಮಗೋಸ್ಕರ ಏನು ಬೇಕಾದರೂ ಮಾಡಲು ಸಿದ್ಧ."

" ಅಂಥಾ ವಿಶೇಷದ್ದೇನೂ ಅಲ್ಲ, ನಮ್ಮ ಗೋಪಾಲನಿಗೊಂದು ಮದುವೆ ಮಾಡಿಸುವ ಯೋಚನೆಯಾಗಿದೆ. ನಾವು ಬದುಕುವುದು ಇನ್ನೆಷ್ಟು ದಿನವೋ. ಹಾಗಾಗಿ ಅದೊಂದು ಬೇಗನೆ ಮಾಡಿ ಬಿಡೋಣ ಅಂತ."

" ಅದಕ್ಕೆ ನನ್ನಿಂದೇನಾಗಬೇಕು ಹೇಳಿ. ಹಣ ಬೇಕೆ? ಅಕ್ಕಿ ಬೇಕೆ? ಏನು ಬೇಕಾದರೂ ಹೇಳಿ, ಒದಗಿಸುತ್ತೇನೆ."

" ಎಲ್ಲದಕ್ಕಿಂತ ಮೊದಲು ಆಗಬೇಕಾದದ್ದೇ ಇಲ್ಲದೆ, ಅದನ್ನೆಲ್ಲ ತೆಗೆದು ಕೊಂಡು ಏನು ಮಾಡುವುದು ಹೇಳಿ."

" ಯಾವುದು ? "

ಭಟ್ಟರ ಬುದ್ಧಿಯನ್ನು ಕಂಡು ಶಾಂತಿಗೂ ನಗುಬಾರದಿರಲಿಲ್ಲ.

" ಹುಡುಗಿಯೇ ಇಲ್ಲದೆ ಅದನ್ನೆಲ್ಲ ತೆಗೆದುಕೊಂಡು ಏನು ಮಾಡುವುದು ಸ್ವಾಮಿ? ನಿಮ್ಮ ಹುಂಡಿಯಲ್ಲಿ ಎಲ್ಲಿಯಾದರೂ ಯೋಗ್ಯ ಸಂಬಂಧವಿದ್ದರೆ ಗೊತ್ತು ಮಾಡುವಿರಾ ? "

" ಅಷ್ಟೇಯೇ ; ಈ ಕಾಲದಲ್ಲಿ ಹುಡುಗಿಯರಿಗೆ ಏನು ಕೊರತೆ ಸ್ವಾಮಿ ? ಅವರ ಸಂಖ್ಯೆ ಹೆಚ್ಚಾಗಿ ಊರಿನ ನೆಮ್ಮದಿಯೇ ಕೆಟ್ಟುಹೋಗಿದೆ." ಭಟ್ಟರು ತಮ್ಮ ರಾಜಕೀಯ ಜ್ಞಾನವನ್ನು ಪ್ರದರ್ಶಿಸಿದರು.

" ಹಾಗಾದರೆ ಒಂದು ಒಳ್ಳೆಯ ಸಂಬಂಧವನ್ನು ಗೊತ್ತುಮಾಡಿ ಬಿಡಿ, ನೋಡೋಣ."

" ಓಹೋ ಅದಕ್ಕೇನು, ಇನ್ನು ಎರಡೇ ದಿನಗಳಲ್ಲಿ ತಯಾರು. ನಾಳೆಯೇ ಪುತ್ತೂರಿಗೆ ಹೋಗುವ ಕೆಲಸವಿದೆ. ಎಲ್ಲಾದರೂ ಒಂದು ಕಡೆ ನಿಶ್ಚಯ ಮಾಡಿಕೊಂಡೇ ಬರುವೆ."

" ಬಡವರ ಮನೆಯ ಹೆಣ್ಣಾದರೂ ಚಿಂತಿಲ್ಲ. ಒಳ್ಳೇ ಗುಣವಂತೆ ಯಾಗಿರಬೇಕು."

" ಛೇ ಛೇ, ಅಷ್ಟೂ ತಿಳಿಯುವುದಿಲ್ಲವೇ ನನಗೆ? "

ಅಣ್ಣ-ತಂಗಿಯರ ತಲೆಯ ಮೇಲಿನ ದೊಡ್ಡ ಭಾರವೊಂದು ಇಳಿದಂತಾ ಗಿತ್ತು. ಭಟ್ಟರು ಹೊರಟು ಹೋದರು.

ಇದಾಗಿ ಎರಡೇ ದಿನಗಳಲ್ಲಿ ಭಟ್ಟರು ಬಂದರು. ಸಂಬಂಧವನ್ನು ಕುದುರಿಸಿಕೊಂಡೇ ಬಂದಿದ್ದರು. ಪುತ್ತೂರಿನ ಹೈಸ್ಕೂಲಿನ ಮಾಸ್ಟರರ ಮಗಳಂತೆ; ಎಂಟನೇ ಕ್ಲಾಸು ಕಲಿತಿರುವಳಂತೆ; ಪ್ರಾಯ ಹದಿನಾರು; ಒಳ್ಳೇ ಲಕ್ಷಣವಾದ ಹುಡುಗಿ. ಅವರ ಶಿಫಾರಸಿನ ಮೇಲೆ ರಾಮರಾಯರು ಪುತ್ತೂರಿನ ವರೆಗೆ ಹೋಗಿ ಮದುವೆ ನಿಶ್ಚಯ ಮಾಡಿಕೊಂಡು ಬಂದರು.

ಹೆಣ್ಣಿನ ಕಡೆಯವರು ದಿಬ್ಬಣ ಹೊರಡಿಸಿಕೊಂಡು ಪಂಜಕ್ಕೆ ಬರುವುದೆಂದಾಯಿತು. ಮದುವೆ ಪಂಜದಲ್ಲಿಯೇ ಆಗಬೇಕೆಂದು, ಶಾಂತಿಯ ಹಟ. ಆದರೆ ನಡುವೆ ದೊಡ್ಡದೊಂದು ತೊಂದರೆ, ಮಳೆಗಾಲ ಸಮೀಪಿಸಿತ್ತು. ಮಳೆಗಾಲದಲ್ಲಿ ಪುತ್ತೂರಿನಿಂದ ಪಂಜಕ್ಕೆ ಬಸ್ಸು ಬರುವಂತಿರಲಿಲ್ಲ.

ಆದರೆ "ಮಳೆಗಾಲವಾದರೆ ಮಳೆಗಾಲ, ಮದುವೆಯಾಗಲಿ" ಎಂದಳು ಶಾಂತಿ. ಸರಿ, ಮತ್ತೆ ಅವಳ ಮಾತಿಗೆ ಎದುರಾಡುವ ಹಾಗಿರಲಿಲ್ಲ. ಇಂತಹ ಸಂಬಂಧವನ್ನು ಮಾಸ್ತರರು ಬಿಡುವುದಕ್ಕೂ ಸಿದ್ಧವಾಗಿರಲಿಲ್ಲ. ಹೆಣ್ಣಿನ ಕಡೆಯ ದಿಬ್ಬಣದವರು ಒಂಬತ್ತು ಮೈಲಿ ಕಲ್ಲುಹಾದಿಯನ್ನು ನಡೆದೇ ಪಂಜಕ್ಕೆ ಬಂದಿದ್ದರು. ಮಳೆ-ಗಾಳಿಯ ಹೊಡೆತಕ್ಕೆ ಒದ್ದೆಮುದ್ದೆಯಾಗಿ ಬಿಟ್ಟಿದ್ದರು.

ಅಂತೂ ಮಳೆಯ ರಭಸದ ನಡುವಿನಲ್ಲಿಯೇ ಗೋಪುವಿನ ಮದುವೆಯಾಗಿ, ರೋಹಿಣಿ ಗಂಡನ ಮನೆಗೆ ಬಂದಳು. ಶಾಂತಾ ಪ್ರೀತಿಯಿಂದ ತಮ್ಮನ ಹೆಂಡತಿಯನ್ನು ಸ್ವಾಗತಿಸಿದಳು.

"ಇನ್ನು ನೀನೇ ಈ ಮನೆಯೊಡತಿ ರೋಹಿಣಿ, ಎಲ್ಲವನ್ನೂ ನೋಡಿಕೊ." ಎಂದು ಅವಳನ್ನಪ್ಪಿಕೊಂಡಳು.

## ೨೩

ರೋಹಿಣಿ, ಶಾಂತಿ ಬಯಸಿದ ರೀತಿಯ ಹೆಣ್ಣಾಗಿರಲಿಲ್ಲ. ಆಧುನಿಕ ಕಾಲದವಳು. ಪಟ್ಟಣದ ಒನಪು-ಒಯ್ಯಾರಗಳನ್ನೆಲ್ಲ ಜೊತೆಯಲ್ಲಿ ತೆಗೆದು ಕೊಂಡೇ ಬಂದಿದ್ದಳು. ಅಡುಗೆ ಮಾಡುವುದಕ್ಕೂ ಬರುತ್ತಿರಲಿಲ್ಲ. ದಿನವಿಡೀ ಗಂಡನ ಜೊತೆಯಲ್ಲಿ ಸರಸವಾಡುವುದು, ಶೃಂಗಾರ ಮಾಡಿಕೊಳ್ಳುವುದು ಇವು

ಗಳಲ್ಲೇ ಕಾಲ ಕಳೆಯುತ್ತಿದ್ದಳು. ಮೊದಮೊದಲು ಶಾಂತಿ ಅದಕ್ಕೆ ಮಹತ್ವ ಕೊಡಲಿಲ್ಲ.

" ಇನ್ನೂ ಚಿಕ್ಕ ಹುಡುಗಿ, ಆಡಿಕೊಂಡಿರಲಿ " ಎಂದು ಸುಮ್ಮನಿದ್ದು ಬಿಟ್ಟಳು. ಒಂದೇ ಒಂದು ಮಾತನ್ನೂ ಆಡಲಿಲ್ಲ.

ಆದರೆ ದಿನವೂ ಹೀಗೆ ಮಾಡುತ್ತಿದ್ದರೆ ಹೇಗಾಗಬಹುದು? ಮೆಲ್ಲನೆ ಒಂದು ದಿನ ಅವಳನ್ನು ಕರೆದಳು.

" ರೋಹಿ, ಇಲ್ಲಿ ಬಾ ಅಮ್ಮ. "

ಅವಳಾಗ ಸ್ನಾನ ಮಾಡಿ ಶೃಂಗಾರ ಮಾಡಿಕೊಳ್ಳುವುದರಲ್ಲಿ ಬಿದ್ದಿದ್ದಳು. " ಸ್ವಲ್ಪ ನಿಲ್ಲಿ ಅತ್ತಿಗೆ, ಈಗ ಬಂದೆ " ಎಂದು ತನ್ನ ಕೆಲಸವನ್ನು ಮುಂದುವರಿಸಿದಳು. ಶಾಂತಿ ಸ್ವಲ್ಪ ಹೊತ್ತಿನ ವರೆಗೆ ಕಾದಳು. ಆದರೆ ಅವಳು ಬರುವ ಲಕ್ಷಣಗಳೇನೂ ಕಾಣಿಸಲಿಲ್ಲ. ನೆಟ್ಟಗೆ ಅವಳ ಕೋಣೆಗೆ ಹೋದಳು. " ಕರೆದದ್ದು ಕೇಳಿಸಲಿಲ್ಲವೇನೇ? " ಅವಳ ದನಿಯಲ್ಲಿ ಸಿಟ್ಟಿನ ಛಾಯೆಯಿತ್ತು.

" ಸ್ನಾನ ಮಾಡಿ ಬಂದಿದ್ದೆನಷ್ಟೆ. ಬಟ್ಟೆ ಉಟ್ಟುಕೊಳ್ಳುವಷ್ಟು ಅವಕಾಶವೂ ಇಲ್ಲವೇನು? " ಅಲಕ್ಷ್ಯದಿಂದಲೇ ರೋಹಿಣಿ ನುಡಿದಳು.

" ರೋಹಿಣಿ, ಇದು ಚೆನ್ನಾಗಿರುವುದಿಲ್ಲ."

" ಯಾವುದು? "

" ಹೀಗೆ ದಿನವಿಡೀ ಸೂಳೆಯರಂತೆ ಶೃಂಗಾರ ಮಾಡಿಕೊಂಡು ಕುಳಿತಿರುವುದು. ನೀನು ಗೃಹಿಣಿ. ಮನೆಯನ್ನು ನೋಡಿಕೊಳ್ಳಬೇಕಾದವಳು. "

ರೋಹಿಣಿ ಕೆರಳಿದ ಸಿಂಹಿಣಿಯಂತೆ ಅತ್ತಿಗೆಯನ್ನು ನೋಡಿದಳು. ಅತ್ತಿಗೆಯೇ ಈ ಮನೆಯ ಸರ್ವಾಧಿಕಾರಿಣಿ ಎನ್ನುವುದು ಅವಳಿಗೆ ತಿಳಿದಿರಲಿಲ್ಲ.

" ನಿನಗಿದೆಲ್ಲ ಅಧಿಕಪ್ರಸಂಗ ಬೇಡ ಅತ್ತಿಗೆ; ನನಗೆ ಹೇಳುವವರಿದ್ದಾರೆ. ನೀನು ನಿನ್ನ ಕೆಲಸ ಮಾಡಿಕೊಂಡು ಬಿದ್ದಿರು. "

ಶಾಂತಿಗೆ ತಲೆಯ ಮೇಲೆ ಹೊಡೆದಂತಾಯಿತು. ಇಂಥಾ ಉತ್ತರವನ್ನು ಅವಳು ನಿರೀಕ್ಷಿಸಿರಲಿಲ್ಲ. ಎಷ್ಟಾದರೂ ತಮ್ಮನ ಹೆಂಡತಿ, ಸಹಿಸಿಕೊಂಡಳು.

" ಆದರೂ ಇದು ಚೆನ್ನಾಗಿರುವುದಿಲ್ಲ ರೋಹಿಣಿ. ಗರತಿಯಾಗಿ ಬಾಳಬೇಕಾದರೆ ಇದನ್ನೆಲ್ಲ ಕಲಿಯಬೇಕು. "

" ನೀನೇನು ನನಗೆ ಬುದ್ಧಿ ಹೇಳುವ ಅಗತ್ಯವಿಲ್ಲ ಅತ್ತಿಗೆ, ನಾನು ಚಿಕ್ಕ ಮಗುವಲ್ಲ. "

ಶಾಂತಿಗೆ ಸಿಟ್ಟು ತಡೆಯಲಾಗಲಿಲ್ಲ. " ನಾಲಿಗೆ ಬಿಗಿ ಹಿಡಿದು ಮಾತ ನಾಡು ರೋಹಿಣಿ. ಇದು ನಿನ್ನಪ್ಪನ ಮನೆಯಲ್ಲ. "

ಅದಕ್ಕಿಂತ ಹೆಚ್ಚಿಗೆ ಮಾತನಾಡಲು ಅವಳಿಂದ ಸಾಧ್ಯವಾಗಲಿಲ್ಲ. ಉಕ್ಕಿ ಬರುವ ಕಣ್ಣೀರನ್ನು ತಡೆದುಕೊಂಡು ಒಳಗೆ ನಡೆದಳು.

" ಮತ್ತೆ ನಿಮ್ಮಪ್ಪನ ಮನೆಯೇನು ? " ಎಂದು ರೋಹಿಣಿ ಆಡಿದ ಮಾತು ಶಾಂತಿಯ ಕಿವಿಗೆ ಬೀಳದಿರಲಿಲ್ಲ. ಆದರೂ ಅವಳು ಮಾತನಾಡ ಲಿಲ್ಲ. ಮಧ್ಯಾಹ್ನ ಗೋಪು ಊಟಕ್ಕೆ ಕುಳಿತಾಗ ಮೆಲ್ಲನೆ ಮಾತೆತ್ತಿದಳು.

" ಗೋಪು, ನಿನ್ನ ಹೆಂಡತಿಗೆ ಸ್ವಲ್ಪ ಹೇಳಬಾರದೇ ? "

" ಏನಾಯಿತಕ್ಕ ? " ಅವನು ಆಶ್ಚರ್ಯದಿಂದ ತಲೆಯೆತ್ತಿದ.

" ಹೆಂಗುಸಾದವಳು ಸ್ವಲ್ಪಾದರೂ ಮನೆಗೆಲಸದ ಕಡೆಗೆ ಗಮನವೀಯ ಬೇಡವೇ ? ನಮ್ಮ ಬದುಕು ಇನ್ನೆಷ್ಟು ದಿನ ಗೋಪೂ ? ಆಮೇಲೆ ಮನೆಯನ್ನು ಅವಳು ನೋಡಿಕೊಳ್ಳಬೇಡವೇ ? "

" ಅದನ್ನು ನಾನೇನು ಹೇಳುವುದಕ್ಕ, ನೀನೇ ಹೇಳಬಾರದೇ? ನಿನ್ನ ಮಾತು ಕೇಳದಿರುವುದಕ್ಕೆ ಯಾರಿಂದ ಸಾಧ್ಯ ? ಕಲ್ಲನ್ನೂ ಕರಗಿಸಬಲ್ಲೆ ನೀನು. "

ಶಾಂತಿ ಅಭಿಮಾನದಿಂದ ತಮ್ಮನನ್ನು ನೋಡಿದಳು. ಆದರೆ ನಡೆದ ವಿಚಾರ ಮಾತ್ರ ಹೇಳಲಿಲ್ಲ.

" ಹಾಗಲ್ಲ ಗೋಪೂ. ನಿನ್ನ ಹೆಂಡತಿ, ನೀನು ಹೇಳಿದರೆ ಚೆನ್ನಾಗಿರುತ್ತದೆ. ನನ್ನ ಮಾತಿನಿಂದ ಅವಳು ಏಕೆ ನೊಂದುಕೊಳ್ಳುವಂತಾಗಬೇಕು ? "

ಬಳಿಯಲ್ಲೇ ನಿಂತ ರೋಹಿಣಿಗೆ ತಲೆಯ ಮೇಲೆ ಬಡಿದಂತಾಯಿತು. ಮಾತನಾಡದೆ ಸುಮ್ಮನೆ ನಿಂತುಕೊಂಡಳು.

" ಅಕ್ಕ ಹೇಳಿದ್ದು ಕೇಳಿತೇನೆ ರೋಹಿ ? "

ಅವಳು ಮುಖ ತಿರುಗಿಸಿಕೊಂಡು " ಹೂಂ " ಎಂದಳು. ಗೋಪು ಊಟ ಮಾಡಿ ಹೊರಟು ಹೋದ.

ರೋಹಿಣಿ ಮತ್ತೂ ಹಾಗೆಯೇ ನಿಂತಿದ್ದಳು. ಶಾಂತಿಗೆ ತುಂಬಾ

ಕೆಡುಕೆನಿಸಿತು. ತನ್ನ ಪ್ರೀತಿಯ ತಮ್ಮನ ಹೆಂಡತಿ. ಅವಳಿಗೆ ತುಂಬಾ ದುಃಖವಾಯಿತು. 'ಛೇ, ನಾನು ಹಾಗನ್ನಬಾರದಿತ್ತು' ಎಂದುಕೊಂಡಳು. ಮೆಲ್ಲನೆ ಅವಳ ಬಳಿಗೆ ಹೋಗಿ ಬೆನ್ನ ಮೇಲೆ ಕೈಯಾಡಿಸಿದಳು.

"ರೋಹೀ....ರೋಹಿಣಿ."

ಅವಳು ಮಾತನಾಡದೆ ಹಾಗೆಯೇ ಬಿಗಿದುಕೊಂಡು ನಿಂತಳು.

"ರೋಹೀ, ನನ್ನ ಮುದ್ದು...."

ಆದರೂ ಅವಳು ಮಾತನಾಡಲಿಲ್ಲ. ಅವಳಿಗೆ ಗಂಡನೆದುರು ಅಪಮಾನ ವಾಗಿತ್ತಲ್ಲವೇ?

"ರೋಹಿಣಿ, ಸಿಟ್ಟಾದೆಯಾ ನನ್ನ ಮೇಲೆ?" ಎಂದು ಅವಳ ಮುಖ ವನ್ನು ತನ್ನೆಡೆಗೆ ಸೆಳೆದುಕೊಂಡಳು. ಅವಳ ಮುಖ ಕೆಂಪಾಗಿತ್ತು. ಕಣ್ಣುಗಳಲ್ಲಿ ನೀರು ತುಂಬಿತ್ತು. ಶಾಂತಿಗೆ ನಿಜವಾಗಿಯೂ ಕೆಡುಕೆನಿಸಿತು. ಅವಳಾಡಿ ದ್ದನ್ನೆಲ್ಲ ಮರೆತಳು. ಇನ್ನೂ ಜಗತ್ತನ್ನೇ ಅರಿಯದ ಚಿಕ್ಕ ಮಗು ಎಂದು ಕೊಂಡಳು.

"ರೋಹೀ ಊಟ ಮಾಡಮ್ಮ. ಹೀಗೆಲ್ಲಾ ಮಕ್ಕಳಂತೆ ಹಟ ಮಾಡ ಬಾರದು."

"ನಾನು ಉಣ್ಣುವುದಿಲ್ಲ, ನನಗೆ ಹಸಿವಿಲ್ಲ ಅತ್ತಿಗೆ." ರೋಹಿಣಿ ಬಿರು ಸಾಗಿಯೇ ನುಡಿದಳು.

"ಹುಚ್ಚು ಹುಡುಗಿ, ನಿಮ್ಮಮ್ಮನಿರುತ್ತಿದ್ದರೆ ಹೀಗೆಯೇ ಗದರಿಸುತ್ತಿ ಲಿಲ್ಲವೇ ರೋಹಿ? ನಾನೂ ನಿಮ್ಮಮ್ಮನಂತೆ ಅಲ್ಲವೇ? ಅಮ್ಮನ ಮೇಲೆ ಸಿಟ್ಟಾಗುತ್ತಾರೆಯೇ?"

ರೋಹಿಣಿಗೆ ಅಮ್ಮನ ಪ್ರೀತಿ ಎಂತಹುದೆಂದು ತಿಳಿದಿರಲಿಲ್ಲ. ಚಿಕ್ಕಂದಿ ನಲ್ಲೇ ಅಮ್ಮನನ್ನು ಕಳೆದುಕೊಂಡವಳು. ಇದು ಅವಳ ಪಾಲಿಗೆ ಹೊಸ ಅನುಭವ. ಶಾಂತಿಯ ಮಾತು ಅವಳ ಹೃದಯದ ಮೇಲೆ ಪರಿಣಾಮ ಮಾಡ ದಿರಲಿಲ್ಲ. ಮಾತನಾಡದೆ ಬಂದು ಊಟಕ್ಕೆ ಕುಳಿತಳು. ಶಾಂತಿ ಅವಳನ್ನು ಅಷ್ಟಕ್ಕೆ ಬಿಡಲಿಲ್ಲ.

"ಇಲ್ಲಿ ನೋಡೇ ರೋಹಿಣಿ" ಎಂದು ಅವಳ ಮುಖವನ್ನೆತ್ತಿ ಮುದ್ದಿ

ಟ್ಟಳು. ಅವಳಿಗೆ ತನ್ನ ಗತಜೀವನದ ನೆನಪಾಗಿರಬೇಕು; ಡಾಕ್ಟರರೊಡನೆ ತಾನು ಕಳೆದ ರಸನಿಮಿಷಗಳ ನೆನಪಾಗಿರಬೇಕು.

ಅತ್ತಿಗೆಯ ವರ್ತನೆಯನ್ನು ಕಂಡು ರೋಹಿಣಿಗೆ ನಾಚಿಕೆಯೆನಿಸಿತು. ಆದರೆ ಮಾತನಾಡಲು ಅಭಿಮಾನ ಬಿಡಲಿಲ್ಲ ಸುಮ್ಮನೆ ತಲೆತಗ್ಗಿಸಿಕೊಂಡು ಊಟ ಮಾಡಿದಳು. ಆದರೆ ಅತ್ತಿಗೆಯ ಮಾತು ಮಾತ್ರ ಅವಳೆದೆಯನ್ನು ಇರಿದಿತ್ತು. ತನ್ನನ್ನು ಸೂಳೆಯೆಂದು ಹೇಳಿದರಲ್ಲ. ಅದನ್ನು ಗಂಡನ ಕಿವಿಯಲ್ಲಿ ಹಾಕುವ ವರೆಗೆ ಅವಳಿಗೆ ನೆಮ್ಮದಿಯಿಲ್ಲ.

ಅಂದಿನ ದಿನ ಕಳೆಯಿತು. ರಾಮರಾಯರು ಮನೆಯಲ್ಲಿದ್ದಿಲ್ಲ; ಅದನ್ನು ಹೇಳುವ ಅಗತ್ಯವೂ ಇಲ್ಲ. ಅವರು ಮನೆಯಲ್ಲಿರುವುದೇ ಕಡಿಮೆ.

ರಾತ್ರೆಯಾಯಿತು; ಆ ದಿನವಿಡೀ ರೋಹಿಣಿ ಶಾಂತಿಯೊಡನೆ ಮಾತನಾಡಲಿಲ್ಲ. ರಾತ್ರೆ ಗಂಡನೆದುರು ಕಣ್ಣೀರು ಹಾಕಿದಳು; ಇನ್ನು ಬೇರೆ ಬಿಡಾರ ಮಾಡದಿದ್ದರೆ ತಾನು ಪ್ರಾಣ ತೆಗೆದುಕೊಳ್ಳುವೆನೆಂದು ಗಂಡನನ್ನು ಹೆದರಿಸಿದಳು. ಗೋಪು ತರುಣ; ಹೆಂಡತಿಯನ್ನು ಮೆಚ್ಚಿದ್ದ; ಅವಳು ಅವನಿಗೆ ಬೇಕಾಗಿದ್ದಳು. ಅವಳನ್ನು ನೋಯಿಸುವುದಕ್ಕೆ ಅವನು ಸಿದ್ಧನಿರಲಿಲ್ಲ. ಅವಳಿಗಾಗಿ ಯಾರೊಡನೆಯೂ ನಿಷ್ಠುರ ಕಟ್ಟಿಕೊಳ್ಳಲು ಅವನು ಸಿದ್ಧವಾಗಿಯೇ ಇದ್ದ. ಆದರೆ ಅಕ್ಕನೆದುರು ಕೆಟ್ಟ ಮಾತನಾಡುವುದು ಅವನಿಂದ ಸಾಧ್ಯವಿರಲಿಲ್ಲ. ಅಣ್ಣನೊಡನಾದರೂ ಹೇಳಿ ಬೇರೆ ಬಿಡಾರದ ವ್ಯವಸ್ಥೆ ಮಾಡುವೆನೆಂದು ಹೆಂಡತಿಗೆ ಸಮಾಧಾನ ಹೇಳಿದ. ಆದರೆ ಹೇಳಿದಷ್ಟು ಸುಲಭದ ಕೆಲಸವಾಗಿರಲಿಲ್ಲ ಅದು.

ಮರುದಿನದಿಂದ ರೋಹಿಣಿಯಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಯಾಯಿತು. ಬೆಳಿಗ್ಗೆ ಎದ್ದು ಮೆಲ್ಲನೆ ಅಡುಗೆ ಮನೆಯ ಕಡೆಗೆ ಬಂದಳು. "ನಾನೇನು ಮಾಡಬೇಕು ಹೇಳಿ, ಅತ್ತಿಗೆ." ದನಿಯಲ್ಲಿ ನಯವಿರಲಿಲ್ಲ.

"ನೀನು ಏನೂ ಮಾಡುವುದು ಬೇಡಮ್ಮ. ನಾನಿನ್ನೂ ಗಟ್ಟಿಮುಟ್ಟಾಗಿಯೇ ಇದ್ದೇನೆ. ನಿನ್ನ ಮೇಲಿನ ಹೊಟ್ಟೆಕಿಚ್ಚಿನಿಂದ ಹಾಗೆ ಹೇಳಿದೆನೆಂದು ಮಾಡಿದೆಯಾ? ಆದರೆ ಗೃಹಿಣಿಯಾದವಳು ಎಲ್ಲವನ್ನೂ ಕಲಿತುಕೊಳ್ಳಬೇಡವೇ? ನಾನು ಸತ್ತರೆ ಮನೆಯನ್ನು ನೋಡಿಕೊಳ್ಳುವವರಾರು?"

ಅವಳ ಮಾತು ರೋಹಿಣಿಗೆ ಚೆನ್ನಾಗಿ ನಾಟಿತು. ಆದರೂ ತಲೆತಗ್ಗಿಸಿ

ಕೊಂಡು ಸುಮ್ಮನಾದಳು. ಅವಳ ಅಹಂಕಾರವಿನ್ನೂ ಇಳಿದಿರಲಿಲ್ಲ. " ಹೇಗೂ ಬೇರೆ ಬಿಡಾರ ಮಾಡುವುದು ನಿಶ್ಚಯ. ಏನು ಬೇಕಾದರೂ ಆಡಿಕೊಳ್ಳಲಿ " ಎಂದುಕೊಂಡು ಸುಮ್ಮನಾದಳು.

" ನನಗೂ ಕಲಿಸಿಕೊಡಿ ಅತ್ತಿಗೆ, ನಾನೂ ಕೆಲಸ ಮಾಡುವೆ. "

ಶಾಂತಿ ಸಣ್ಣಪುಟ್ಟ ಕೆಲಸಗಳನ್ನೇ ಅವಳಿಂದ ಮಾಡಿಸಿದಳು. ಭಾರದ ಕೆಲಸ ಮಾಡಲು ನಿಂಗಿಯಂತೂ ಇದ್ದೇ ಇದ್ದಳು

ಒಂದೆರಡು ದಿನ ಕಳೆಯಿತು. ರೋಹಿಣಿ ಗಂಡನ ಬಳಿ ಹಟವನ್ನೇ ಹಿಡಿದಳು. " ಬೇರೆ ಬಿಡಾರ ಮಾಡದಿದ್ದರೆ ನಾನು ಅಪ್ಪನ ಮನೆಗೆ ಹೋಗುವೆ" ಎಂದು ಬೆದರಿಕೆ ಹಾಕಿದಳು ಗೋಪು ಇಷ್ಟು ಬೇಗನೆ ಅವಳನ್ನು ಕಳುಹಿಸಿ ಕೊಡುವುದಕ್ಕೆ ಸಿದ್ಧನಿರಲಿಲ್ಲ.

ಅಂದು ಎರಡು ದಿನ ಕಳೆದು ರಾಮರಾಯರು ಮನೆಗೆ ಬಂದರು. ತುಂಬಾ ಆಯಾಸಗೊಂಡ ಅವರು ಆಸ್ಪತ್ರೆಯ ಕುರ್ಚಿಯ ಮೇಲೆ ಕುಳಿತರು. ಗೋಪು ಅವರ ಮುಖ ನೋಡಲಿಲ್ಲ. ಅವನಿಗೆ ಬೇರೆ ಬಿಡಾರದ ಇತ್ಯರ್ಥ ವಾಗಬೇಕಿತ್ತು; ಕೇಳಿಯೇ ಬಿಟ್ಟ.

" ಅಣ್ಣಾ, ನನಗೆ ಬೇರೆ ಬಿಡಾರವಾಗಬೇಕು "

ಅವರು ಆಶ್ಚರ್ಯದಿಂದ ತಲೆಯೆತ್ತಿದರು. " ಯಾಕೆ ಇಲ್ಲೇನು ತೊಂದರೆ ? "

" ಅವಳಿಗೆ ಇಲ್ಲಿರುವುದಕ್ಕೆ ಇಷ್ಟವಿಲ್ಲ. ದಿನವಿಡೀ ಜಗಳಾಡುವುದಕ್ಕಿಂತ ಬೇರೆಯಾಗಿರುವುದು ಒಳ್ಳೆಯದು. " ಯಾವ ತಡೆಯೂ ಇಲ್ಲದೆ ಗೋಪು ಸ್ಪಷ್ಟ ವಾಗಿ ಮಾತನಾಡುತ್ತಿದ್ದ.

ರಾಮರಾಯರು ತಮ್ಮನ ಮುಖ ನೋಡಿದರು. ಇದೇ ತಮ್ಮನನ್ನು ಚಿಕ್ಕಂದಿನಿಂದ ಎತ್ತಿ ಆಡಿಸಿ, ಇದ್ದ ಸ್ನೇಹವನ್ನೆಲ್ಲಾ ಧಾರೆಯೆರೆದು ಬೆಳೆಸಿದ್ದರು. ಅವನಿಗಾಗಿ ಎಂಥಾ ತ್ಯಾಗವನ್ನು ಬೇಕಾದರೂ ಮಾಡಲು ಸಿದ್ಧವಾಗಿದ್ದರು. ಆದರೆ ಅದೇ ತಮ್ಮನ ಬಾಯಿಂದ ಇಂತಹ ಮಾತುಗಳನ್ನು ಕೇಳಿ ಅವರ ಹೃದಯ ನೊಂದಿತು. ತುಂಬಾ ದುಃಖವಾಯಿತು. ಆದರೆ ಅದನ್ನು ತೋರಿಸಿಕೊಳ್ಳಲಿಲ್ಲ.

" ಶಾಂತಿ ರೋಹಿಣಿಯೊಡನೆ ಜಗಳಾಡುತ್ತಿರುವಳೇ ಗೋಪು ? ಯಾರಾ ದರೂ ನಂಬುವ ಮಾತೇ ಇದು ? ಮನಃಪೂರ್ವಕವಾಗಿ ಇದನ್ನು ಆಡು

ತ್ತಿರುವೆಯಾ ? "

"ದಿನವೂ ಅವಳ ರಗಳೆ ಕೇಳಿಕೊಂಡಿರುವುದು ನನ್ನಿಂದ ಸಾಧ್ಯವಿಲ್ಲ ಅಣ್ಣ. ನಾನು ಬೇರೆ ಬಿಡಾರ ಮಾಡುವುದೇ ಖಂಡಿತ." ಅವರ ಬಾಯಿ ಕಟ್ಟಿಹೋಯಿತು ; ಇದಕ್ಕುತ್ತರ ಕೊಡುವ ಸಾಮರ್ಥ್ಯ ಅವರಲ್ಲಿರಲಿಲ್ಲ. ಮಾತ ನಾಡದೆ ಎದ್ದು ಒಳಗೆ ನಡೆದರು.

" ಶಾಂತೂ.... "

ಅಣ್ಣನ ಕರೆ ಕೇಳಿ ಶಾಂತಿ ಓಡಿ ಬಂದಳು.

" ಕೇಳಿದೆಯಾ ಶಾಂತೂ.... "

ಅವರಿಂದ ಮುಂದೆ ಮಾತನಾಡಲಾಗಲಿಲ್ಲ ; ಗಂಟಲು ಕಟ್ಟಿತು. ಶಾಂತಿ ಅಣ್ಣನ ಸಮೀಪಕ್ಕೆ ಬಂದಳು ; ಅವರ ಮಾತಿನ ಅರ್ಥ ಅವಳಿಗಾಗಿರಲಿಲ್ಲ.

" ಏನಾಯಿತಣ್ಣ ? "

" ಗೋಪು ಬೇರೆ ಬಿಡಾರ ಮಾಡುವನಂತೆ. "

ಶಾಂತಿಗೆ ತಲೆಯ ಮೇಲೆ ಬಡಿದಂತಾಯಿತು. "ಯಾರು ಹೇಳಿದರಣ್ಣ ?"

" ಮತ್ತ್ಯಾರು, ನಿನ್ನ ಮುದ್ದಿನ ತಮ್ಮ. " ತೀರಾ ನಿರಾಶರಾಗಿ ನುಡಿದ ರವರು.

ಶಾಂತಿ ಮೂಕಳಂತೆ ಒಂದು ಕ್ಷಣ ನಿಂತಳು. ಏನು ಹೇಳಬೇಕೋ ಅವಳಿಗೆ ತಿಳಿಯದಾಯಿತು ; ತಮ್ಮ ಮತ್ತು ತಮ್ಮನ ಹೆಂಡತಿ ಹಾಗೆ ಹೊರಟು ಹೋಗುವುದು ಅವಳಿಗೆ ಬೇಕಾಗಿರಲಿಲ್ಲ.

" ರೋಹೀ, ಇಲ್ಲಿ ಬಾರೇ." ರೋಹಿಣಿ ಯಾವ ಸಂಕೋಚವೂ ಇಲ್ಲದೆ ದಿಟ್ಟಳಂತೆ ಬಂದು ನಿಂತಳು.

" ಕೇಳಿದೆಯಾ ರೋಹಿಣಿ ? "

" ಏನು ? "

"ನಿನ್ನ ಗಂಡ ಬೇರೆ ಬಿಡಾರ ಹೂಡುವನಂತೆ, ನಿನಗೊಪ್ಪಿಗೆಯೇ ಇದು ?"

ಅವಳು ಯಾವ ಸಂಕೋಚವೂ ಇಲ್ಲದೆ ಹೌದೆಂದು ತಲೆಯಲ್ಲಾಡಿಸಿ ದಳು. ಶಾಂತಿ ಒಮ್ಮೆಲೆ ಗಂಭೀರಳಾದಳು.

"ಆಗಲಿ ಅಣ್ಣ, ಅವನಿಚ್ಛೆಯಿದ್ದಂತೆ ಮಾಡಲಿ. ಹೇಗೂ ನಾವು ಮೊದ ಲಿದ್ದ ಮನೆ ಖಾಲಿ ಬಿದ್ದಿದೆ ; ಸದ್ಯಕ್ಕೆ ಅಲ್ಲಿಯೇ ಇರಲಿ. ಆಮೇಲೆ ಹೊಸ

ಮನೆ ಕಟ್ಟಿಸಿದರಾಯಿತು.

ಅದೇ ವೇಳೆಗೆ ಪುಟ್ಟ ಮಗು ಶಾರದಾ "ಅಮ್ಮ ಅಮ್ಮ" ಎಂದು ತೊದಲುತ್ತ ಅಲ್ಲಿಗೆ ಬಂದಳು; ಎಲ್ಲರ ಗಮನವೂ ಮಗುವಿನ ಕಡೆಗೆ ಹರಿಯಿತು. ಅವಳಿಗೆ ಆಗಲೇ ಒಂದು ವರುಷ ಕಳೆದಿತ್ತು. ತಪ್ಪು ತಪ್ಪು ಹೆಜ್ಜೆಗಳನ್ನಿಟ್ಟು ನಡೆಯುತ್ತಿದ್ದಳು; ತುಂಬಾ ಮುದ್ದಾಗಿ ಬೆಳೆದಿದ್ದಳು. ಶಾಂತಿ ಸ್ನೇಹದಿಂದ ಮಗುವನ್ನೆತ್ತಿ ಅಪ್ಪಿಕೊಂಡಳು.

"ಎಲ್ಲಿ ಹೋಗಿದ್ದೆ ಚಿನ್ನಾ?" ಮಗುವನ್ನು ಎದೆಗಪ್ಪಿಕೊಂಡು ಒಂದು ಕ್ಷಣ ಎಲ್ಲವನ್ನೂ ಮರೆತಳು.

"ನಮ್ಮ ಶಾರಿಗೆ ಒಳ್ಳೇ ಬಿ.ಎ. ಕಲಿತ ಗಂಡನನ್ನೇ ಹುಡುಕಬೇಕಣ್ಣ."

"ಅದಕ್ಕಿನ್ನೂ ತುಂಬಾ ಸಮಯವಿದೆ ಶಾಂತೂ; ಸದ್ಯದ ವಿಚಾರ ಯೋಚಿಸು."

"ಯೋಚಿಸುವುದೇನಣ್ಣ, ಅವನಿಷ್ಟವಿದ್ದಂತೆ ಮಾಡಲಿ." ಹೇಗಾದರೂ ಸುಖವಾಗಿದ್ದರೆ ಸರಿ; ನಮ್ಮ ಕಾಲವಾದ ಮೇಲೆ ಇದೆಲ್ಲ ಯಾರಿಗೆ?"

ಮತ್ತೆ ವಿಳಂಬವಿಲ್ಲದೆ ಹೊಸ ಬಿಡಾರದ ಏರ್ಪಾಡಾಯಿತು. ಶಾಂತಿ ತಾನೇ ಹೋಗಿ ಎಲ್ಲ ವ್ಯವಸ್ಥೆಯನ್ನೂ ಮಾಡಿಕೊಟ್ಟಳು.

"ಯಾವಾಗಲೂ ಬರುತ್ತಿರು ರೋಹಿ; ಆ ಮನೆ ಈ ಮನೆ ಎಲ್ಲವೂ ನಿನ್ನದು." ಎನ್ನುವಾಗ ಅಳದಿರಲು ಅವಳಿಂದಾಗಲಿಲ್ಲ. ಆದರೂ ಸಹಿಸಿಕೊಂಡಳು. ಆಕ್ಕನ ಒತ್ತಾಯಕ್ಕೆ ಗೋಪು ಮಧ್ಯಾಹ್ನದ ಊಟವನ್ನು ಅಲ್ಲಿಯೇ ಮಾಡಬೇಕಾಯಿತು ಶಾಂತಿ ಬೆಳಗ್ಗೆ ಸಂಜೆ ಎರಡೂ ವೇಳೆಗೆ ಹೋಗಿ ಎಲ್ಲ ಕೆಲಸ ಮಾಡಿಕೊಟ್ಟು ಬರುತ್ತಿದ್ದಳು. ಅದನ್ನು ಕಂಡಾಗಲೆಲ್ಲ ರೋಹಿಣಿಗೆ ನಾಚಿಕೆಯಾಗದಿರುತ್ತಿರಲಿಲ್ಲ.

## ೨೪

ಒಂದು ವರುಷ ಹೀಗೆಯೇ ಕಳೆಯಿತು; ರೋಹಿಣಿ ಗರ್ಭಿಣಿಯಾದಳು. ಮೊದಲ ಹೆರಿಗೆ. ತಂದೆ ಬಂದು ಮಗಳನ್ನು ಕರೆದೊಯ್ದರು. ಅವಳು ಹೋದೊಡನೆ ಬಿಡಾರವೂ ಬಂದಾಯಿತು.

ಗೋಪು ಮೊದಲಿನಂತೆಯೇ ಇರತೊಡಗಿದ. ಪುಟ್ಟ ಶಾರದೆಗೆ ಎರಡು ವರುಷಗಳಾಗಿದ್ದುವು. ಮನೆಯಲ್ಲಿ ಪುನಃ ವಿಪರೀತಕ್ಕಾರಂಭವಾಯಿತು. ಶಾಂತಿ ಒಂದೆರಡು ಬಾರಿ ಅವನನ್ನು ಎಚ್ಚರಿಸಿದಳು. ಆದರೆ ಗೋಪು ಅಕ್ಕನ ಮೇಲೆಯೇ ಉರಿದುಬಿದ್ದ. ಮತ್ತೆ ಅವಳು ಮಾತನಾಡಲಿಲ್ಲ; ತನ್ನಷ್ಟಕ್ಕೇ ತಾನು ಇದ್ದು ಬಿಟ್ಟಳು. ದಿನವಿಡೀ ಮನೆಕೆಲಸ; ಸಮಯ ದೊರೆತರೆ ಶಾರದೆಯೊಡನೆ ಆಟ ಮಾಡುವಳು.

ಸಮಯ ಕಳೆಯುತ್ತಲೇ ಇತ್ತು. ಆರು ತಿಂಗಳು ಕಳೆದು ಪುಟ್ಟ ಹೆಣ್ಣು ಕೂಸನ್ನು ಕರೆದುಕೊಂಡು ರೋಹಿಣಿ ಬಂದಳು; ಶಾಂತಿ ನಗುತ್ತಲೇ ಅವಳನ್ನು ಸ್ವಾಗತಿಸಿದಳು. ಜೊತೆಯಲ್ಲಿಯೇ ನಿಲ್ಲಿಸಿಕೊಂಡಳು. ಮಗುವಿನ ಆರೈಕೆಯನ್ನು ತಾನೇ ಮಾಡಿದಳು; ಆದರೆ ಹೆಚ್ಚು ದಿನ ಇದು ಸಾಗಲಿಲ್ಲ. ಮತ್ತೆ ಮೊದಲಿನಂತೆ ಬಿಡಾರ ಬೇರೆಯಾಯಿತು.

ಶಾಂತಿ ಹಿಂದುಮುಂದಿನ ವಿಚಾರ ಮಾಡದೆ ಮಗುವಿನ ಆರೈಕೆಗೆಂದು ನಿಂಗಿಯನ್ನು ಜೊತೆಗೆ ಕಳುಹಿಸಿಕೊಟ್ಟಳು. 'ಹೆಂಡತಿಯಾದವಳು ಗಂಡನನ್ನು ಬೇಕಾದಂತೆ ಇಟ್ಟುಕೊಳ್ಳಲಾರಳೇ?' ಎಂದು ತನ್ನಷ್ಟಕ್ಕೆ ತಾನು ಸಮಾಧಾನ ಮಾಡಿಕೊಂಡಳು.

ಮತ್ತೂ ಒಂದೆರಡು ವರುಷಗಳು ಕಳೆದುವು. ಪಂಜ ಊರಿನಲ್ಲಿ ಎಷ್ಟೋ ಮಹತ್ವಾದ ಸುಧಾರಣೆಗಳಾಗಿದ್ದುವು. ರಾಮರಾಯರು ರಸ್ತೆಯ ಪಕ್ಕದಲ್ಲಿ ಹೊಸ ಆಸ್ಪತ್ರೆಯನ್ನು ಕಟ್ಟಿಸಿದರು. ತಮ್ಮನಿಗಾಗಿ ಹೊಸ ಮನೆಯೊಂದನ್ನೂ ಕಟ್ಟಿಸಿದರು. ಅವರ ಪ್ರಯತ್ನದಿಂದಾಗಿ ಪಂಜದಲ್ಲಿ ಒಂದು ಹೈಸ್ಕೂಲು ಸ್ಥಾಪಿತವಾಯಿತು. ಇದಕ್ಕೆಲ್ಲ ಹಿಂದುಗಡೆಯಿಂದ ಬೆನ್ನೆಲುಬಿನಂತೆ ಬೆಂಬಲವಾಗಿ ನಿಂತವಳು ತಂಗಿ ಶಾಂತಿ.

ರೋಹಿಣಿ ಎರಡನೆಯ ಬಾರಿಗೆ ಗರ್ಭಿಣಿಯಾಗಲಿಲ್ಲ. ಮೊದಲನೆಯ ಬಾರಿ ಹೆರಿಗೆಯಾಗಿ ಗಂಡನ ಮನೆಗೆ ಬಂದು ಆರು ತಿಂಗಳು ಕಳೆಯುವುದರೊಳಗಾಗಿ ಅವಳು ಕಾಯಿಲೆ ಬಿದ್ದಳು. ಆಗಲೇ ಅವಳಿಗೆ ಅತ್ತಿಗೆಯ ಸರಿಯಾದ ಪರಿಚಯವಾದದ್ದು. ಎಂದೂ ಇಲ್ಲದ ಹೊಟ್ಟೆಶೂಲೆ ಪ್ರಾರಂಭವಾಯಿತು. ಶಾಂತಿ ಓಡಿದಳು. ಒಂದು ಕ್ಷಣವೂ ಅವಳನ್ನು ಬಿಟ್ಟು ಅಗಲಲಿಲ್ಲ. ಶಾರದೆಯನ್ನೂ ಅವಳ ಮನೆಗೆ ಕರೆದೊಯ್ದಳು. ಅಡುಗೆ ಕೆಲಸ

ವನ್ನೆಲ್ಲ ನಿಂಗಿಗೆ ವಹಿಸಿಕೊಟ್ಟು ಅವಳ ಆರೈಕೆ ಮಾಡತೊಡಗಿದಳು. ಕಾಯಿಲೆ ಒಂದು ಬಾರಿಗೆ ವಿಪರೀತಕ್ಕೆ ಹೋಯಿತು. ಶಾಂತಿ ಬೇಸರವಿಲ್ಲದೆ ಊಟ ನಿದ್ರೆ ಬಿಟ್ಟು ತಮ್ಮನ ಹೆಂಡತಿಯನ್ನು ನೋಡಿಕೊಂಡಳು. ತಾನು ಸತ್ತರೂ ಚಿಂತೆಯಿಲ್ಲ, ಅವಳು ನೆಮ್ಮದಿಯಾಗಿ ಎದ್ದರೆ ಸಾಕು ಎಂದು ಬಯಸಿತು ಅವಳ ಹೃದಯ.

ಶಾಂತಿಯ ಆರೈಕೆಯಿಂದ ರೋಹಿಣಿ ಕೊಂಚ ಗುಣಮುಖವಾದಳು. ನೋವು ಕಡಿಮೆಯಾಯಿತು. ಅದೊಂದು ದಿನ, ಶಾಂತಿ ದೇವರ ಕೋಣೆ ಯಲ್ಲಿದ್ದಳು. ರೋಹಿಣಿ ಮೆಲ್ಲನೆ ಎದ್ದು ಕುಳಿತಳು. ಕಳಿತಲ್ಲಿ ಅಸ್ಪಷ್ಟವಾದ ಮಾತುಗಳು ಕೇಳಿಸಿದುವು—ಶಾಂತಿಯ ದನಿ.

“ದೇವರೇ, ರೋಹಿಣಿಯ ಬದಲಿಗೆ ನನ್ನ ಪ್ರಾಣವನ್ನಾದರೂ ತೆಗೆ ದುಕೋ. ನಾನಿನ್ನು ಬದುಕಿ ಮಾಡಬೇಕಾದುದೇನೂ ಇಲ್ಲ. ನನ್ನನ್ನು ತೆಗೆದು ಕೊಂಡು ಅವಳನ್ನು ಬದುಕಿಸು.”

ರೋಹಿಣಿ ಸೋತಳು; ಹೃದಯ ಬಿರಿಯಿತು; ತುಂಬಾ ಅತ್ತಳು. ಅತ್ತಿಗೆಯ ಪಾದದ ಮೇಲೆ ಹಣೆಯಿರಿಸಿ ಕ್ಷಮೆ ಬೇಡುವ ಇಚ್ಛೆಯಾಯಿತು. ಶಾಂತಿ ಪ್ರಾರ್ಥನೆಯನ್ನು ಮುಗಿಸಿ ರೋಹಿಣಿಯ ಬಳಿಗೆ ಬಂದಳು. ಅವಳು ಅಳುತ್ತಿದ್ದುದು ಕಾಣಿಸಿತು.

“ಏನಾಯಿತೆ ರೋಹಿ, ಅಳುವುದೇಕೆ?” ಅವಳ ಪಕ್ಕದಲ್ಲಿ ಕೂತು ಅವ ಳನ್ನು ತಬ್ಬಿಕೊಂಡು ಕೇಳಿದಳು.

“ನಾನು ಪಾಪಿ ಅತ್ತಿಗೆ, ನಿಮ್ಮನ್ನು ನೋಯಿಸಿದೆ....” ಮುಂದೆ ಅವ ಳಿಂದ ಮಾತನಾಡಲಾಗಲಿಲ್ಲ. ತಲೆಯನ್ನು ಅವಳೆದೆಯ ಮೇಲೊರಗಿಸಿ ಅತ್ತಳು. ತಾಯಿಯ ಸ್ನೇಹದ ಪರಿಚಯ ಅವಳಿಗಿರಲಿಲ್ಲ. ಇಂದು ಮೊದಲ ಬಾರಿಗೆ ಅವಳಿಗದರ ಪರಿಚಯವಾಯಿತು. ಶಾಂತಿಗೂ ಅಳು ಬಾರದಿರಲಿಲ್ಲ.

“ಹುಚ್ಚು ಹುಡುಗಿ, ಮಗು ತಪ್ಪು ಮಾಡಿದರೆ ತಾಯಿ ಸಿಟ್ಟಾಗುವ ಳೇನಮ್ಮ? ಈ ನಮ್ಮ ಶಾರಿ, ತಪ್ಪು ಮಾಡಿದರೂ ನಾನು ಸಿಟ್ಟಾಗು ತ್ತೇನೆಯೆ? ನನ್ನ ಪಾಲಿಗೆ ನೀವಿಬ್ಬರೂ ಒಂದೇ” ಎಂದು ಸ್ನೇಹದಿಂದ ಅವಳ ಹಣೆಯನ್ನು ಮುದ್ದಿಸಿದಳು.

“ನನ್ನನ್ನು ಮನೆಗೆ ಕರೆದುಕೊಂಡು ಹೋಗುವಿರಾ ಅತ್ತಿಗೆ?”

" ಹುಚ್ಚಿ, ಅದನ್ನು ಕೇಳಬೇಕೆ ? ಮಗುವಿನಂತೆ ಎತ್ತಿಕೊಂಡೇ ಹೋಗುವೆ. ನಾನು ಆಗಲೇ ಹೇಳಬೇಕೆಂದಿದ್ದೆ ; ನಿನಗೆ ಬೇಸರವಾಗುವು ದೇನೋ ಎಂದು ಸುಮ್ಮನಿದ್ದೆ. ಆ ಮನೆ ಈ ಮನೆಯೆಂದಿದೆಯೆ ರೋಹಿ ? ಎಲ್ಲವೂ ನಿನ್ನದೇ. "

ರೋಹಿಣಿ ಅತ್ತಿಗೆಯ ಮಡಿಲಲ್ಲಿ ಮುಖವಿಟ್ಟುಕೊಂಡು ತುಂಬಾ ಅತ್ತಳು ; ಹೃದಯ ಹಗುರಾಗುವ ವರೆಗೆ ಅತ್ತಳು. ಅಷ್ಟು ಹೊತ್ತಿಗೆ ರೋಹಿ ಣಿಯ ಎರಡು ವರುಷದ ಮಗು ಗೌರಿ, ' ಅತ್ತೆ ಅತ್ತೆ ' ಎಂದು ಕೂಗುತ್ತಾ ಓಡಿ ಬಂದಳು. ಅವಳ ಹಿಂದೆ ಶಾರದೆ; ಇಬ್ಬರೂ ಕೈ ಕೈ ಹಿಡಿದುಕೊಂಡು ನಗುತ್ತ ಬರುತ್ತಿದ್ದರು.

" ಅತ್ತೆ, ಶಾರಿ ಸೋತಳು, ನಾನು ಗೆದ್ದೆ. " ಎಂದು ಅತ್ತೆಯ ಬಳಿಗೆ ಓಡಿ ಬಂದಳು ಗೌರಿ.

" ಜಾಣೆ ನನ್ನಮ್ಮ " ಎಂದು ಗೌರಿಯನ್ನು ಅಪ್ಪಿ ಮುದ್ದಿಟ್ಟಳು ಶಾಂತಿ. ಶಾರಿ ನಗುತ್ತ ನಿಂತಿದ್ದಳು. ಅವಳ ಕಣ್ಣು ಅಳುತ್ತಿದ್ದ ರೋಹಿಣಿಯ ಕಡೆಗೆ ಹೋಯಿತು.

" ಅಮ್ಮ, ಅತ್ತೆ ಅಳುವುದೇಕಮ್ಮ? ಮಾವ ಹೊಡೆದರೇ ? "

ರೋಹಿಣಿ ಕುಳಿತಲ್ಲಿಯೇ ಶಾರಿಯನ್ನು ಅಪ್ಪಿಕೊಂಡಳು.

ಶಾಂತಿ ಮಕ್ಕಳಿಬ್ಬರಿಗೂ ಕಾಫಿ ತಿಂಡಿ ಕೊಟ್ಟಳು. ಕಾಫಿ ಕುಡಿದು ಪುನಃ ಇಬ್ಬರೂ ಓಡಿ ಹೋದರು. ಕಣ್ಮರೆಯಾಗುವ ವರೆಗೆ ಶಾಂತಿ ಮಕ್ಕಳನ್ನೇ ನೋಡುತ್ತ ನಿಂತಳು. ಕೊನೆಗೊಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟಳು.

" ಅತ್ತಿಗೆ, ನನಗೆ ಗುಣವಾಗುತ್ತದೆಯೇ ? "

ಶಾಂತಿ ಕೈಯಿಂದ ಅವಳ ಬಾಯಿ ಮುಚ್ಚಿದಳು.

" ಹುಚ್ಚಿ, ಗುಣವಾಗಲು ಏನಾಗಿದೆ ನಿನಗೆ? ನಾನು ನನ್ನ ದೇವರೊಡನೆ ಬೇಡಿಕೊಂಡಿದ್ದೇನೆ ರೋಹಿ; ನಿನಗೆ ಗುಣವಾಗುವುದು."

ಶಾಂತಿಯ ಹೃದಯ ಸಂತಸದಿಂದ ಅರಳಿತ್ತು ; ಎಷ್ಟೋ ಸಮಯದಿಂದ ಅವಳು ಇಂಥಾ ಸಮಾಧಾನವನ್ನು ಅನುಭವಿಸಿರಲಿಲ್ಲ.

" ಅತ್ತಿಗೆ, ನನ್ನನ್ನು ಮನೆಗೆ ಎಂದು ಕರೆದುಕೊಂಡು ಹೋಗುವೆ ? "

“ ಈಗಲೇ ಹೋಗೋಣ ರೋಹಿ ; ಅದಕ್ಕೇನು, ಆದರೆ.... ”

“ ಆದರೆ ಏನು, ನಾನು ನಡೆಯಲಾರೆನೆಂದೇ ? ಇಲ್ಲ ಅತ್ತಿಗೆ, ನಿಮ್ಮ ನ್ನಾಧರಿಸಿಕೊಂಡು ನಡೆಯಬಲ್ಲೆ.” ಶಾಂತಿ ಮೆಲ್ಲನೆ ಅವಳ ಕಿವಿಯ ಬಳಿ ಮುಖವನ್ನೊಯ್ದು—

“ ರೋಹಿ, ನಾನು ನಿನ್ನ ಅತ್ತಿಗೆಯಲ್ಲ, ಅಕ್ಕ” ಎಂದಳು ಮೆಲ್ಲನೆ.

“ ಅಕ್ಕ, ನನ್ನ ಅಕ್ಕ ” ಎಂದು ಮತ್ತೆ ಮತ್ತೆ ಮನಸ್ಸಿನಲ್ಲಿಯೇ ಅಂದು ಕೊಂಡಳು ರೋಹಿಣಿ. ಎಷ್ಟೋ ದಿನಗಳಿಂದ ಮೋಡ ಕವಿದಂತಿದ್ದ ಅವಳ ಮೊಗ ಸಂತಸದಿಂದ ಅರಳಿತ್ತು.

“ ಹಾಗಾದರೆ ಹೋಗೋಣವೇ ರೋಹಿ ? ”

“ ನಡೆ ಅಕ್ಕ. ” ಅಕ್ಕನನ್ನು ಆಧರಿಸಿ ರೋಹಿಣಿ ಎದ್ದು ನಿಂತಳು. ಹೊಸ ಹುರುಪು ಬಂದಿತ್ತು ಅವಳಲ್ಲಿ.

## ೨೫

ಮನೆಗೆ ಬಂದ ಎಂಟು ಹತ್ತು ದಿನಗಳಲ್ಲಿಯೇ ರೋಹಿಣಿ ಎದ್ದು ಓಡಾಡುವಂತಾದಳು. ಔಷಧಿಗಿಂತಲೂ ಮನಸ್ಸಿನ ಉಲ್ಲಾಸವೇ ಅವಳ ಕಾಯಿಲೆಯನ್ನು ಗುಣಪಡಿಸಿತ್ತು. ಆದರೂ ದೇಹದಲ್ಲಿ ನಿಶ್ಶಕ್ತಿ ತುಂಬಾ ಇತ್ತು.

ತಾನೂ ಕೆಲಸ ಮಾಡುವೆನೆಂದು ಅಡುಗೆ ಮನೆಗೆ ಬಂದರೆ ಶಾಂತಿ ಗದರಿಸುತ್ತಿದ್ದಳು.

“ ಹೋಗೇ ಹೋಗು, ಇನ್ನೂ ಸರಿಯಾಗಿ ನಡೆಯುವುದಕ್ಕೂ ಆಗುವು ದಿಲ್ಲ, ಕೆಲಸ ಮಾಡುವಳಂತೆ.” ರೋಹಿಣಿ ಹೊರಗೆ ಬಂದು ಆಡುತ್ತಿದ್ದ ಶಾರಿ ಯನ್ನು ತಬ್ಬಿಕೊಳ್ಳುತ್ತಿದ್ದಳು.

“ ನೋಡೇ ಶಾರಿ, ನಿನ್ನ ಅಮ್ಮ ಕೆಟ್ಟವಳು, ನಾನು ಕೆಲಸ ಮಾಡ ಬಾರದಂತೆ. ”

“ ಮತ್ತೆ ನೀನು ಹೇಗೆ ಕೆಲಸ ಮಾಡುವುದು ಅತ್ತೆ ? ಇನ್ನೂ ಸರಿ

ಯಾಗಿ ನಡೆಯುವುದಕ್ಕೂ ಆಗುವುದಿಲ್ಲ; ಅಮ್ಮನಿಗೆ ಅಷ್ಟೂ ತಿಳಿಯುವು ದಿಲ್ಲವೇ ? "

" ತಾಯಿಯಂತೆ ಮಗು " ಎಂದು ನುಡಿಯುವುದು ಅವಳ ಹೃದಯ. ಶಾರಿ ಅತ್ತೆಯ ಕೈಯಿಂದ ಬಿಡಿಸಿಕೊಂಡು ಓಡುವಳು.

" ಅತ್ತೆ ನೋಡತ್ತೆ, ಯಾರು ಗೆದ್ದವರೆಂದು ಹೇಳು" ಎಂದು ಗೌರಿ ಯನ್ನು ಕರೆದುಕೊಂಡು ಓಡುವಳು.

" ಛೂ....ಗೌರಿ, ನನ್ನ ಮುಟ್ಟು.... "

ಗೌರಿ ಓಡುವಳು. ಅವಳೂ ತುಂಬಾ ಚುರುಕಿನ ಹುಡುಗಿ; ಶಾರಿಯ ಮೇಲೆ ಅವಳಿಗೆ ಪ್ರಾಣ. ಒಂದು ಗಳಿಗೆಯೂ ಒಬ್ಬರನ್ನೊಬ್ಬರು ಅಗಲುತ್ತಿರ ಲಿಲ್ಲ. ರೋಹಿಣಿ ನಗುತ್ತ ಮಕ್ಕಳ ಆಟವನ್ನು ನೋಡುತ್ತ ಕುಳಿತುಕೊಳ್ಳು ವಳು; ಅವಳ ಹೃದಯ ಆನಂದದಿಂದ ಅರಳುವುದು. ಮಕ್ಕಳಿಬ್ಬರೂ ಆಡಿ ದಣಿದು ಅತ್ತೆಯ ಬಳಿ ಓಡಿ ಬರುವರು. ಅವಳ ಮೈಮೇಲೆ ಹೊರಳಾಡುವರು.

" ಯಾರು ಗೆದ್ದರು ಹೇಳತ್ತೆ ? " ಎಂದು ಹಠ ಮಾಡುವಳು ಶಾರಿ.

" ನಾನೇ ಗೆದ್ದೆ ಅಮ್ಮ" ಎಂದು ಗೌರಿ ತಾಯಿಯ ಕೊರಳನ್ನು ತಬ್ಬಿ ಕೊಳ್ಳುವಳು.

ರೋಹಿಣಿ ಇಬ್ಬರಿಗೂ ಒಂದೊಂದು ಮುತ್ತು ಕೊಟ್ಟು, " ನೀವಿ ಬ್ಬರೂ ಗೆದ್ದವರು " ಎಂದು ನಗುವಳು. ಮತ್ತೆ ಮಕ್ಕಳಿಬ್ಬರೂ ಸಂತಸದಿಂದ ಕುಣಿದಾಡುವರು.

ಅಷ್ಟರಲ್ಲಿ ಶಾಂತಿ ಮಕ್ಕಳ ಗಲಾಟೆಗೆ ಹೊರಗೆ ಬಂದು ಅವರನ್ನು ಗದರಿಸು ವಳು. " ಏನೇ ಅದು, ಶಾರಿ-ಗೌರಿ, ಇಬ್ಬರೂ ಇಲ್ಲಿ ಬನ್ನಿ. ಅವಳಿಗೆ ಸೌಖ್ಯವಿಲ್ಲ. ಅಷ್ಟೂ ತಿಳಿಯುವುದಿಲ್ಲವೇ ನಿಮಗೆ ? ಅವಳನ್ನು ಕೊಂದೇ ಹಾಕುವಿರೇನು ? " ಮಕ್ಕಳಿಬ್ಬರೂ ಅಪರಾಧಿಗಳಂತೆ ತಲೆತಗ್ಗಿಸುವರು.

ಮತ್ತೆ ರೋಹಿಣಿ ಬಂದು ಅವರನ್ನು ಕರೆದುಕೊಳ್ಳುವಳು.

" ಹಾಗೆಲ್ಲ ಸಾಯುವವಳಲ್ಲ ಅಕ್ಕ, ನಾನು. "

ಅಷ್ಟರಲ್ಲಿ ಕತ್ತಲಾಗುವುದು. ಶಾಂತಿ ಮಕ್ಕಳ ಮೈತೊಳೆಸಿ, ಅರ್ಧಗಂಟೆ ದೇವರ ಕೀರ್ತನೆ ಕಲಿಸುವಳು. ಆಮೇಲೆ ಇಬ್ಬರಿಗೂ ಉಣ್ಣಿಸಿ ಮಲಗಿಸುವಳು.

ಮತ್ತೆ ಗೋಪು ಊಟ ಮಾಡುವನು. ಅಣ್ಣ ಇದ್ದಾಗ ಇಬ್ಬರೂ

ಜೊತೆಯಲ್ಲಿ ಊಟ ಮಾಡುವರು. ಆಮೇಲೆ ರೋಹಿಣಿಯ ಊಟ. ರೋಹಿಣಿ ಹಟ ಮಾಡಿ ಶಾಂತಿಯನ್ನೂ ಊಟಕ್ಕೆಬ್ಬಿಸುತ್ತಿದ್ದಳು. ಇಬ್ಬರೂ ನಗುತ್ತ ಜೊತೆಯಾಗಿ ಊಟ ಮಾಡುವರು.

ರೋಹಿಣಿಯ ಕಾಯಿಲೆ ಹೇಳ ಹೆಸರಿಲ್ಲದೆ ಮಾಯವಾಯಿತು. ಮತ್ತೆ ಒಂದೆರಡು ತಿಂಗಳಲ್ಲಿ ಮೈ ಕೈ ತುಂಬಿಕೊಂಡು ಮುದ್ದಾಗಿ ಬೆಳೆದಳು; ಆದರೂ ಶಾಂತಿ ಅವಳನ್ನು ಅಡುಗೆ ಮಾಡಲು ಬಿಡುತ್ತಿರಲಿಲ್ಲ. ರೋಹಿಣಿ ಹಟಮಾಡಿ ಏನಾದರೂ ಕೆಲಸ ಮಾಡುತ್ತಿದ್ದಳು.

ರೋಹಿಣಿ ಮೈ ತುಂಬಿಕೊಂಡುದನ್ನು ಕಂಡು ಶಾಂತಿಗೆ ತುಂಬಾ ಸಂತಸವಾಗಿತ್ತು.

" ನನ್ನ ತಂಗಿ ಹೀಗೆಯೇ ಮೈ ತುಂಬಿಕೊಂಡು ಸಂತೋಷವಾಗಿರುವಂತಾಗಲಿ ದೇವರೇ " ಎಂದು ದಿನವೂ ದೇವರಲ್ಲಿ ಮೊರೆಯಿಡುತ್ತಿದ್ದಳು; ಮನೆಯಲ್ಲಿ ನೆಮ್ಮದಿ ನೆಲಸಿತ್ತು.

## ೨೬

ರಾಮರಾಯರು ಮಾತ್ರ ದಿನಕಳೆದಂತೆ ಕ್ಷೀಣವಾಗುತ್ತಲಿದ್ದರು; ಈಗಂತೂ ಅವರ ದುಡಿಮೆಗೆ ವಿಶ್ರಾಂತಿಯೆಂಬುವೇ ಇರಲಿಲ್ಲ. ವಾರದಲ್ಲಿ ಒಂದೆರಡು ದಿನವೂ ಅವರು ಮನೆಯಲ್ಲಿರುತ್ತಿರಲಿಲ್ಲ. ರಾತ್ರೆ ಹಗಲೆನ್ನದೆ ಒಂದೇ ಸವನೆ ದುಡಿಯುತ್ತಿದ್ದರು; ಊಟ ನಿದ್ರೆಗಳ ಪರಿವೆಯೂ ಅವರಿಗಿದ್ದಂತಿರಲಿಲ್ಲ. ದಿನದಿನಕ್ಕೆ ಕ್ಷಯಿಸುತ್ತಿರುವ ಅಣ್ಣನನ್ನು ಕಂಡು ಶಾಂತಿ ಒಂದೆರಡು ಬಾರಿ ಎಚ್ಚರಿಸಿದಳು. " ದೇವರ ಸೇವೆ ಮಾಡುವಾಗ ಯಾರಾದರೂ ಅಡ್ಡಿ ಮಾಡುತ್ತಾರೆಯೇ ಶಾಂತೂ? " ಎಂದು ತಂಗಿಯ ಬಾಯಿ ಮುಚ್ಚಿಸುತ್ತಿದ್ದರು.

ಗೋಪು ಈಗ ಆಸ್ಪತ್ರೆಯ ಜವಾಬ್ದಾರಿಯನ್ನು ಹೊರುವಷ್ಟು ಸಮರ್ಥನಾಗಿದ್ದ. ಆದರೆ ಅಣ್ಣನ ಈ ದುಡಿಮೆ ಅವನಿಗೆ ಮೆಚ್ಚುಗೆಯಾಗಿರಲಿಲ್ಲ.

" ಅಕ್ಕ, ನೀನಾದರೂ ಹೇಳಬಾರದೇ ? " ಎಂದು ಅಕ್ಕನನ್ನು ಒತ್ತಾಯಿಸುತ್ತಿದ್ದ.

“ ಯಾರ ಹೇಳಿಕೆಯೂ ಅವರನ್ನು ತಡೆಯಲಾರದು ಗೋಪು, ನೀನು ಸುಮ್ಮನಿರು. ” ಅವಳೆನ್ನುತ್ತಿದ್ದಳು.

ಅದೊಂದು ದಿನ ರಾಮರಾಯರು ನಾಲ್ಕು ದಿನಗಳ ತಿರುಗಾಟ ವನ್ನು ಮುಗಿಸಿಕೊಂಡು ಮನೆಗೆ ಬಂದಿದ್ದರು ; ತುಂಬಾ ದಣಿದಿದ್ದರು ; ಪೂರಾ ಕತ್ತಲಾಗಿತ್ತು.

ಶಾಂತಿ ಎದ್ದು ಅಣ್ಣನಿಗೆ ಬಡಿಸಿದಳು. ಆಯಾಸಗೊಂಡ ಅವರು ಉಂಡು ಮಲಗಿದರು ; ಸುಮಾರು ಮಧ್ಯರಾತ್ರಿಯ ಸಮಯಕ್ಕೆ ಯಾರೋ ಕೂಗಿ ದಂತಾಯಿತು.

“ ಕಂಪೌಂಡರರೇ ಕಂಪೌಂಡರರೇ.... ”

ಗೋಪು ಬಾಗಿಲು ತೆರೆದು ಹೊರಗೆ ಬಂದ. ಕುಡಿಯರ ಮುದುಕ ನೊಬ್ಬ ಚಳಿಗೆ ನಡುಗುತ್ತ ನಿಂತಿದ್ದ.

“ ಏನೋ, ಏನಾಗಬೇಕು ನಿನಗೆ ? ”

“ ಕಂಪೌಂಡರು ಬುದ್ದಿ, ನಮ್ಮ ಸೋಮ್ಯಾ ಸಾಯಾಕ್ ಬಿದ್ದವ್ನೆ ” ಎಂದು ಎರಡೂ ಕೈಗಳಿಂದ ಅವನ ಕಾಲು ಹಿಡಿದು ಗೋಳೋ ಎಂದು ಅಳತೊಡಗಿದನು.

“ ಹೋಗೋ ಬೆಳಿಗ್ಗೆ ಬಾ, ಅವರಿಲ್ಲ, ಹೊರಗೆ ಹೋಗಿದ್ದಾರೆ. ”

ಇವರ ಗಲಾಟೆಗೆ ರಾಮರಾಯರು ಎದ್ದು ಹೊರಗೆ ಬಂದರು ; ಅವ ರನ್ನು ಕಂಡೊಡನೆ ಮುದುಕ ಅವರ ಕಾಲಿಗೆ ಬಿದ್ದು ಗೋಳೋ ಎಂದು ಅಳ ತೊಡಗಿದ.

“ ನೀನು ಸುಮ್ಮನೆ ಹೋಗಿ ಮಲಗಿಕೋ ಅಣ್ಣ; ಇವಕ್ಕೆ ಸಮಯ ನಿಯಮಗಳೊಂದೂ ಇಲ್ಲ. ”

ಅವರು ಮುದುಕನನ್ನೊಮ್ಮೆ ನೋಡಿದರು.

“ ದೇವರ ಸೇವೆ ಮಾಡಲು ಹೋಗುವಾಗ ಹಾಗನ್ನಬಾರದು ಗೋಪು ” ಎಂದರು.

“ ಸಾಕಣ್ಣ, ಹೀಗೆ ಜೀವದ ಹಂಗು ಇಲ್ಲದೆ ದುಡಿಯುವುದು ಯಾವ ದೇವರಿಗೆ ಇಷ್ಟವೋ ತಿಳಿಯದು. ”

“ ನಿನಗೆ ತಿಳಿಯದು ಗೋಪು ; ನಾನು ಮಾಡುತ್ತಿರುವುದು ಮನುಷ್ಯರ

ಸೇವೆಯೆಂದು ಮಾಡಿರುವೆಯಾ? ಬಡ ನಿರ್ಗತಿಕ ರೋಗಿಗಳೇ ನನ್ನ ದೇವರು. ಅವರ ವಿಶ್ವಾಸ ನೋಡು ; ಎಷ್ಟು ಹೊತ್ತಿಗೆ ಕರೆದರೂ ಬರುವೆನೆಂಬ ವಿಶ್ವಾಸ ದಿಂದ ಬರುತ್ತಾರೆ. ಅವರ ವಿಶ್ವಾಸ ದೊಡ್ಡದು; ನನ್ನ ಕೆಲಸ ದೊಡ್ಡದಲ್ಲ."

ಗೋಪುವಿಗೆ ಇದಕ್ಕುತ್ತರ ಕೊಡುವುದು ಸಾಧ್ಯವಿರಲಿಲ್ಲ ; ಅವನು ಮುಖ ತಿರುಗಿಸಿಕೊಂಡು ಒಳಕ್ಕೆ ನಡೆದ.

" ಗೋಪು ಆ ಕೈಚೀಲ ತಾ."

ಅವನು ನಿಂತಲ್ಲಿಂದ ಅಲುಗಾಡಲಿಲ್ಲ ; ರೋಹಿಣಿ ಎದ್ದು ಚೀಲವನ್ನು ಹಿಡಿದುಕೊಂಡು ಹೊರಗೆ ಬಂದಳು.

" ನಿನಗೂ ಎಚ್ಚರವಾಯಿತೇ ಅಮ್ಮ ; ಅಂತೂ ನನ್ನಿಂದ ಯಾರಿಗೂ ಸುಖವಿಲ್ಲ."

ಅವಳು ಮಾತನಾಡಲಿಲ್ಲ; ಅವಳಿಗೆ ಅಳು ಬಂದುಬಿಟ್ಟಿತ್ತು. ಅದನ್ನು ತೋರಿಸಿಕೊಳ್ಳಲು ಅವಳು ಇಷ್ಟಪಡಲಿಲ್ಲ. " ಅಳುವುದೇಕೆ ? " ಎಂದು ಗೋಪು ಕೇಳದಿರಲಿಲ್ಲ. ರೋಹಿಣಿ ತೀಕ್ಷ್ಣವಾಗಿ ಗಂಡನನ್ನೊಮ್ಮೆ ನೋಡಿ, ಹೊದ್ದುಕೊಂಡು ಮಲಗಿಬಿಟ್ಟಳು ; ಹೆಂಡತಿಯ ನೋಟಕ್ಕೆ ಗೋಪು ತತ್ತರಿಸಿ ಹೋದ. ಆ ಪುಣ್ಯಾತ್ಮರ ತಮ್ಮನಾಗುವ ಯೋಗ್ಯತೆ ನಿಮ್ಮಲ್ಲಿಲ್ಲ ಎನ್ನು ವಂತಿತ್ತು ಆ ನೋಟ.

ಶಾಂತಿ ಮಲಗಿದಲ್ಲಿಯೇ ಎಲ್ಲವನ್ನೂ ಕೇಳಿದಳು. ಎದ್ದು ಹೊರಗೆ ಬರಲೂ ಇಲ್ಲ; ಕಣ್ಣೀರು ಸುರಿಸಲೂ ಇಲ್ಲ. ಅಣ್ಣನ ಜೊತೆಯಲ್ಲಿ ತಾನೂ ಹೊರಡುವ ಸಿದ್ಧತೆ ಮಾಡಿಕೊಂಡೇ ಇದ್ದಳು. ಅವಳ ದೇಹ ಪ್ರಕೃತಿಯೂ ಇತ್ತೀಚೆಗೆ ಸರಿಯಾಗಿರಲಿಲ್ಲ.

ಆದರೂ ಸ್ವಲ್ಪವೂ ಲಕ್ಷವಿಲ್ಲದೆ ದುಡಿಯುತ್ತಿದ್ದಳು. ' ಅಣ್ಣನಂತೂ ಸಾಯುವ ನಿರ್ಧಾರ ಮಾಡಿಕೊಂಡವರಂತೆಯೇ ಇದ್ದಾರೆ; ಮತ್ತೆ ನಾನಾ ದರೂ ಏಕೆ ಬದುಕಬೇಕು ? ಮಗುವನ್ನು ರೋಹಿಣಿ ನೋಡಿಕೊಳ್ಳುವಳು.' ದಿನಕಳೆದಂತೆ ಶಾಂತಿ ಅಂತರ್ಮುಖಿಯಾಗುತ್ತಿದ್ದಳು. ಮೆಲ್ಲನೆ ಒಂದೊಂದೇ ಮನೆಯ ಜವಾಬ್ದಾರಿಯನ್ನು ರೋಹಿಣಿಯ ತಲೆಯ ಮೇಲೆ ಹಾಕುತ್ತ ಬಂದಳು. ಆದರೆ ಅವಳಿಗೆ ಯಾವ ಸುಳಿವೂ ಹತ್ತಲಿಲ್ಲ. ' ಅಕ್ಕ ತನ್ನನ್ನು ಬಿಟ್ಟು ಹೊರಡುವ ಸಿದ್ಧತೆ ಮಾಡುತ್ತಿರುವರು' ಎಂಬುದನ್ನು ಊಹಿಸದಾದಳು

ಆ ಮುಗ್ಧೆ.

ಮತ್ತೂ ಕೆಲವು ದಿನಗಳು ಕಳೆದುವು, ರಾಮರಾಯರು ಸೊರಗಿ ಕಡ್ಡಿ ಯಂತಾದರು; ನಡೆಯುವ ಚೈತನ್ಯ ಕೂಡ ಅವರಲ್ಲಿ ಉಳಿಯಲಿಲ್ಲ. ಆದರೂ ಕರೆಯಲು ಯಾರಾದರೂ ಬಂದರೆಂದರೆ ಯಾವ ವಿಚಾರವೂ ಮಾಡದೆ ಹೊರಟು ಬಿಡುತ್ತಿದ್ದರು. ಶಾಂತಿ ಮೊದಲಿನಂತೆ ಅಣ್ಣನನ್ನು ಎಚ್ಚರಿಸುವ ಗೋಜಿಗೆ ಹೋಗುತ್ತಿರಲಿಲ್ಲ. ಬದಲು ಅಣ್ಣನ ಜೊತೆ ಹೊರಡುವ ಸಿದ್ಧತೆ ಮಾಡಿ ಕೊಳ್ಳತೊಡಗಿದಳು; ರೋಹಿಣಿ ದಿನವೂ ಸೊರಗಿ ಹೋಗುತ್ತಿರುವ ಅಕ್ಕನನ್ನು ಕಂಡು ಸುಮ್ಮನಿರಲಿಲ್ಲ.

"ಅಕ್ಕಾ, ನಿನ್ನನ್ನು ಕಂಡರೆ ಅಳು ಬರುತ್ತದೆ ಅಕ್ಕಾ. ಹೀಗೇಕೆ ಮಾಡುತ್ತಿರುವೆ ?"

"ಹೇಗೆ ಮಾಡುತ್ತಿರುವೆ ರೋಹಿ ?"

"ಏನಾದರೂ 'ಟಾನಿಕ್ಕು' ತೆಗೆದುಕೊಂಡು ಸ್ವಲ್ಪ ವಿಶ್ರಾಂತಿ ತೆಗೆದು ಕೊಳ್ಳಬಾರದೇ ಅಕ್ಕ. ಮತ್ತೆ ಕಾಯಿಲೆ ಬಿದ್ದರೆ ?"

"ಕಾಯಿಲೆ ಬಿದ್ದರೆ ನನಗೇನೂ ಭಯವಿಲ್ಲವಲ್ಲ; ಆರೈಕೆ ಮಾಡುವುದ ಕ್ಕಂತೂ ನೀನಿರುವೆಯಲ್ಲ."

ರೋಹಿಣಿ ಅಕ್ಕನನ್ನು ತಬ್ಬಿಕೊಂಡು ಅತ್ತಳು.

"ಹಾಗೇಕೆ ಹೇಳುವಿರಿ ಅಕ್ಕ? ಈ ತಂಗಿ ನಿಮಗೆ ಬೇಡವಾದಳೇ? ಇನ್ನು ನೀವೇನೂ ಕೆಲಸ ಮಾಡುವುದು ಬೇಡಕ್ಕ. ನಿಮ್ಮ ಆರೈಕೆಯನ್ನು ಮಾಡ ಬೇಕಾದರೆ ನೀವು ಕಾಯಿಲೆ ಬೀಳಬೇಕೆ?"

"ಸುಮ್ಮನೆ ತಮಾಷೆ ಮಾಡಿದೆ ತಂಗೀ, ಅದನ್ನಷ್ಟು ಮನಸ್ಸಿಗೆ ಹಚ್ಚಿ ಕೊಳ್ಳಬೇಕೆ?" ಎಂದು ತಂಗಿಯನ್ನು ಸಂತೈಸಿದಳು.

ಆದರೆ ಅಷ್ಟರಲ್ಲಿಯೇ ರೋಹಿಣಿ ಸುಮ್ಮನಾಗಲಿಲ್ಲ. ಆಸ್ಪತ್ರೆಯಿಂದ ಟಾನಿಕ್ಕು ತಂದು ಅಕ್ಕನಿಗೆ ಕುಡಿಸಿದಳು; ಮನೆಕೆಲಸದ ಭಾರವನ್ನೆಲ್ಲಾ ತಾನೇ ವಹಿಸಿಕೊಂಡಳು. ಅವಳ ವರ್ತನೆಯನ್ನು ಕಂಡು ಶಾಂತಿ ಮನಸ್ಸಿನಲ್ಲಿಯೇ ನಕ್ಕು ಸುಮ್ಮನಾದಳು; ಆದರೂ ಸುಮ್ಮನೆ ಕೂಡುವುದಕ್ಕೆ ಮನಸ್ಸು ಒಪ್ಪು ತ್ತಿರಲಿಲ್ಲ.

"ರೋಹಿ, ಇನ್ನೆಷ್ಟು ದಿನ ನನ್ನನ್ನು ಹೀಗೆ ಸೋಮಾರಿಯಾಗಲು

ಬಿಡುತ್ತೀಯಮ್ಮ? ನೀನಂತೂ ಮನೆಯ ಯಜಮಾನಿತಿ, ಒಂದಿಷ್ಟು ಕೆಲಸ ನನಗೂ ಹಂಚಿ ಕೊಡಬಾರದೇ? ಯಜಮಾನಿಯೇ ಎಲ್ಲಾ ಕೆಲಸ ಮಾಡಿದರೆ ನೋಡಿದವರು ಸುಮ್ಮನಿರುತ್ತಾರೆಯೇ ? "

" ಹೇಳುವವರು ಬರಲಿ ಅಕ್ಕಾ, ಆಗವರಿಗೆ ನಾನು ಸರಿಯಾದ ಉತ್ತರ ಕೊಡಬಲ್ಲೆ. "

" ಏನೆಂದು ಹೇಳುವೆ ? "

" ನಿಜವಾದ ಯಜಮಾನಿ ಯಾರು ಎಂದು ತೋರಿಸಿಕೊಡುವೆ " ಎಂದು ಅಕ್ಕನ ಕೊರಳನ್ನಪ್ಪಿಕೊಳ್ಳುವಳು ರೋಹಿಣಿ.

" ಚಿಕ್ಕವಳೆಂದು ಹೀಗೂ ಅನ್ನಬಹುದೇ ಅಕ್ಕ. ನನ್ನ ಅಪಮಾನ ಮಾಡುವುದಕ್ಕೆ ಬೇರೆ ಏನೂ ಸಿಗಲಿಲ್ಲವೇ ನಿಮಗೆ? "

ಶಾಂತಿ ಸೋಲನ್ನೊಪ್ಪಿಕೊಳ್ಳಲೇ ಬೇಕಾಗುವುದು. " ನಿನ್ನನ್ನು ಅಪ ಮಾನ ಮಾಡಲೆಂದು ಹೀಗನ್ನಲಿಲ್ಲಮ್ಮ. ನೀನೆಷ್ಟು ಹೇಳಿದರೂ ನಾನು ಮನೆಯ ಜವಾಬ್ದಾರಿಯನ್ನು ವಹಿಸಿಕೊಳ್ಳಲಾರೆ. "

" ನಾನೂ ಹಾಗೆಯೇ ಅಕ್ಕ. ನೀವು ಹೊರಟು ಹೋದರೆ ನಿಮ್ಮ ಹಿಂದೆಯೇ ಬಂದುಬಿಡುವೆ. "

" ಹುಚ್ಚು ಹುಡುಗಿ ! " ಎಂದುಕೊಂಡು ಶಾಂತಿ ಸುಮ್ಮನಾಗು ವಳು.

ರೋಹಿಣಿಯನ್ನು ಕಂಡಾಗಲೆಲ್ಲ ಅವಳ ಮನಸ್ಸು ಚಂಚಲವಾಗುವುದು. " ಇಂಥಾ ತಂಗಿಯನ್ನು ಬಿಟ್ಟು ಹೋಗಬೇಕಾಗುವುದಲ್ಲ ! " ಎಂದು ಮರುಗು ವಳು. ಒಂದು ವೇಳೆ ನಾನು ಹೊರಟು ಹೋದರೆ, ಇಲ್ಲವೆ ಸತ್ತೇ ಹೋದರೆ ಅವಳೇನು ಮಾಡಬಹುದು ? ತುಂಬಾ ನೊಂದುಕೊಳ್ಳುವಳು ; ಅತ್ತು ಅತ್ತು ಪ್ರಾಣ ಬಿಡುವಳು. ಅವಳೆದುರು ಸಾಯುವುದು ನನ್ನಿಂದಾಗದು. ಎಲ್ಲಿ ಗಾದರೂ ಹೊರಟು ಹೋದರೆ ಸರಿ. " ಎಂದು ತನ್ನ ಮನಸ್ಸನ್ನು ಸಮಾಧಾನ ಪಡಿಸಿಕೊಳ್ಳುವಳು.

೨೭

ರೋಹಿಣಿ ಎಷ್ಟು ವಿರಾಮ ಕೊಟ್ಟರೂ ಶಾಂತಿಯ ದೇಹಪ್ರಕೃತಿ ಸುಧಾರಿಸಲಿಲ್ಲ. ಇಪ್ಪತ್ತೇಳು ಇಪ್ಪತ್ತೆಂಟು ವರುಷಕ್ಕೇ ಮುದುಕಿಯಂತಾದಳು. ಹಣೆಯ ಮೇಲೆ ನೆರಿಗೆಗಳು ಮೂಡಿದ್ದುವು. ಅಲ್ಲಲ್ಲಿ ಒಂದೊಂದು ನರೆಕೂದಲು ಕಾಣಿಸಿಕೊಳ್ಳತೊಡಗಿತ್ತು. ಒಮ್ಮೊಮ್ಮೆ ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ಏನೋ ನೆನಪಾಗಿ ನಿಟ್ಟುಸಿರು ಬಿಡುವಳು.

"ನೋಡಿದಿರಾ ಸ್ವಾಮಿ, ನಿಮ್ಮ ಶಾಂತಿ ಮುದುಕಿಯಾದಳು. ಇನ್ನಾದರೂ ಕರೆಸಿಕೊಳ್ಳುವಿರಾ ?" ಎಂದು ತನ್ನಷ್ಟಕ್ಕೆ ಹುಚ್ಚಿಯಂತೆ ಮಾತನಾಡಿಕೊಂಡು ಅಳುವಳು. ಅವಳ ಮನಸ್ಸಿನ ಕಳೆದು ಹೋದ ನೆಮ್ಮದಿಯನ್ನು ಹಿಂತಿರುಗಿಸುವ ಸಾಮರ್ಥ್ಯ ಯಾರಿಗೂ ಇದ್ದಿಲ್ಲ.

ರಾಮರಾಯರ ದುಡಿಮೆ ಮುಗಿಯುವ ಕಾಲ ಬಂದಿತು. ದುಡಿದು ದಣಿದ ಅವರ ದೇಹ ಹಾಸಿಗೆ ಹಿಡಿಯಿತು. ಸೊರಗಿ ಕಡ್ಡಿಯಾಗಿದ್ದರು. ಮೈಮೇಲೆ ಜ್ವರ ಕಾಣಿಸಿತು. ಕೆಮ್ಮು ಪ್ರಾರಂಭವಾಯಿತು.

ಶಾಂತಿ ಅಣ್ಣನ ಅವಸ್ಥೆಯನ್ನು ಕಂಡು ನಿಟ್ಟುಸಿರ್ಗರೆದಳು. ಜಗತ್ತಿನ ಎಲ್ಲಾ ಸಂಬಂಧವನ್ನು ತೊರೆದು ಅಣ್ಣನ ಸೇವೆಗೆ ನಿಂತಳು. ರಾಮರಾಯರು ಮಲಗಿಕೊಂಡೇ ಇರಬೇಕಾಯಿತು. ತನ್ನ ದೇಹ ದಿನದಿನಕ್ಕೆ ಕ್ಷಯಿಸುತ್ತಿರುವುದನ್ನು ಅವರು ಕಂಡುಕೊಂಡಿದ್ದರು. ಆದರೆ ಅದಕ್ಕಾಗಿ ಅವರಿಗೆ ಸ್ವಲ್ಪವೂ ಬೇಸರವಿಲ್ಲ. ಮುಖದ ಮೇಲೆ ಶಾಂತಿಯ ಕಳೆ ಎದ್ದು ಕಾಣಿಸುತ್ತಿತ್ತು. ದಿನವಿಡೀ ಪಕ್ಕದಲ್ಲೇ ಇದ್ದು ತನ್ನ ಸೇವೆ ಮಾಡುತ್ತಿರುವ ತಂಗಿಯನ್ನು ಕಂಡಾಗ ಮಾತ್ರ ಹೃದಯ ಸುಡುತ್ತಿತ್ತು.

"ನಾನು ದುರ್ದೈವಿ ಶಾಂತೂ. ಈ ಅಣ್ಣನ ತಂಗಿಯಾಗಿ ಹುಟ್ಟಿದ್ದರಿಂದಲೇ ಬದುಕಿನಲ್ಲಿ ಒಂದು ದಿನವೂ ಸುಖ ಅನುಭವಿಸುವ ಭಾಗ್ಯ ನಿನಗೆ ದೊರೆಯಲಿಲ್ಲ."

ಅಣ್ಣನ ಮಾತು ಕೇಳಿ ಶಾಂತಿ ಅಳುತ್ತಿರಲಿಲ್ಲ, ಬದಲು ನಗುತ್ತಿದ್ದಳು. ಸಂತಸದ ನಗುವಲ್ಲ ಅದು, ನಿರಾಶೆಯ ನಗು.

"ಇನ್ನೂ ಈ ಹುಚ್ಚುಮಾತುಗಳನ್ನು ಆಡಬೇಕೆನಿಸುವುದೇ ಅಣ್ಣ

ನಿಮಗೆ ? ” ಎನ್ನುವಳು.

ಮಲಗಿದಲ್ಲಿಯೇ ಅಣ್ಣ ತಂಗಿಯ ಮುಖ ನೋಡುವರು. ಅವಳ ಕಣ್ಣುಗಳೇ ಅವರ ಪ್ರಶ್ನೆಗೆ ಬೇಕಾದ ಉತ್ತರ ಕೊಡುತ್ತಿದ್ದುವು. ಪ್ರತಿ ಕ್ಷಣವೂ ಸಮೀಪದಲ್ಲಿಯೇ ಇರುತ್ತಿದ್ದರೂ ಅಣ್ಣ-ತಂಗಿಯರು ಮಾತನಾಡುತ್ತಲೇ ಇರಲಿಲ್ಲ. ನಾಲಗೆ ಆಡುವುದಕ್ಕಿಂತ ಹೆಚ್ಚಾಗಿ ಅವರ ಹೃದಯಗಳೇ ಮಾತನಾಡುತ್ತಿದ್ದಿರಬೇಕು. ತಮ್ಮ ಬಾಳ ಪಯಣದ ಕೊನೆಯಂಕದಲ್ಲಿ ಕಾಲಿರಿಸಿದ ಅವರು ಮಾತನಾಡುವಂತಹ ವಿಷಯಗಳೊಂದೂ ಉಳಿದಿರಲಿಲ್ಲ.

ರಾಮರಾಯರ ಕಾಯಿಲೆ ಗುಣಮುಖವಾಗುವ ಲಕ್ಷಣಗಳೊಂದೂ ಕಾಣಿಸಲಿಲ್ಲ; ಸರಿಯಾಗಿ ಎದ್ದು ತಿರುಗಾಡುವುದಕ್ಕೂ ಆಗುತ್ತಿರಲಿಲ್ಲ. ಆಸ್ಪತ್ರೆಯ ಜವಾಬ್ದಾರಿಯೆಲ್ಲಾ ಗೋಪುವಿನ ತಲೆಯ ಮೇಲೆಯೇ.

ಅವನಿಗೆ ಅಣ್ಣನ ಮೇಲೆ ತುಂಬಾ ಸಿಟ್ಟು— ‘ ಬೇಕೆಂದೇ ಕಾಯಿಲೆ ಅಂಟಿಸಿಕೊಂಡು ಮಲಗಿದ್ದಾರೆ; ಆರೀತಿ ಜೀವದ ಹಂಗು ತೊರೆದು ದುಡಿಯದಿದ್ದರೆ ಏನು ಕೆಟ್ಟುಹೋಗುತ್ತಿತ್ತು ! ’ ಎಂದು. ಆದರೂ ಅವರು ಹಾಗೆ ನರಳುತ್ತಿರುವುದನ್ನು ಕಂಡು ಅವನಿಂದ ಸುಮ್ಮನಿರಲಾಗಲಿಲ್ಲ; ಮಂಗಳೂರಿನ ವರೆಗೆ ಹೋಗಿ, ಕಾಯಿಲೆಗೆ ಬೇಕಾದ ಔಷಧಿಗಳೆಲ್ಲವನ್ನೂ ತೆಗೆದುಕೊಂಡು ಬಂದ.

ಆದರೆ ಯಾವ ಔಷಧಿಯಿಂದಲೂ ಅವರಿಗೆ ಪ್ರಯೋಜನವಾಗುವಂತಿಲ್ಲವೆಂಬುದನ್ನು ತಿಳಿಯುವಷ್ಟು ಬುದ್ಧಿ ಗೋಪುವಿಗಿದ್ದಿಲ್ಲ; ಅದನ್ನು ತಿಳಿದವಳು ಶಾಂತಿ ಒಬ್ಬಳೇ. ಆದರೆ ಅವಳು ಬಾಯಿಬಿಟ್ಟು ಯಾವುದನ್ನೂ ಹೇಳುತ್ತಿರಲಿಲ್ಲ. ಅವನು ಮಂಗಳೂರಿನಿಂದ ತಂದ ಮದ್ದುಗಳೆಲ್ಲವನ್ನೂ ಅಣ್ಣನಿಗೆ ಕುಡಿಸುತ್ತಿದ್ದಳು; ತಂಗಿಯ ಸಮಾಧಾನಕ್ಕಾಗಿಯೇ ಅವರದನ್ನು ಕುಡಿಯುತ್ತಿದ್ದರು.

“ ನನ್ನನ್ನು ಬದುಕಿಸುವ ಪ್ರಯತ್ನವೇ ಶಾಂತೂ ? ” ಎಂದು ನಗುತ್ತಿದ್ದರು. ಶಾಂತಿಗೆ ಚೂರಿಯಿಂದ ಇರಿದಂತಾಗುತ್ತಿತ್ತು; ಆದರೆ ಮಾತನಾಡುತ್ತಿರಲಿಲ್ಲ, ಅಳುತ್ತಿರಲಿಲ್ಲ.

ರೋಗಿಯ ಚಿಕಿತ್ಸೆ ಸಾಗುತ್ತಲೇ ಇತ್ತು. ಊರಿನ ಜನರು ಅವರನ್ನು ನೋಡಲು ಬರುತ್ತಿದ್ದರು, ನೋಡಿ ನಿಟ್ಟುಸಿರು ಬಿಡುತ್ತಿದ್ದರು. “ ದೇವರೇ ಇವ

ರನ್ನು ಹೇಗಾದರೂ ಬದುಕಿಸಪ್ಪಾ" ಎಂದು ಮೊರೆಯಿಡುತ್ತಿದ್ದರು. ಅಂಥಾ ಪುಣ್ಯಾತ್ಮರನ್ನು ಕಳೆದುಕೊಳ್ಳಲು ಊರ ಜನರು ಸಿದ್ಧವಾಗಿರಲಿಲ್ಲ; ನಾರಾಯಣ ಭಟ್ಟರೂ ನಿಟ್ಟುಸಿರು ಬಿಟ್ಟು ಧೈರ್ಯ ಹೇಳಿದರು.

"ನೀವೇನೂ ಯೋಚಿಸಬೇಡಿ ಕಂಪೌಂಡರರೇ, ನಿಮ್ಮನ್ನು ಕೊಲ್ಲುವ ಪಾಪವನ್ನು ಕಟ್ಟಿಕೊಳ್ಳುವ ಧೈರ್ಯ ದೇವರಿಗೂ ಇರಲಾರದು. ಹಾಗೇನಾದರೂ ಮಾಡಿದರೆ ಸುತ್ತುಮುತ್ತಲಿನ ಊರ ಜನರ ವೈರವನ್ನು ಅವನು ಕಟ್ಟಿಕೊಳ್ಳಬೇಕಾದೀತು" ಅವರ ಮಾತಿನಲ್ಲಿ ಸತ್ಯವಿರದಿರಲಿಲ್ಲ.

"ಕಂಪೌಂಡರರನ್ನು ಒಂದು ತಿಂಗಳೊಳಗಾಗಿ ಗುಣಪಡಿಸಿದರೆ ನಿನಗೆ ಲಕ್ಷ ದೀಪದಾರತಿಯ ಸೇವೆ ಮಾಡಿಸುವೆ:" ಎಂದು ಸುಬ್ರಮಣ್ಯ ಸ್ವಾಮಿಗೆ ಹರಕೆ ಹೊತ್ತರು.

ಆದರೆ ವಿಧಿಯ ನಿಯಮ ಬೇರೆಯೇ ಇತ್ತು. ಅದೊಂದು ದಿನ ಗೋಪು ಆಸ್ಪತ್ರೆಯಲ್ಲಿ ರೋಗಿಗಳನ್ನು ವಿಚಾರಿಸುತ್ತಿದ್ದ; ಯಾರದೋ ಒಂದು ಕಾರು ಆಸ್ಪತ್ರೆಯೆದುರು ಬಂದು ನಿಂತಿತು. ನಡುವಯಸ್ಸಿನ ಗೃಹಸ್ಥರೊಬ್ಬರು ಕಾರಿನಿಂದಿಳಿದು ಆಸ್ಪತ್ರೆಗೆ ಬಂದರು. ಅವರ ಮುಖದ ಮೇಲೆ ಗಾಬರಿಯ ಕಳೆ ಇತ್ತು.

"ಏನಾಗಬೇಕು ಸ್ವಾಮೀ ?" ಎಂದು ಕೇಳಿದ ಗೋಪು.

"ಕಂಪೌಂಡರ ರಾಮರಾಯರ ಆಸ್ಪತ್ರೆ ಇದೇ ಅಲ್ಲವೇ ?"

"ಹೌದು, ಏಕೆ ?"

"ಅವರೆಲ್ಲಿದ್ದಾರೆ? ಅವರೊಡನೆ ಸ್ವಲ್ಪ ಅಗತ್ಯದ ಕೆಲಸವಿತ್ತು."

"ಅವರು ಮನೆಯಲ್ಲಿದ್ದಾರೆ."

"ಒಮ್ಮೆ ಅಲ್ಲಿಯ ವರೆಗೆ ಕರೆದುಕೊಂಡು ಹೋಗಿ. ಬಹಳ ಅಗತ್ಯದ ಕೆಲಸವಿದೆ."

ಗೋಪು ಬಂದವರನ್ನು ಕರೆದುಕೊಂಡು ಮನೆಯ ಕಡೆಗೆ ಹೊರಟ; ಈಗಿನ ಹೊಸ ಆಸ್ಪತ್ರೆಗೂ ಮನೆಗೂ ಒಂದು ಫರ್ಲಾಂಗಿನಷ್ಟು ಅಂತರವಿತ್ತು.

ರಾಮರಾಯರು ಮಲಗಿದಲ್ಲಿಯೇ ಹೊಸಬರನ್ನು ನೋಡಿದರು; ಗುರುತು ಹತ್ತಲಿಲ್ಲ. ಬಂದವರೂ ರಾಮರಾಯರನ್ನು ನೋಡಿದರು; ಅವರ ಸ್ಥಿತಿಯನ್ನು ಕಂಡು ಮಾತನಾಡಲು ಅನುಮಾನಿಸಿದರು.

“ ಕುಳಿತುಕೊಳ್ಳಿ ಸ್ವಾಮೀ, ಏನಾಗಬೇಕು ? ” ಎಂದು ರಾಮರಾಯರೇ ಮೊದಲು ಮಾತನಾಡಿಸಿದರು.

“ ನಿಮ್ಮಿಂದ ಒಂದು ಉಪಕಾರವಾಗಬೇಕು. ”

“ ಏನದು ? ” ಕ್ಷೀಣ ಮಂದಹಾಸದ ತೆರೆಯೊಂದು ಅವರ ಮುಖದ ಮೇಲೆ ಹಾದುಹೋಯಿತು. ‘ ತಾನು ಸಾಯಲು ಬಿದ್ದಿರುವಾಗಲೂ ತನ್ನಿಂದ ಉಪಕಾರ ಬಯಸುವವರಿದ್ದಾರಲ್ಲ ’ ಎಂದು ಮನಸ್ಸಿಗೆ ತುಂಬಾ ಸಮಾಧಾನ ವಾಯಿತು.

“ ನನ್ನ ಹೆಂಡತಿಗೆ ವಿಪರೀತ ಕಾಯಿಲೆ ಸ್ವಾಮೀ, ಸಾಯುವ ಸ್ಥಿತಿಯಲ್ಲಿ ದ್ದಾಳೆ; ಒಂದು ಬಾರಿ ಬಂದು ಪ್ರಾಣ ಉಳಿಸಿ ಕೊಡಬೇಕು. ”

“ ಏನು ಕಾಯಿಲೆ ? ”

“ ಅವಳು ಏಳು ತಿಂಗಳ ಗರ್ಭಿಣಿ, ಮೂರು ದಿನದಿಂದ ಒಂದೇಸವನೆ ಹೊಟ್ಟೆ ನೋವಿನಿಂದ ನರಳುತ್ತಿದ್ದಾಳೆ. ”

“ ಯಾವ ಊರು ? ”

“ ಪುತ್ತೂರು. ”

ರಾಮರಾಯರು ಒಮ್ಮೆಲೇ ಹಿಂದಕ್ಕೆ ಕುಸಿದರು. ಪುತ್ತೂರಿನಿಂದ ಇಲ್ಲಿಗೆ ಬರುವ ಅಗತ್ಯವೇನಿತ್ತು ? ಅವರಿಗೆ ಒಮ್ಮೆಲೇ ಏನೊಂದೂ ಹೊಳೆಯ ದಾಯಿತು.

“ ಪುತ್ತೂರಿನಲ್ಲಿ ಡಾಕ್ಟರರಿಲ್ಲವೇ ಸ್ವಾಮೀ ? ಸುಮ್ಮನೆ ಇಷ್ಟು ದೂರ ಏಕೆ ಬಂದಿರಿ ? ಅದರಲ್ಲೂ ನನಗೆ ತುಂಬಾ ಕಾಯಿಲೆ. ”

“ ಅವಳೇ ನಿಮ್ಮ ಹೆಸರು ಹೇಳಿದಳು ಸ್ವಾಮೀ. ಅವರನ್ನು ಕರೆದು ತನ್ನಿ ಎಂದು ಹಟ ಹಿಡಿದಳು. ಹಾಗಾಗಿ ಬರಬೇಕಾಯಿತು. ಕಾರು ತಂದಿ ದ್ದೇನೆ; ಹಾಗೆಯೇ ತಂದು ಹಿಂದಕ್ಕೆ ಬಿಟ್ಟು ಹೋಗುವೆ. ”

ಅವರೊಮ್ಮೆ ಕಣ್ಣು ಮುಚ್ಚಿದರು. ಹೃದಯದಲ್ಲಿ ದೊಡ್ಡ ಬಿರುಗಾಳಿ ಎದ್ದಿತು.

“ ಪುತ್ತೂರಿನಿಂದ ತನ್ನನ್ನು ಕರೆಕಳುಹಿಸಿದ್ದಾಳೆ— ಯಾರು ? ಶಾರದೆ ಇರಬಹುದೇ ? ಆದರೆ ಅವಳೇಕೆ ತನ್ನನ್ನು ಕರೆ ಕಳುಹಿಸಬೇಕು ? ಬೇರೆ ಯಾರಾದರೂ ಇರಬಹುದು—” ಆದರೆ ಹೃದಯ ಹೇಳುತ್ತಿತ್ತು ಆಕೆ ಶಾರದೆಯೇ

ಎಂದು. 'ನಿಮ್ಮ ಹೆಂಡತಿಯ ಹೆಸರೇನು ಎಂದು ಕೇಳಲೇ' ಎಂಬ ವಿಚಾರ ವಾಯಿತು. ಆದರೆ ಕೇಳಲಿಲ್ಲ. ಅದು ಸಭ್ಯತನವಲ್ಲವೆಂಬುದು ಅವರಿಗೆ ತಿಳಿದಿತ್ತು. ಮತ್ತೆ ಹೆಚ್ಚು ವಿಚಾರ ಮಾಡಲಿಲ್ಲ. ಹೊರಡುವ ನಿರ್ಧಾರ ಮಾಡಿಯೇ ಬಿಟ್ಟರು.

"ಗೋಪು, ನನ್ನ ಕೈಚೀಲವನ್ನು ಇವರ ಕೈಯಲ್ಲಿ ಕೊಡು!"

ಗೋಪುವಿಗೆ ರೇಗಿಹೋಯಿತು. "ಸಾಧ್ಯವಿಲ್ಲಣ್ಣ, ಈ ಸ್ಥಿತಿಯಲ್ಲಿ ನಿಮ್ಮನ್ನು ಹೋಗಗೊಡಲಾರೆ."

"ಬೇಗನೇ ಬರುವೆ ಗೋಪೂ, ಸುಮ್ಮನೆ ಹಟ ಮಾಡಬೇಡ."

ಅವರ ನಿರ್ಧಾರವನ್ನು ಬದಲಿಸಲು ಸಾಧ್ಯವಾಗಲಿಲ್ಲ; ಗೋಪು ಮನಸ್ಸಿಲ್ಲದ ಮನಸ್ಸಿನಿಂದ ಅವರ ಕೈಯಲ್ಲಿ ಕೈಚೀಲವನ್ನು ಕೊಟ್ಟ; ಅವರ ವಿಳಾಸವನ್ನೂ ತೆಗೆದುಕೊಳ್ಳಲು ಮರೆಯಲಿಲ್ಲ.

"ಹೋಗಿ ಬರುವೆ ಶಾಂತೂ" ಎಂದು ತಂಗಿಯ ಮುಖ ನೋಡಿದರು. ಅವಳ ಮುಖದ ಮೇಲೆ ಜೀವಕಳೆ ಇದ್ದಂತಿರಲಿಲ್ಲ. "ಇದು ಅಣ್ಣನ ಕೊನೆಯ ದರ್ಶನ" ಎಂದು ಹೇಳುತ್ತಿತ್ತು. ಅವರನ್ನು ತಡೆದು ನಿಲ್ಲಿಸಲು ಸಾಧ್ಯವಿಲ್ಲವೆಂದು ಅವಳಿಗೆ ತಿಳಿದಿತ್ತು. ಆದರೂ ಒಂದು ಮಾತು ಹೇಳಿದಳು—
"ಹೋಗಲೇ ಬೇಕೇ ಅಣ್ಣ?"

ಮುಂದೆ ಅವಳಿಂದ ಮಾತನಾಡಲಾಗಲಿಲ್ಲ. ಅವರು ಹೊರಟು ಹೋದರು; ಶಾಂತಿ ಕಲ್ಲು ಕಂಬದಂತೆ ಅವರು ಹೋಗುವುದನ್ನೇ ನೋಡುತ್ತ ನಿಂತಳು. ಎಷ್ಟು ಹೊತ್ತಾದರೂ ಅವಳಿಗೆ ಎಚ್ಚರವಾಗಲಿಲ್ಲ. 'ಅಣ್ಣ ಹೋದರು, ಅವರಿನ್ನು ಹಿಂದಿರುಗುವಂತಿಲ್ಲ' ಎಂದು ಬಾರಿಬಾರಿಗೆ ಅವಳ ಹೃದಯ ಪ್ರತಿಧ್ವನಿಸುತ್ತಿತ್ತು.

## ೨೮

"ರೋಹಿ, ನಾನೊಂದು ಮಾತು ಹೇಳುವೆ ಕೇಳುವಿಯಾ?"

"ಅದನ್ನು ಕೇಳಬೇಕೇ ಅಕ್ಕಾ?"

"ಹಾಗಾದರೆ ಕೇಳು, ನನ್ನ ಶಾರಿಯನ್ನು ನಿನ್ನ ಕೈಗೆ ಒಪ್ಪಿಸುವೆ. ನೋಡಿ

ಕೊಳ್ಳಬಲ್ಲೆಯಲ್ಲವೇ ? ” ಅಕ್ಕನ ಮಾತು ಕೇಳಿ ರೋಹಿಣಿಯ ಹೃದಯ ನಡುಗಿತು.

“ ಅಕ್ಕಾ, ಅಕ್ಕಾ.... ” ಎಂದು ಅವಳನ್ನು ತಬ್ಬಿಕೊಂಡು ಅತ್ತುಬಿಟ್ಟಳು.

“ ಹುಚ್ಚು ಹುಡುಗಿ, ನಿನ್ನಂತಹ ಮುದ್ದು ತಂಗಿಯನ್ನು ಬಿಟ್ಟು ಹೋಗುವೆನೇ ರೋಹಿ ನಾನು ? ಹೀಗೇ ಒಂದು ತೀರ್ಥಯಾತ್ರೆಗೆ ಹೋಗಿ ಬರುವ ಮನಸ್ಸಾಯಿತು. ”

ರೋಹಿಣಿ ಅವಳ ಮಾತನ್ನು ನಂಬಿದಳು; ಶಾಂತಿ ಮುಂದಿನ ಗಂಡಾಂತರವನ್ನು ಎದುರಿಸಲು ತಂಗಿಯನ್ನು ಸಿದ್ಧಗೊಳಿಸುವುದಕ್ಕಾಗಿಯೇ ಪೀಠಿಕೆಯನ್ನು ಹಾಕಿದ್ದಳು.

* * * *

ರಾಮರಾಯರು ಕಾರಿನಲ್ಲಿ ಪುತ್ತೂರಿಗೆ ಬಂದು ಮುಟ್ಟಿದರು; ಕಾರು ಒಂದು ದೊಡ್ಡ ಮಾಳಿಗೆಯ ಮನೆಯೆದುರು ಬಂದು ನಿಂತಿತು. ಯಜಮಾನರ ಜೊತೆಯಲ್ಲಿ ರಾಮರಾಯರು ಮೆಲ್ಲನೆ ಆಧರಿಸಿಕೊಂಡು ಮನೆಯ ಮೆಟ್ಟಲೇರಿದರು; ಒಳಗಡೆಯಿಂದ ಅಸ್ಪಷ್ಟವಾದ ನರಳುವಿಕೆಯ ದನಿ ಕೇಳಿಸುತ್ತಿತ್ತು; ಮೆಲ್ಲನೆ ರೋಗಿಯ ಬಳಿಗೆ ಹೋದರು.

ಸೊರಗಿ ಕಡ್ಡಿಯಾದ ಹೆಣ್ಣು ಜೀವವೊಂದು ಹಾಸಿಗೆಯ ಮೇಲೆ ಬಿದ್ದುಕೊಂಡಿತ್ತು. ರಾಮರಾಯರು ಅವಳ ಮುಖ ನೋಡಿದರು ; ಒಮ್ಮೆಗೇ ಎದೆ ಬಡಿತ ನಿಂತುಹೋಗುವಂತಾಯಿತು—ಶಾರದೆ !

“ ಛೀ, ಯಾರೋ ಏನೋ ! ಒಬ್ಬರ ಹಾಗೆ ಇನ್ನೊಬ್ಬರು ಇರುವುದಿಲ್ಲವೇ ? ” ಎಂದು ಮತ್ತೂ ಸಮಾಧಾನ ಮಾಡಿಕೊಂಡರು, ರೋಗಿಯ ಪರೀಕ್ಷೆ ಮಾಡಿದರು; ಒಂದು ಚೀಟಿಯಲ್ಲಿ ಏನನ್ನೊ ಬರೆದು ಕೊಟ್ಟು, “ ಕೂಡಲೇ ಈ ಇಂಜಕ್ಷನ್ನುಗಳನ್ನು ತೆಗೆದುಕೊಂಡು ಬನ್ನಿ ” ಎಂದರು. ರೋಗಿಯ ಪತಿ ಆ ಚೀಟಿಯನ್ನು ತೆಗೆದುಕೊಂಡು ಹೊರಟುಹೋದರು.

ಅವರು ಹೋದೊಡನೆ ರಾಮರಾಯರು ಮತ್ತೊಮ್ಮೆ ರೋಗಿಯ ಮುಖದ ಕಡೆಗೆ ಕಣ್ಣು ಹೊರಳಿಸಿದರು ; ಅವಳು ತನ್ನನ್ನು ಕಂಡು ನಗುತ್ತಿರುವಂತೆ ಭಾಸವಾಯಿತು. ಎಲುಬಿನ ಹಂದರವಾಗಿದ್ದಳು; ರಾಮರಾಯರು ಒಂದು ಕ್ಷಣ ಅವಳನ್ನು ನೋಡುತ್ತ ನಿಂತರು.

" ಗುರುತು ಹತ್ತಿತೇ ನನ್ನದು ? "

ಆ ಕ್ಷೀಣ ದನಿ ಅವರ ವಿಚಾರಗಳನ್ನೆಲ್ಲ ತಲೆಕೆಳಕೆ ಮಾಡಿತು. ಇನ್ನು ಅನುಮಾನಕ್ಕೆಡೆಯಿರಲಿಲ್ಲ—ಅವಳು ಶಾರದೆ.

" ಯಾರು, ಶಾರದೆಯೇ ನೀನು ? "

" ಹೌದು, ಬದುಕುವ ಆಸೆ ತೋರಲಿಲ್ಲ, ಸಾಯುವ ಕಾಲಕ್ಕೆ ನಿಮ್ಮನ್ನು ನೋಡುವ ಬಯಕೆಯಾಯಿತು, ಕರೆಸಿದೆ ; ನನ್ನನ್ನು ಕ್ಷಮಿಸಿ."

ಅವರು ಕೇಳುತ್ತಲೇ ಇದ್ದರು. ತನ್ನ ಕರುಳನ್ನು ಯಾರೋ ಒತ್ತಿ ಹಿಸುಕಿ ದಂತಾಯಿತು.

" ನೀವೆಷ್ಟು ಸೊರಗಿ ಹೋಗಿರುವಿರಿ ! ಶಾಂತಿ ಚೆನ್ನಾಗಿದ್ದಾಳೆಯೇ ? "

ಅವರು ಏನೆಂದು ಹೇಳಬೇಕು? ದೇಹದಲ್ಲಿ ಯಾವುದೋ ಶಕ್ತಿ ಸಂಚಾರ ವಾದಂತಾಯಿತು. ರೋಗಿಯ ಸಮೀಪಕ್ಕೆ ಬಂದರು ; ಅವಳು ಅಳುತ್ತಿದ್ದಳು; ಅವರಿಗೂ ಕಣ್ಣೀರು ಬಾರದಿರಲಿಲ್ಲ.

ಮೃದುವಾಗಿ ಅವಳ ಹಣೆಯ ಮೇಲೆ ಕೈಯಾಡಿಸಿದರು ; ಬಾಯಿಂದ ಆಡಲಾಗದ ಎಷ್ಟೋ ಮಾತುಗಳನ್ನು ಹೃದಯಗಳೇ ಆಡಿ ಮುಗಿಸಿದ್ದುವು ; ಬದುಕಿನ ಕೊನೆಯ ಗಳಿಗೆ, ಮಾತನಾಡುವಂಥಾದ್ದೇನೂ ಉಳಿದಿರಲಿಲ್ಲ.

" ಇಲ್ಲ ಶಾರೀ, ನಿನ್ನನ್ನು ಸಾಯಲು ಬಿಡುವುದಿಲ್ಲ ; ನನ್ನ ಪ್ರಾಣ ವನ್ನಾದರೂ ಕೊಟ್ಟು ನಿನ್ನನ್ನು ಉಳಿಸುವೆ. "

ಕ್ಷೀಣ ನಗುವೊಂದು ಅವಳ ಮುಖದ ಮೇಲೆ ಮೂಡಿತು ; ಮೆಲ್ಲನೆ ಅವರ ಕೈಯನ್ನು ತೆಗೆದುಕೊಂಡಳು , ತುಟಿಗೊತ್ತಿಕೊಂಡಳು, ಕಣ್ಣಿಗೊತ್ತಿ ಕೊಂಡಳು. ಹತ್ತು ವರುಷಗಳ ಹಿಂದಿನ ಬಯಕೆ ಇಂದು ಕೈಗೂಡಿತ್ತು; ಆದರೆ ಕಾಲ ಮಿಂಚಿ ಹೋಗಿತ್ತು ; ಇಬ್ಬರೂ ಸಾಯಲು ಹೊರಟಿದ್ದರು.

ಶಾರಿ ನೆಟ್ಟ ನೋಟದಿಂದ ಅವರನ್ನೇ ನೋಡಿದಳು.

" ಬದುಕನ್ನು ನಿಮ್ಮ ಜೊತೆಯಲ್ಲಿ ಕಳೆಯಬೇಕೆಂದು ಬಯಸಿದ್ದೆ, ಸಾಧ್ಯವಾಗಲಿಲ್ಲ ; ನಿಮ್ಮ ಸಾನ್ನಿಧ್ಯದಲ್ಲಿ ಸಾಯುವ ಭಾಗ್ಯವಾದರೂ ನನ್ನ ಪಾಲಿಗೆ ದೊರೆಯಿತು."

ಇದಕ್ಕುತ್ತರ ಕೊಡುವ ಶಕ್ತಿ ಅವರಲ್ಲಿದ್ದಿಲ್ಲ.

ಅವಳ ಪತಿ ಬೇಕಾದ್ದನ್ನೆಲ್ಲ ತೆಗೆದುಕೊಂಡು ಹಿಂದಿರುಗಿದ್ದರು. ಚಿಕಿತ್ಸೆ

ನಡೆಯಿತು; ಸಂಜೆಯಾಗುವಾಗ ನರಳುವಿಕೆ ಹೆಚ್ಚಾಯಿತು. ರಾತ್ರೆಯಿಡೀ ರಾಮರಾಯರು ಎಚ್ಚರವಾಗಿಯೇ ಇದ್ದರು; ತಮಗೆ ತಿಳಿದ ವಿದ್ಯೆಯನ್ನೆಲ್ಲ ವ್ಯಯಿಸಿ ಅವಳನ್ನು ಬದುಕಿಸಿದರು; ಮಗು ಹೊಟ್ಟೆಯಲ್ಲಿಯೇ ಸತ್ತು ಹೊರಗೆ ಬಂದಿತ್ತು.

ಆದರೆ ಬೆಳಗಾಗುವಾಗ ರಾಮರಾಯರ ಮೈಮೇಲೆ ಎಚ್ಚರವಿರಲಿಲ್ಲ; ಶಾರದೆಯ ಗಂಡ ಅವಸರವಾಗಿ ಡಾಕ್ಟರರನ್ನು ಕರೆತಂದರು. ಕಾಲ ಮಿಂಚಿ ಹೋಗಿತ್ತು; ರಾಮರಾಯರ ಆತ್ಮಜ್ಯೋತಿ ಆಗಲೇ ನಂದಿಹೋಗಿತ್ತು.

ಅವರು ಬೇರೆ ದಾರಿಯಿಲ್ಲದೆ ಶವಸಂಸ್ಕಾರದ ಸಿದ್ಧತೆ ಮಾಡಿದರು; ಒಂದು ಕ್ಷಣ ಕಳೆದು ಶಾರದೆ ಮೆಲ್ಲನೆ ಕಣ್ದೆರೆದಳು; ಅಕ್ಕಪಕ್ಕಕ್ಕೆ ಕಣ್ಣು ಹೊರಳಿಸಿದಳು. ಆದರೆ ಅವಳು ಬಯಸಿದ ವಸ್ತು ಕಣ್ಣಿಗೆ ಬೀಳಲಿಲ್ಲ. ಅವಳ ಪತಿ ಗಾಬರಿಯಾಗಿ ಹೆಂಡತಿಯ ಬಳಿಗೆ ಬಂದರು.

"ಶಾರೀ, ಶಾರೀ, ದೊಡ್ಡ ಪ್ರಮಾದವಾಯಿತು."

"ಏನಾಯಿತು? ಅವರೆಲ್ಲಿ?"

"ಶಾರೀ ರಾಮರಾಯರು ತೀರಿಕೊಂಡರು...."

ಮುಂದಿನ ಮಾತುಗಳನ್ನು ಕೇಳಲು ಅವಳು ಬದುಕಿರಲಿಲ್ಲ; ಕಣ್ಣುಗಳು ಮುಚ್ಚಿದುವು, ಕತ್ತು ಪಕ್ಕಕ್ಕೆ ಹೊರಳಿತು.

ಅವರು ಗಾಬರಿಯಾಗಿ ಹೆಂಡತಿಯನ್ನು ಹಿಡಿದು ಅಲುಗಾಡಿಸಿದರು. "ಶಾರೀ ಶಾರೀ" ಎಂದು ಕೂಗಾಡಿದರು; ಆದರೆ ಅವರ ಕರೆಗೆ ಓಗೊಡಲು ಅವಳು ಬದುಕಿರಲಿಲ್ಲ; ಆಗಲೇ ರಾಮರಾಯರ ಜೊತೆಗೆ ಹೊರಟು ಹೋಗಿದ್ದಳು.

ಬದುಕನ್ನು ಜೊತೆಯಾಗಿ ಕಳೆಯುವುದಾಗದಿದ್ದರೂ ಸಾವನ್ನು ಜೊತೆಯಾಗಿ ಅಪ್ಪಿಕೊಂಡರು.

* * * *

ಶಾಂತಿ ತನ್ನ ಕೋಣೆಯಲ್ಲಿ ಅತ್ತಿಂದಿತ್ತ ತಿರುಗಾಡುತ್ತಿದ್ದಳು; ಅವಳ ಮನಸ್ಸಿನ ನೆಮ್ಮದಿ ಕದಡಿ ಹೋಗಿತ್ತು. ಆಗಲೇ ಕತ್ತಲಾಗಿ ಹೋಗಿತ್ತು; ಬೆಳಗ್ಗೆ ಹೋದ ಅಣ್ಣ ಇನ್ನೂ ಬಂದಿರಲಿಲ್ಲ; ಒಂದು ರೀತಿಯ ಭಯ ಅವಳನ್ನಾವರಿಸಿತ್ತು, ಗೋಪುವನ್ನು ಕರೆದಳು.

" ಏನಕ್ಕಾ, ಏನಾಯಿತು? "

" ಅವರ ವಿಳಾಸ ತೆಗೆದುಕೊಡಿದ್ದೀಯಾ ಗೋಪೂ ? "

" ಹೌದು. "

" ನೊಡೋಣ, ತೆಗೆದುಕೊಂಡು ಬಾ. "

ಶಾಂತಿ ಅದನ್ನು ನೋಡಿದಳು ; ತಲೆ ತಿರುಗಿ ಬೀಳುವಂತಾಯಿತು, ಶಾರದೆಯ ವಿಳಾಸ.

" ಗೋಪೂ, ನಾಳೆಯೇ ಪುತ್ತೂರಿಗೆ ಹೋಗಿ ಬಾ. "

ಮರುದಿನ ಬೆಳಗಾಯಿತು; ಗೋಪು ಪುತ್ತೂರಿಗೆ ಹೋಗಿ ಬಂದ. ಶಾಂತಿ ತಮ್ಮನ ಬರವನ್ನೇ ಇದಿರು ನೋಡುತ್ತಿದ್ದಳು. ದೂರದಲ್ಲಿ ಅವನು ಒಬ್ಬಂಟಿಗನಾಗಿ ಬರುವುದನ್ನು ಕಂಡೊಡನೆ ಅವಳು ತತ್ತರಿಸಿ ಹೋದಳು. ಗೋಪು ಬಂದ ; ಅವನ ಮುಖ ಬಾಡಿ ಹೋಗಿತ್ತು.

" ಏನಾಯಿತು ಗೋಪೂ, ಅಣ್ಣ ಎಲ್ಲಿ ? " ಅವನ ಕಣ್ಣೀರೇ ಅವಳ ಪ್ರಶ್ನೆಯನ್ನು ಉತ್ತರಿಸಿತು. " ಅಣ್ಣ ಹೋದರು ಶಾಂತಕ್ಕಾ. "

ಶಾಂತಿ ಹೇಗೋ ಗೋಡೆಯನ್ನಾಧರಿಸಿಕೊಂಡು ನಿಂತಳು. ಕಣ್ಣೀರು ಸುರಿಯಲಿಲ್ಲ; ಅಳುವ ಚೈತನ್ಯವೂ ಅವಳಲ್ಲಿದ್ದಿಲ್ಲ.

ಶಾಂತಿಯ ಪಾಲಿಗೆ ಉಳಿದಿರುವ ಆಸರೆಯೊಂದೂ ಕಳೆದು ಹೋಗಿತ್ತು. ವಿಚಾರ ಮಾಡುವಂಥಾದ್ದೇನೂ ಉಳಿದಿರಲಿಲ್ಲ; ಎಲ್ಲವನ್ನೂ ಆಗಲೇ ನಿರ್ಧಾರ ಮಾಡಿಕೊಂಡಿದ್ದಳು.

ತಮ್ಮನನ್ನೂ ರೋಹಿಣಿ ಮತ್ತು ಮಕ್ಕಳನ್ನೂ ಕರೆದುಕೊಂಡು ಪುತ್ತೂರಿಗೆ ಹೋದಳು; ತನ್ನ ಆಸ್ತಿಯೆಲ್ಲವನ್ನೂ ತಮ್ಮನ ಹೆಸರಿಗೆ ಮಾಡಿದಳು. " ಗೋಪೂ, ನೀನಿನ್ನು ಆಸ್ತಿ ಮೇಲ್ವಿಚಾರಣೆಯನ್ನು ನೋಡಿಕೊಂಡು ಪುತ್ತೂರಿನಲ್ಲಿಯೇ ಇರು. ಮನಸ್ಸಿಲ್ಲವಾದರೂ ಅಣ್ಣನಿಗಾಗಿ ನೀನು ಪಂಜಕ್ಕೆ ಹೋಗಿದ್ದೆ; ಇನ್ನು ಅಲ್ಲಿರುವ ಆಗತ್ಯವಿಲ್ಲ. "

" ನೀನು ಎಲ್ಲಿರುವೆ ಅಕ್ಕಾ? "

' ನನ್ನನ್ನು ಅವರು ಕರೆಯುತ್ತಿದ್ದಾರೆ; ಇನ್ನು ಇಲ್ಲಿ ಉಳಿಯಲಾರೆ ' ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು. ಆದರೆ ತಮ್ಮನೆದುರು ಹಾಗೇನೂ ಹೇಳಲಿಲ್ಲ.

“ಹೀಗೇ ತೀರ್ಥಯಾತ್ರೆ ಮಾಡಿಕೊಂಡು ಬರುವೆ ಗೋಪೂ.” ಅವಳ ನಿರ್ಧಾರವನ್ನು ಬದಲಿಸುವುದು ಅಸಾಧ್ಯವೆನ್ನುವುದು ಅವನಿಗೆ ತಿಳಿದಿತ್ತು.

ರೋಹಿಣಿಯನ್ನು ಬಿಟ್ಟು ಹೋಗುವುದು ಅವಳ ಪಾಲಿಗೆ ತುಂಬಾ ಕಷ್ಟವಾಗಿತ್ತು. “ಶಾರಿಯನ್ನು ನಿನಗೆ ಕೊಟ್ಟಿರುವೆ ರೋಹೀ!” ಎಂದು ಅವಳನ್ನಪ್ಪಿಕೊಂಡು ಅತ್ತಳು.

“ನಿನಗೆ ಸ್ವಲ್ಪವೂ ಕರುಣೆಯಿಲ್ಲಕ್ಕಾ; ನೀನು ಹೋದರೆ ನನಗ್ಯಾರು ದಿಕ್ಕು.” ಶಾಂತಿಯ ಹೃದಯ ತತ್ತರಿಸಿತು. ಯಾವ ಮೋಹವೂ ಅವಳನ್ನು ತಡೆದು ನಿಲ್ಲಿಸುವಂತಿರಲಿಲ್ಲ. ‘ಅವಳಿಗೆ ಸ್ವಾಮಿಯ ಕರೆ ಬಂದಿತ್ತು.’

ಎಲ್ಲಾ ಬಂಧನವನ್ನು ಹರಿದೊಗೆದು ಶಾಂತಿ ಹೊರಟಳು; ಗೋಪು ಬಸ್ಸಿನ ವರೆಗೆ ಬರುವೆನೆಂದರೂ ಅವಳು ಒಪ್ಪಲಿಲ್ಲ. ರೋಹಿಣಿ ತುಂಬಾ ಅತ್ತಳು. ಅಕ್ಕನ ಪಾದದ ಮೇಲೆ ಹಣೆಯಿರಿಸಿ ನಮಸ್ಕಾರ ಮಾಡಿದಳು; ಮಕ್ಕಳೂ ನಮಸ್ಕರಿಸಿದುವು. ಹೃದಯವನ್ನು ಕಲ್ಲು ಮಾಡಿ ಅವಳು ಹೊರಟೇ ಹೋದಳು. ಮನೆಯಮೆಟ್ಟಿಲಲ್ಲಿ ನಿಂತು ಅಕ್ಕ ಕಣ್ಮರೆಯಾಗುವ ವರೆಗೆ ನೋಡುತ್ತ ನಿಂತ ಗೋಪೂ; ಅವನ ಕಣ್ಣುಗಳು ಹನಿಗೂಡಿದ್ದುವು. ತಾನು ನಿಜ ವಾಗಿಯೂ ಅನಾಥನಾದಂತೆ ಅನಿಸಿತು. ತಾಯಿಯನ್ನು ಕಳೆದುಕೊಂಡ ಅವ ನನ್ನು ಮಮತೆಯಿಂದ ಸಾಕಿದ ಅಕ್ಕ ಹೊರಟು ಹೋಗಿದ್ದಳು; ದೀರ್ಘವಾದ ನಿಟ್ಟುಸಿರು ಬಿಟ್ಟು ಒಳಕ್ಕೆ ನಡೆದ.

ಅಲ್ಲಿಯ ದೃಶ್ಯ ಅವನನ್ನು ದಂಗುಬಡಿಸಿತು; ರೋಹಿಣಿ ದೇವರ ಮೂರ್ತಿ ಯೆದುರು ಮಂಡಿಯೂರಿ ಕಣ್ಣೀರು ಸುರಿಸುತ್ತಿದ್ದಳು.

“ದೇವರೆ ಜನ್ಮಜನ್ಮಕ್ಕೂ ಆ ಅಕ್ಕನ ತಂಗಿಯಾಗುವ ಸೌಭಾಗ್ಯವನ್ನು ನನಗೆ ಕರುಣಿಸು, ಬೇರೇನನ್ನು ನಾನು ನಿನ್ನಿಂದ ಬಯಸುವುದಿಲ್ಲ.”





ತರುಣ ಲೇಖಕರಾದ ಶ್ರೀ ದಿನೇಶ ಅವರು ದಕ್ಷಿಣ ಕನ್ನಡದವರು. ಈಗಾಗಲೇ ಇವರು ಕನ್ನಡ ಸಾರಸ್ವತ ಕ್ಷೇತ್ರದಲ್ಲಿ 'ದೀಪದರ್ಶನಾದಿ' ಒಂದೆರಡು ಕಾದಂಬರೀ ರೂಪದಿಂದಲೂ ಹಲವಾರು ಪತ್ರಿಕೆಗಳಲ್ಲಿ ಲೇಖನ-ಕಥೆ ರೂಪದಿಂದಲೂ ತನ್ನ ಕೆಲವು ಕಿರಣಗಳನ್ನು ಚೆಲ್ಲಿದ್ದಾರೆ. ಇವರ ಬರವಣಿಗೆಯಲ್ಲಿ ಕಾಣುವ ವಿಚಾರಪರತೆ, ಭಾವಶೀಲತೆ ಕನ್ನಡಿಗರಿಗೆ ಒಳ್ಳೆಯ ಕೃತಿಗಳನ್ನು ನೀಡುವರೆಂಬ ಆಶೆಯನ್ನು ಮೊಳೆಯಿಸದಿರವು.

ಪ್ರಸ್ತುತ ಕಾದಂಬರಿ ರಾಮರಾಯರ ಮತ್ತು ಅವರ ತಂಗಿ ಶಾಂತಿಯ ಜೀವನದ ಭಾವಪೂರ್ಣ ಚಿತ್ರಣವಾಗಿದೆ. [illegible] ಅವರ ಪರಸ್ಪರ ಪ್ರೀತ್ಯಾದರ-ಸ್ವಭಾವ ವಿಶೇಷಗಳನ್ನು ಚಿತ್ರಿಸುತ್ತಾ ಲೇಖಕರು ಅವರ ಮನಃ ಪರಿವರ್ತನೆಯನ್ನು ಸ್ವ-ವಿಶಿಷ್ಟವಾದ ಶೈಲಿಯಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ.

ಆ ಅಣ್ಣ-ತಂಗಿಯರ ತಾರುಣ್ಯದ ಆಶೆ-ಆಕಾಂಕ್ಷೆಗಳು, ಪ್ರಣಯ ಭಂಗದ ಮತ್ತು ದೈವಾಘಾತದ ಪರಿಣಾಮವಾಗಿ ಅವರದು ದುರಂತ ಜೀವನವೆನಿಸಿದರೂ ಅವರ ಉದಾತ್ತ ಚಂತೆ ಓದುಗರ ಪ್ರಶಂಸೆಯನ್ನು ಪಡೆಯುತ್ತದೆ.